



# ದ್ರೌಪದೀ-ವಿದುರ




ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ವ್ಯಾಸಮಧ್ವಸಂಶೋಧನ ಪ್ರತಿಷ್ಠಾನ

# ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ (ರಿ.)

'Pajaka', 89/24, III Cross, Mount Joy Road, Hanumanthanagar, Bangalore - 560019
Website: www.vyasamadhwa.org Ph:26602802 — Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

೧. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ ೨೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.

೨. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ): ಈಗಾಗಲೇ ೪೦೦೦೦ ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.

೩. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.

೪. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು: ಪ್ರಕೃತ ೨೬ ವಿದ್ವಾಂಸರಿಗೆ ರೂ. ೧೫೦೦/-ಗಳನ್ನು ಸಲ್ಲಿಸುತ್ತಿದೆ.

೫. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.

೬ ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯವಿದ್ವಾಂಸರಿಗೆ ರೂ. ೧೨,೦೦೦/-ಗಳ 'ಶ್ರೀವ್ಯಾಸಮಧ್ವ-ಸೇವಾಪ್ರಶಸ್ತಿ'.

೭ ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.೩೦,೦೦೦/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.

೮. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.

೯. ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.೧೫,೦೦೦/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

## ವಿಶೇಷ ಸೂಚನೆ

1. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)" S/B A/c No. 0472101031491, Canara Bank Hanumanthanagar Branch, ಬೆಂಗಳೂರು ಅಥವಾ "Sri Vyasa Madhwa Research Foundation (R), S/B A/c No. 0472101044870, Canara Bank Hanumanthanagar Branch, ಬೆಂಗಳೂರು" - IFSC Code CNRB 0000472 ಈ ಹೆಸರಿಗೆ ನಗದು/ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.

2. ಎಲ್ಲ ಬಗೆಯ ದೇಣಿಗೆಗಳಿಗೂ ೮೦ಜಿ ಅನ್ವಯ ಆದಾಯ ತೆರಿಗೆ ವಿನಾಯಿತಿ ಸೌಲಭ್ಯವಿರುತ್ತದೆ.




# ದ್ರೌಪದೀ-ವಿದುರ

ಲೇಖಕರು :
ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ
ಡಾ. ಜಯಂತ ವ್ಯಾಸನಕೆರೆ

ಪ್ರಕಾಶನ :
ಐತರೇಯ ಪ್ರಕಾಶನ ವ್ಯಾಸನಕೆರೆ
ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ
'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,
ಹನುಮಂತನಗರ, ಬೆಂಗಳೂರು - ೫೬೦ ೦೧೯.

**Draupadi - Vidura** : Compiled by Vidyāvācaspati, Darśanaratnam, Pravacanācārya, Sacchāstravicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍita-ratnam, Vidyāvāridhi, Sacchāstrapravacanapravīṇa, Gītāratnākara, Tattvavācaspati, Jnānaratnākara (and Recipient of **Karnataka State Sanskrit Award-1999 & Karnataka Rajyotsava Award-2002, Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005) Dr.Vyasanakere Prabhanjanacharya**, M.A., Ph.D., D.Litt., Principal (Rtd.), Govt. First Grade College, K.R.Puram, Bangalore and **Dr. Jayanth P. Vyasanakere, M.Sc., Ph.D.**, and Published by **Aitareya Prakāśana Vyasanakere**, Publication - wing of **Śrī VyāsaMadhva Samśodhana Pratiṣṭhāna(R)**, No.89/24, 'Pājaka', Third Cross, Mount Joy Extension, Hanumanthanagar, Bangalore - 560019.

Pages: viii + 216 = 224

Phone : (080) 26611011 ; 26602802.

DRAUPADI- VIDURA

ISBN NO. 978-93-81826-77-5

Internet : www.vyasamadhwa.org

E-mail : info@vyasamadhwa.org



First Edition : 2017

Price : Rs.85/-

Typeset by :
**Śrī Vyāsa Madhva Samśodhana Pratiṣṭhāna(Regd),**

Printed at :
**Vāgartha**, N.R. Colony, Bangalore, Ph: 22427677

## ೨. ನೀತಿಕೋವಿದ ವಿದುರ ೧೩೦-೧೭೫



## ೩. ಪರಿಶಿಷ್ಟಗಳು ೧೭೬- ೨೧೬



★★★★★

# ವಿಷಯಾನುಕ್ರಮಣಿಕೆ

## ೧. ಬ್ರಹ್ಮವಾದಿನಿ ದ್ರೌಪದಿ ೧-೧೨೯

# ಮುನ್ನುಡಿ

ಮಹಾಭಾರತ ಹಾಗೂ ರಾಮಾಯಣ ಭಾರತೀಯ ಸಂಸ್ಕೃತಿಯ ದಿವ್ಯದರ್ಶನ ಮಾಡಿಸುವ ಲೋಕೋತ್ತರ ಕೃತಿಗಳು. ಅದರಲ್ಲೂ ಮಹಾಭಾರತ ಅನೇಕ ಕಾರಣಗಳಿಗಾಗಿ ವಿಶ್ವಸಾಹಿತ್ಯ ಕಂಡ ಅಮೋಘ, ಅಪೂರ್ವ ಕೃತಿ. ಕಥೆಯಾಗಿ ಅದು ಜಗತ್ತು ಕಂಡ ಅದ್ಭುತ. ಸಾಹಿತ್ಯವಾಗಿ ಕವಿಪಕ್ಷಿಗಳಿಗೆ ಆಶ್ರಯ ನೀಡಿರುವ ಕಲ್ಪದ್ರುಮ. ಭಗವದ್ಗೀತೆಯಂತಹ ಮಹೋನ್ನತ ಕೃತಿಯನ್ನು ನೀಡಿದ ಲೋಕೋತ್ತರ ತಾತ್ತ್ವಿಕ ಕೃತಿ. ಪುಣ್ಯ-ಪಾಪಗಳ, ಧರ್ಮಾಧರ್ಮಗಳ ಸಂಘರ್ಷದ ಕಥೆಯಾಗಿ ಅದು ಜಗತ್ತಿನಲ್ಲಿ ನಿತ್ಯ ನಡೆಯುವ ಹೋರಾಟದ ಕಥೆ. ರಾಜಕುಟುಂಬಕ್ಕೆ ಸಂಬಂಧಿಸಿದ ಕಥೆ ಎಂಬ ಕಾರಣದಿಂದ ರಾಜಕೀಯವಾಗಿಯೂ ಇದು ಅನುಪಮ. ಸಮಾಜಶಾಸ್ತ್ರ ಅರ್ಥಶಾಸ್ತ್ರ ಮೊದಲಾದ ಸಕಲ ಶಾಸ್ತ್ರಗಳ ಕೈಪಿಡಿ. ಇದರಲ್ಲಿಯ ಉಪಾಖ್ಯಾನಗಳು ಸಾರುವ ತತ್ತ್ವವು ಸಹ ನಾನಾ ಬಗೆಯದು. ಒಂದೇ ಮಾತಿನಲ್ಲಿ ಹೇಳುವುದಾದರೆ, ಇದು ಧರ್ಮಾದಿ ಸಮಸ್ತ ಪುರುಷಾರ್ಥಗಳ ವಿಶ್ವಕೋಶ, ಪುರುಷಾರ್ಥಕೋಶ. ಸಂಕೀರ್ಣತೆಯ ದೃಷ್ಟಿಯಿಂದಂತೂ ಇದಕ್ಕೆ ಸಾಟಿ ಎನ್ನಿಸುವ ಕೃತಿ ಊಹೆಗೂ ನಿಲುಕದು.

ಚಿತ್ರವಿಚಿತ್ರ ಪಾತ್ರಗಳಿಂದಾಗಿ ಮಹಾಭಾರತ ಮತ್ತೊಂದು ರೀತಿಯಲ್ಲೂ ವಿಶಿಷ್ಟವೆನ್ನಿಸುವ ಕೃತಿ. ಪಾಂಡವರಂತಹ ಸಜ್ಜನರು, ಕೌರವರಂತಹ ದುರ್ಜನರು. ಪಾಂಡವರ ಪಕ್ಷ ವಹಿಸುವ ಧಾರ್ಮಿಕರು ಒಂದು ಕಡೆಯಾದರೆ, ಕೌರವರ ಪಕ್ಷ ವಹಿಸುವಂತಹ ಅಧರ್ಮಿಗಳು ಮತ್ತೊಂದು ಕಡೆ. ಸ್ವತಃ ಧರ್ಮಿಷ್ಠರಾಗಿಯೂ ಕೌರವರಂತಹ ಅಧರ್ಮಿಗಳ ಪಕ್ಷ ಸೇರುವ ಭೀಷ್ಮದ್ರೋಣಾದಿಗಳು ಒಂದು ಕಡೆಯಾದರೆ, ಧರ್ಮಿಷ್ಠರೆಂಬ ಕಾರಣದಿಂದ ಪಾಂಡವರ ಪಕ್ಷ ವಹಿಸುವ ಘಟೋತ್ಕಜನಂತಹ ರಾಕ್ಷಸರು ಒಂದು ಕಡೆ. ಧೃತರಾಷ್ಟ್ರನ ವಂಶದ ಕುಡಿಯಾಗಿ ಪಾಂಡವರ ಪಕ್ಷಸೇರುವ ಯುಯುತ್ಸು ಒಂದು ಕಡೆಯಾದರೆ, ಕೌರವರ ಜೊತೆಯಲ್ಲಿಯೇ ಇದ್ದು ಪಾಂಡವರ ಹಿತೈಷಿ ಎನ್ನಿಸುವ ಆದರ್ಶ ವ್ಯಕ್ತಿಯಾದ ವಿದುರ ಇನ್ನೊಂದು ಕಡೆ.

ದೇವತೆಗಳು, ಋಷಿಗಳು, ಮುನಿಗಳು, ರಾಜರು, ಗಂಧರ್ವರು, ಯಕ್ಷರು, ರಾಕ್ಷಸರು, ಅಪ್ಸರೆಯರು ಮೊದಲಾಗಿ ಬಗೆಬಗೆಯ ಪಾತ್ರಗಳು ಇದರಲ್ಲಿ ಕಾಣಿಸಿಕೊಂಡು ಅಚ್ಚರಿ ಹುಟ್ಟಿಸುವವು. ಇಲ್ಲಿಯ ಪಾತ್ರ ವೈವಿಧ್ಯ ಅನನ್ಯವಾದುದು.

ಇದರಲ್ಲಿಯ ಮಹಿಳಾ ಪಾತ್ರಗಳೂ ಸಹ ಅದ್ಭುತ. ಬಾಲವಿಧವೆಯಾಗಿ ಐದು ಮಕ್ಕಳ ಜವಾಬ್ದಾರಿಯನ್ನು ಹೊತ್ತು, ಭೀಷ್ಮದ್ರೋಣಾದಿ ಹಿರಿಯರೆಲ್ಲ ಅಧರ್ಮದ ಪಕ್ಷಪಾತಿಗಳಾಗಿ ನಿಂತಾಗಲೂ ಕಂಗೆಡದೇ ಯಶಸ್ಸನ್ನು ಗಳಿಸಿದ ಕುಂತಿಯ ಪಾತ್ರ ಎಂತಹ ಆಧುನಿಕ ಮಹಿಳಾ ಹೋರಾಟವನ್ನೂ ಸಹ ಮೀರಿಸುವಂತಹುದು. ಶ್ರೀವ್ಯಾಸರು ಸಾರಿರುವಂತೆ ಕುಂತಿಯ ಧೈರ್ಯವೇ ಧೈರ್ಯ. ಕೆಟ್ಟ ಮಕ್ಕಳ ತಾಯಿಯಾಗಿ ಗಾಂಧಾರಿ ವರ್ತಿಸುವ ರೀತಿ ಅಮೋಘ. ಮಕ್ಕಳ ದುರ್ನಡತೆಯನ್ನು ಎಂದೂ ಮೆಚ್ಚದೆ, ಅದನ್ನು ಪ್ರತಿಭಟಿಸುತ್ತಲೇ ತನ್ನ ವಿಚಾರವಂತಿಕೆಯನ್ನು ಮೆರೆದ ಮಹಿಳೆ ಅವಳು. ಕೃಷ್ಣನ ಸೋದರಿಯಾದ ಸುಭದ್ರೆ, ಅಭಿಮನ್ಯುವಿನ ಪತ್ನಿಯಾದ ಉತ್ತರೆ – ಹೀಗೆ ಬಗೆಬಗೆಯ ಪಾತ್ರಗಳ ಸಾಗರ ಮಹಾಭಾರತ.

ಮಹಾಭಾರತದ ನೈಜಕಥೆಯೇ ಜನತೆಗೆ ತಲುಪಿಲ್ಲ ಎಂಬುದು ಅಚ್ಚರಿ ಎನ್ನಿಸಿದರೂ, ನಿಜ[೧]. ಕನ್ನಡ ಮೊದಲಾದ ಅನೇಕ ಭಾಷೆಗಳಲ್ಲಿ ಬಂದಿರುವ ಮಹಾಭಾರತ ಮೂಲಕ್ಕೆ ನಿಷ್ಠವಾದದ್ದಲ್ಲ. ಸಂಸ್ಕೃತದ ಭಾಸ ಮೊದಲಾದವರು ಮಹಾಭಾರತದ ನೈಜ ಚಿತ್ರಣವನ್ನು ನೀಡದೆ ಕಲ್ಪನೆಗೇ ಪ್ರಾಧಾನ್ಯವಿತ್ತರು; ಚಂಪೂಭಾರತ ಮೊದಲಾದವುಗಳು ಸಹ ಸಮಗ್ರತೆಯನ್ನು ಅಳವಡಿಸಿಕೊಂಡಿಲ್ಲ. ಕ್ಷೇಮೇಂದ್ರನ ಭಾರತಮಂಜರೀ ವಿಮರ್ಶಾತ್ಮಕ ಅಧ್ಯಯನವಲ್ಲ. ಮೂಲತಃ ಆಧ್ಯಾತ್ಮಿಕ ಕೃತಿಯಾದ ಮಹಾಭಾರತವನ್ನು ಲೌಕಿಕ ಎಂದು ಕರೆಯುವಲ್ಲಿಯೇ ಪಂಪನ ಮಿತಿ ಎದ್ದು ಕಾಣುವುದು; ರನ್ನ ಮೊದಲಾದವರ ಪರಿಕಲ್ಪನೆಯೂ ಇದಕ್ಕೆ ಭಿನ್ನವಾದದ್ದೇನಲ್ಲ. ತಮಗೆ ಆಶ್ರಯವಿತ್ತ ರಾಜಮಹಾರಾಜರ ಸಂತೋಷವನ್ನೇ ಪ್ರಧಾನವನ್ನಾಗಿ ಇರಿಸಿಕೊಂಡ ಕವಿಗಳ ಕೃತಿಗಳು ಮೂಲಕೃತಿಯ ಆಶಯವನ್ನು ಯಶಸ್ವಿಯಾಗಿ ಬಿಂಬಿಸುವಲ್ಲಿ ಸಹಜವಾಗಿಯೇ ಸೋತವು. ಕುಮಾರವ್ಯಾಸ ಮೊದಲಾದ ಕೆಲವು ಭಾಗವತ ಕವಿಗಳ ದೃಷ್ಟಿಯು ಸಹ ಮೂಲಮಹಾಭಾರತವನ್ನು ಪಂಪ ಮೊದಲಾದವರಿಂದ ಪ್ರಾರಂಭವಾಗಿದ್ದ ಪರಿಕಲ್ಪನೆಯ ಮುಂದುವರಿಕೆ ಮಾತ್ರ. ತೆಲುಗು, ತಮಿಳು ಮೊದಲಾದ ಭಾಷೆಗಳಲ್ಲೂ ಮಹಾಭಾರತ ಯಥಾವತ್ತಾಗಿ ಬಂದಿರುವ ನಿದರ್ಶನವಿಲ್ಲ. ಶ್ರೀಮನ್ಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಮಾತ್ರವೇ ಮಹಾಭಾರತದ ನೈಜ ಚಿತ್ರಣವನ್ನು ವಿಮರ್ಶೆ ಹಾಗೂ ಸಂಶೋಧನೆಯ ಹಿನ್ನೆಲೆಯಲ್ಲಿ ಕಾಣಲು ಸಾಧ್ಯ.

ಇನ್ನು ಮಹಾಭಾರತದ ಪಾತ್ರಗಳ ವಿಮರ್ಶೆಯಂತೂ ಮೂಲೇತರ ಕೃತಿಗಳನ್ನು ಆಧರಿಸಿದ್ದೇ ಹೆಚ್ಚು. ಮೂಲನಿಷ್ಠವಾಗಿ ಮಹಾಭಾರತದ ಪಾತ್ರಪ್ರಪಂಚವನ್ನು ವಿಶ್ಲೇಷಿಸಿರುವ ಕೃತಿಗಳು ತುಂಬಾ ಕಡಿಮೆ. ಬಂದಿರುವ ಒಂದೆರಡು ಕೃತಿಗಳು ಸಹ ಸಮಗ್ರತೆಯಲ್ಲಿ ಸೋತಿವೆ. ಇದರಿಂದಾಗಿ ಜನತೆ ಮಹಾಭಾರತದ ನೈಜಚಿತ್ರವನ್ನಾಗಲಿ, ಪಾತ್ರಪ್ರಪಂಚದ ವಾಸ್ತವ ಚಿತ್ರಣವನ್ನಾಗಲಿ ಪಡೆಯಲು ಸಾಧ್ಯವಾಗಿಲ್ಲ. ಈ ಹಿನ್ನೆಲೆಯಲ್ಲಿ ಆ ಕೊರತೆಯನ್ನು ತುಂಬುವ ಒಂದು ಪ್ರಯತ್ನವಾಗಿ ನಮ್ಮ ಪ್ರತಿಷ್ಠಾನ ಮಹಾಭಾರತದ ಪಾತ್ರಗಳ ವಿಶ್ಲೇಷಣೆಯನ್ನು ನೀಡುವ ಯೋಜನೆಯೊಂದನ್ನು ರೂಪಿಸಿಕೊಂಡಿದ್ದು, ಅದರ ಮೊದಲ ಸಂಪುಟವಾಗಿ ದ್ರೌಪದಿ ಹಾಗೂ ವಿದುರರ ಪಾತ್ರಗಳ ಚಿತ್ರಣವನ್ನು ಇದರಲ್ಲಿ ಕೊಡಲಾಗಿದೆ[೨].

ದ್ರೌಪದಿಯ ಪಾತ್ರ ಇಡೀ ಇತಿಹಾಸಪುರಾಣಗಳಲ್ಲಿಯೇ ವಿಶಿಷ್ಟವೆನ್ನಿಸುವ ಮಹೋನ್ನತ ಪಾತ್ರ. ಮಹಾಭಾರತದ ಕಥಾನಾಯಕಿಯಾಗಿ ಮೇಲ್ನೋಟಕ್ಕೆ ಐವರ ಪತ್ನಿ ಎನ್ನಿಸಿಯೂ ಸಹ ಪ್ರಾತಸ್ಮರಣೀಯ ಮಹಾಮಹಿಳೆ ಎನ್ನಿಸಿದ ಹಿರಿಮೆ ದ್ರೌಪದಿಯದು. ಅಗ್ನಿಕನ್ಯೆಯಾಗಿ

---

೧ ಈ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಮಧ್ವಭಾರತ' ಕೃತಿಯ ಪೀಠಿಕೆಯಲ್ಲೂ, ಕನ್ನಡ ಅನುವಾದ ಸಮೇತ 'ಮಹಾಭಾರತತಾತ್ಪರ್ಯನಿರ್ಣಯ'ದ ಪ್ರಸ್ತಾವನೆಯಲ್ಲೂ ಕಾಣಬಹುದು.

೨ ವಾಸ್ತವವಾಗಿ ಇವೆರಡೂ ಸಹ ಉಡುಪಿಯ ಪರ್ಯಾಯ ಕಾಣಿಯೂರು ಮಠದ ಯೋಜನೆಗಾಗಿ ಸಿದ್ಧಪಡಿಸಿದ ಲೇಖನಗಳು. ಅವು ಪ್ರಕಟವೂ ಆಗಿರುವುದನ್ನು ಕೆಲವು ಪುಸ್ತಕ ಮಳಿಗೆಗಳಲ್ಲಿ ಕಂಡಿದ್ದೇನೆ. ಆದರೆ, ಅದರಲ್ಲಿ ಸಂಯೋಜಕರ ಅಚಾತುರ್ಯದಿಂದಾಗಿ ಇವೆರಡೂ ಸಹ ಅಡಿಟಿಪ್ಪಣಿಗಳ ಹೊರತಾಗಿ ಪ್ರಕಾಶನಗೊಂಡು, ಲೇಖನಗಳ ಮೂಲ ಆಶಯಕ್ಕೆ ಧಕ್ಕೆ ಉಂಟಾಗಿತ್ತು. ಆ ಕಾರಣದಿಂದ ಪರಮಪೂಜ್ಯ ಶ್ರೀಕಾಣಿಯೂರು ಮಠಾಧೀಶರಾದ ಶ್ರೀವಿದ್ಯಾವಲ್ಲಭತೀರ್ಥಶ್ರೀಪಾದರ ಅನುಮತಿಯೊಂದಿಗೆ ಹೀಗೆ ಪ್ರತ್ಯೇಕವಾಗಿ ಇವು ಪ್ರಕಟವಾಗುತ್ತಿವೆ. ಪರಮಪೂಜ್ಯಶ್ರೀಪಾದರಿಗೆ ನಮ್ಮ ಕೃತಜ್ಞತಾಪೂರ್ವಕ ನಮಸ್ಕಾರಗಳು.

ಅವತರಿಸಿ, ದ್ರುಪದನಂತಹ ಪ್ರತಿಷ್ಠಿತ ರಾಜನ ಪುತ್ರಿಯಾಗಿ, ಲೋಕೋತ್ತರ ಮಹಾವೀರರಾದ ಪಾಂಡವರ ಪತ್ನಿಯಾಗಿ ದ್ರೌಪದಿ ನಿರ್ವಹಿಸುವ ಕಾರ್ಯ ಅನನ್ಯ. ಮಹಾಭಾರತದುದ್ದಕ್ಕೂ ಕಂಡುಬರುವ ವಿಶಿಷ್ಟ ಪಾತ್ರ ಇದು. ಒಂದು ದೃಷ್ಟಿಯಿಂದ ಮಹಾಭಾರತಕ್ಕೆ ದ್ರೌಪದಿಯೇ ಕೇಂದ್ರಬಿಂದು ಎನ್ನಬಹುದು. ಪುರುಷರಲ್ಲಿ ಆ ಸ್ಥಾನ ಭೀಮಸೇನನದಾದರೆ, ಸ್ತ್ರೀಯರಲ್ಲಿ ದ್ರೌಪದಿಯದಾಗಿದೆ.

ಕೃಷ್ಣನಿಗೆ ಅತ್ಯಂತಪ್ರಿಯಳಾದ ಭಕ್ತೆ ಎನ್ನಿಸಿದ್ದು ದ್ರೌಪದಿಯ ಅಸಾಮಾನ್ಯ ಸಾಧನೆ. ಭಗವಂತ ತನ್ನ ಭಕ್ತವರ್ಗಕ್ಕೆ ಸೇರಿದ ಸ್ತ್ರೀಯರನ್ನು ಎಷ್ಟು ಪ್ರೀತಿಯಿಂದ ಸಂರಕ್ಷಿಸುವನು ಎಂಬುದಕ್ಕೆ ದ್ರೌಪದಿಯ ಪ್ರಸಂಗ ನಿದರ್ಶನ. ಭೀಷ್ಮದ್ರೋಣರಂತಹ ಪ್ರಾಜ್ಞಶಿರೋಮಣಿಗಳು ಸಹ ತುಂಬಿದ ಸಭೆಯಲ್ಲಿ ದ್ರೌಪದಿಯ ಮಾರ್ಮಿಕ ಪ್ರಶ್ನೆಗೆ ಉತ್ತರ ನೀಡುವಲ್ಲಿ ಸೋಲುವರು ಎಂಬಲ್ಲಿ ದ್ರೌಪದಿಯ ವಿದ್ವತ್ತು ಎದ್ದುಕಾಣುವುದು. ಬ್ರಹ್ಮವಾದಿನೀ ಎಂದು ಮಹಾಭಾರತ ಕೊಂಡಾಡಿರುವ ಪಾತ್ರ ದ್ರೌಪದಿಯದು. ಹಾಗೆ ನೋಡಿದರೆ, ವೇದಮಂತ್ರಗಳ ದರ್ಶನ ಮಾಡಿದ ಋಷಿಕೆಯರ ಸಂಖ್ಯೆ ದೊಡ್ಡದಾಗಿಯೇ ಇದೆ. ಆದರೆ, ದ್ರೌಪದಿಯಂತೆ ಅವರು ಯಾರೂ ಸಹ ಇತಿಹಾಸದಲ್ಲಿ ಅಪ್ರತಿಮವೆನ್ನಿಸುವ ಪಾತ್ರನಿರ್ವಹಿಸಿದ ದಾಖಲೆ ದೊರೆಯುವುದಿಲ್ಲ. ಆ ಹಿರಿಮೆ ದ್ರೌಪದಿಗಷ್ಟೇ ಮೀಸಲು.

ಇನ್ನು ವಿದುರ. ಪಾಂಡವರಲ್ಲಿ ಕೌರವರ ದೌರ್ಜನ್ಯವನ್ನು ಸರ್ವಾತ್ಮನಾ ಪ್ರತಿಭಟಿಸಿದ ಮಹಿಳೆಯಾಗಿ ದ್ರೌಪದಿ ಚಿತ್ರಿತವಾಗಿದ್ದರೆ, ಕೌರವರ ಗುಂಪಿನಲ್ಲಿ ಒಬ್ಬನಾಗಿದ್ದುಕೊಂಡೇ ಅವರ ಎಲ್ಲ ಅನ್ಯಾಯದ ಕಾರ್ಯಗಳನ್ನು ಸಹ ಉಗ್ರವಾಗಿ, ನೇರವಾಗಿ, ಸ್ಪಷ್ಟವಾಗಿ ಪ್ರತಿಭಟಿಸಿದ ಧೀರೋದಾತ್ತ ವ್ಯಕ್ತಿತ್ವ ವಿದುರನದು. ತನ್ನ ಹುಟ್ಟಿಗಾಗಿ ಕರ್ಣನಂತೆ ಕೊರಗದೆ, ಕೀಳರಿಮೆಯ ಸೋಂಕನ್ನೂ ಅಂಟಿಸಿಕೊಳ್ಳದೇ, ತನ್ನ ಇತಿಮಿತಿಯಲ್ಲಿಯೇ ಚಿರಸ್ಥಾಯಿಯೆನ್ನಿಸಿರುವ ಧರ್ಮಪ್ರಜ್ಞೆಯ ಸಂಕೇತವಾಗಿ ಮೂಡಿಬಂದ ಹಿರಿಮೆ ವಿದುರನದು. ಆ ಕಾಲದ ವರ್ಣವ್ಯವಸ್ಥೆಯಲ್ಲಿ ಶೂದ್ರನಾಗಿದ್ದರೂ, ಬ್ರಹ್ಮದರ್ಶಿಗಳಾದ ಋಷಿಮುನಿಗಳಂತೆ ಧಾರ್ಮಿಕ ಪ್ರಜ್ಞೆಯನ್ನು ಪ್ರತಿಹಂತದಲ್ಲೂ ಮೆರೆದ ಪರಿಪಕ್ವವಾದ ಪುಣ್ಯಚೇತನ ವಿದುರ.

ಜನತೆಗೆ ದ್ರೌಪದಿಯ ಪಾತ್ರ ಹೊಸದೇನೂ ಅಲ್ಲ. ಆದರೆ, ಅವರು ತಿಳಿದಿರುವ ದ್ರೌಪದಿಯ ಚಿತ್ರ ಪಂಪಭಾರತ, ಕುಮಾರವ್ಯಾಸಭಾರತ ಮೊದಲಾದ ಅರ್ವಾಚೀನ ಭಾರತಗಳ ಚಿತ್ರವೇ ಹೊರತು, ವ್ಯಾಸಭಾರತದ ಚಿತ್ರವಲ್ಲ. ಇತ್ತೀಚಿನ ಜನಗಳಿಗಂತೂ ಸೃಜನಶೀಲತೆಯ ಹೆಸರಿನಲ್ಲಿ ಬಂದಿರುವ ವಿಕೃತ ಭಾರತದ ದ್ರೌಪದಿಯ ಪಾತ್ರವೇ ಹೆಚ್ಚು ಪರಿಚಿತ. ಇನ್ನೂ ಕೆಲವರಿಗಂತೂ ದೂರದರ್ಶನದ ದ್ರೌಪದಿಯ ಪಾತ್ರವಷ್ಟೇ ಗೊತ್ತು. ದ್ರೌಪದಿಯ ಪಾತ್ರದ ಬಗ್ಗೆ ವಿಮರ್ಶೆ ನಡೆದಿರುವುದು ಸಹ ಮೂಲಭಾರತವನ್ನಾಧರಿಸಿ ಏನಲ್ಲ. ಬೇರೆ ಬೇರೆ ಭಾರತಗಳಲ್ಲಿ ಬಂದಿರುವ ದ್ರೌಪದಿಯ ಪಾತ್ರದ ವಿಮರ್ಶೆಯಷ್ಟೇ ನಡೆದಿದೆ. ಅದು ವ್ಯಾಸಭಾರತದ ದ್ರೌಪದಿಗೆ ಸಲ್ಲುವ ಗೌರವವಲ್ಲ. ನಿಜಕ್ಕೂ ವ್ಯಾಸಭಾರತದ ದ್ರೌಪದಿ ಜಗತ್ತು ಕಂಡ ಅನುಪಮ ವೀರವನಿತೆ, ಬ್ರಹ್ಮವಾದಿನಿ. ತತ್ತ್ವನಿಷ್ಠೆಯ ಮತ್ತೊಂದು ಹೆಸರು. ಪುರುಷಪಾತ್ರಗಳಲ್ಲಿ ಭೀಮಸೇನ ಹೇಗೋ, ಸ್ತ್ರೀಪಾತ್ರಗಳಲ್ಲಿ ದ್ರೌಪದಿ ಹಾಗೆ.

ಇಲ್ಲಿಯ ದ್ರೌಪದಿಯ ಪಾತ್ರದ ಚಿತ್ರಣ ಮಹಾಭಾರತವನ್ನು ಹಾಗೂ ಮಹಾಭಾರತದ ಯಥಾರ್ಥಚಿತ್ರವನ್ನು ಕೊಟ್ಟ ಶ್ರೀಮನ್ಮಧ್ವಾಚಾರ್ಯರ ಮಹಾಭಾರತ–

ತಾತ್ಪರ್ಯನಿರ್ಣಯವನ್ನು ಆಧರಿಸಿದೆ. ಸೃಜನಶೀಲತೆ, ವಿಚಾರವಾದಗಳ ಹೆಸರಿನಲ್ಲಿ ಮೂಲ ಗ್ರಂಥದ ಆಶಯವನ್ನು ತಿರುಚುವ ಕೃತಿಗಳೇ ಹೆಚ್ಚಿನವು; ನೈಜ ಭಾರತದ ದ್ರೌಪದೀ ಪಾತ್ರದ ವಿಶ್ಲೇಷಣೆ ಇಲ್ಲಿದೆ. ಅನಂತರದ ಭಾರತದ ಕಥೆಗಳಲ್ಲಿ ನಿಜವಾದ ಭಾರತದ ಕಥೆಯೇ ವಿಕೃತವಾಗಿ ಚಿತ್ರಿತವಾಗಿದೆ. ಅವುಗಳನ್ನಾಧರಿಸಿದ ವಿಮರ್ಶೆಯ ಹಿನ್ನೆಲೆಯಲ್ಲಿ ಜನಗಳಿಗೆ ಮೂಲಭಾರತದ ಪಾತ್ರಗಳೇ ಹಾಗೆ ಎಂಬ ತಪ್ಪು ಭಾವನೆ ಉಂಟಾಗಿದೆ. ಅದನ್ನು ಪರಿಹರಿಸುವ ನಿಟ್ಟಿನಲ್ಲಿ ಯಾವ ಸಮರ್ಥ ಪ್ರಯತ್ನವೂ ನಡೆದಿಲ್ಲ ಎಂಬುದು ವಿಷಾದಕರವಾದ ಸಂಗತಿ. ಇಂದಿನವರು ಒಪ್ಪುವರೋ ಬಿಡುವರೋ, ಅದು ಮುಖ್ಯವಲ್ಲ. ವಸ್ತುಸ್ಥಿತಿ ಏನೆಂದು ತಿಳಿಯುವುದು ತತ್ತ್ವಾನ್ವೇಷಣೆಯ ಮೊದಲ ಹೆಜ್ಜೆ. ಇಂದಿನವರಿಗೆ ರುಚಿಸಲಿ, ಬಿಡಲಿ, ಮಹಾಭಾರತ ಸರ್ವಥಾ ಲೌಕಿಕ ಕಥೆಯಲ್ಲ. ಅದರಲ್ಲಿ ದೈವೀಘಟನೆಗಳು ತುಂಬಿವೆ. ದೇವತೆಗಳೂ ಪಾತ್ರ ನಿರ್ವಹಿಸಿರುವರು. ಪರದೇವತೆಯಾದ ಶ್ರೀಕೃಷ್ಣ ಪ್ರಧಾನವಾಗಿಯೇ ಅದರಲ್ಲಿ ಕಂಡುಬರುವನು. ಇವುಗಳನ್ನು ಹೊರತುಪಡಿಸಿ ಮಹಾಭಾರತವನ್ನು ನೋಡುವ ಜನ ಇರಬಹುದು; ಆದರೆ, ವಾಸ್ತವವಾಗಿಯೇ ಮಹಾಭಾರತದ ಕಥೆಯನ್ನು ಸಹ ತಿಳಿಯುವ ಬಯಕೆಯ ಜನರೂ ಇರುವರು ಅಲ್ಲವೆ? ಅಂತಹ ಜನರಿಗೆ ವಾಸ್ತವಭಾರತ ತಿಳಿಯಲಿ ಎಂಬ ಕಾರಣದಿಂದ ಈ ಕಾರ್ಯವನ್ನು ನಮ್ಮ ಪ್ರಕಾಶನ ಕೈಗೆತ್ತಿಕೊಂಡಿದೆ. ಸೃಜನಶೀಲತೆ ಮೊದಲಾದ ಹೆಸರಿನಲ್ಲಿ ಮಹಾಭಾರತವನ್ನು ವಿಕೃತಗೊಳಿಸಿದವರ ಇತಿಮಿತಿಗಳು ಅರ್ಥವಾಗಲು ಸಹ ನೈಜಭಾರತದ ಪರಿಚಯ ಅತ್ಯಗತ್ಯ. ಹಾಗೆ ನೋಡಿದರೆ, ಮಹಾಭಾರತಕ್ಕೆ ನ್ಯಾಯಸಲ್ಲಿಸುವಂತೆ ರಚಿತವಾದ ಕೃತಿಗಳೇ ಇಲ್ಲ ಎನ್ನಬಹುದು. ಹಾಗೆ ಮಹಾಭಾರತವನ್ನು ಇದ್ದಂತೆಯೇ ಹೇಳುವ ಪ್ರಯತ್ನ ಮಾಡಿದ ಕೆಲವು ಕೃತಿಗಳೂ ಸಹ ಸ್ವಂತ ದೃಷ್ಟಿಯನ್ನು ಪ್ರಧಾನವಾಗಿರಿಸಿಕೊಂಡು, ಅದಕ್ಕೆ ತಕ್ಕಂತೆ ಅದನ್ನು ವಿಕೃತಗೊಳಿಸಲಾಗಿದೆ. ಇಲ್ಲಿ ಯಾವ ಹೊಂದಾಣಿಕೆಯನ್ನು ಮಾಡಿಕೊಳ್ಳದೆ ಮಹಾಭಾರತ ನೀಡಿರುವ ಚಿತ್ರಣವನ್ನು ಅಷ್ಟೇ ನೀಡಲಾಗಿದೆ. ಇದರಿಂದಾಗಿ ವಸ್ತುಸ್ಥಿತಿಯನ್ನು ತಿಳಿಯುವ ಒಂದು ವರ್ಗದ ಜಿಜ್ಞಾಸು ಜನತೆಗಾದರೂ ನೈಜ ವಿಷಯ ತಿಳಿಯುವಂತಾಗಲಿ ಎಂಬ ಕಳಕಳಿ ನಮ್ಮದು.

ದ್ರೌಪದಿಯ ಪಾತ್ರದ ಚಿತ್ರಣದ ಲೇಖನ ನನ್ನದು; ವಿದುರನ ಪಾತ್ರದ ಚಿತ್ರಣವನ್ನು ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಮಾಡಿರುವನು. ಇದರಂತೆ ಮಹಾಭಾರತದ ಇತರ ಪಾತ್ರಗಳ ಚಿತ್ರಣ ಮುಂದಿನ ಸಂಪುಟಗಳಲ್ಲಿ ಬರಲಿದೆ.

ಪ್ರಸ್ತುತ ಸಂಪುಟದ ಪ್ರಕಾಶನವನ್ನು ಪ್ರಾಯೋಜಿಸಿದವರು ಶ್ರೀಹರಿವಾಯುಗಳ ವಿಶೇಷಭಕ್ತರೂ, ತತ್ತ್ವಪ್ರಸಾರಕಾರ್ಯದಲ್ಲಿ ತುಂಬಾ ಆಸಕ್ತರೂ ಆದ **ಶ್ರೀಮತಿ ಶ್ರುತಿ ಹಾಗೂ ಶ್ರೀ ವೈ.ಆರ್. ಪ್ರದೀಪ್ ದಂಪತಿಗಳು**. ನಮ್ಮ ಪ್ರತಿಷ್ಠಾನದ ಅನೇಕ ಕಾರ್ಯಗಳಿಗೆ ಇವರ ಸಹಕಾರ ಅಪಾರವಾದುದು. ಡಿ.ಟಿ.ಪಿ ಕಾರ್ಯ ನಮ್ಮ ಪ್ರತಿಷ್ಠಾನದ್ದು. ಸಹಕಾರ ಶ್ರೀಪ್ರವೀಣಕಟ್ಟಿ ಚಿ. ಆನಂದಪದ್ಮನಾಭ (ಸುದರ್ಶನ), ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಹಾಗೂ ನನ್ನ ಪತ್ನಿ ಶ್ರೀಮತಿ ವಿ. ಪಿ. ಜಯಶ್ರೀ ಇವರದು. ಮುದ್ರಣಕಾರ್ಯ ಬೆಂಗಳೂರಿನ ವಾಗರ್ಥ ಅವರದು. ಇವರೆಲ್ಲರಿಗೂ ನಮ್ಮ ಪ್ರತಿಷ್ಠಾನ ಋಣಿ.

ಬೆಂಗಳೂರು – ೧೪.೦೮.೨೦೧೭ **ವ್ಯಾಸನಕೆರೆ ಪ್ರಭಂಜನಾಚಾರ್ಯ**
ಹೇಮಲಂಬ – ಶ್ರೀಕೃಷ್ಣಜನ್ಮಾಷ್ಟಮೀ

# ಬ್ರಹ್ಮವಾದಿನಿ ದ್ರೌಪದಿ

ಮಹಾಭಾರತವು ವಾಙ್ಮಯಪ್ರಪಂಚದ ಅಚ್ಚರಿ. ಜಾಗತಿಕವಾಗಿಯೂ ಅದು ವಿಶ್ವ ದಾಖಲಿಸಿರುವ ಬೃಹತ್ಕೃತಿ; ಅನುಪಮ ಕಾವ್ಯ; ರೋಚಕ ಕಥೆ ಮೊದಲಾದ ಸಕಲ ಬಗೆಯ ಹಿರಿಮೆಯನ್ನು ಹೊಂದಿರುವ ಇದು ಮೂಲತಃ ಇತಿಹಾಸ. ತಾತ್ವಿಕವಾಗಿ ಇದು ಲೋಕ ಕಂಡ ಅದ್ವಿತೀಯವಾದ ಆಧ್ಯಾತ್ಮಿಕ ಕೃತಿ. ಪಾತ್ರವೈವಿಧ್ಯಕ್ಕಂತೂ ಮಹಾಭಾರತ ಮತ್ತೊಂದು ಹೆಸರು. ವೈವಿಧ್ಯದಂತೆ ಸಂಕೀರ್ಣತೆ ಅಲ್ಲಿಯ ಪಾತ್ರಗಳ ಇನ್ನೊಂದು ಮುಖ.

ಪಾಂಡವರಂತಹ ದೈವೀಸಂಪತ್ತಿನ ಪಾತ್ರಗಳು ಒಂದಡೆಯದಾದರೆ, ಕೌರವರಂತಹ ಆಸುರೀಸಂಪತ್ತಿನ ಪಾತ್ರಗಳು ಮತ್ತೊಂದೆಡೆ. ಸ್ತ್ರೀಪಾತ್ರಗಳಲ್ಲೂ ಸಹ ಅಪಾರ ವೈವಿಧ್ಯ. ಕುಂತಿ, ಗಾಂಧಾರಿ ಮೊದಲಾದ ಸಾತ್ವಿಕ ಪಾತ್ರಗಳು ಒಂದೆಡೆಯಾದರೆ, ದುರ್ಯೋಧನ ಮೊದಲಾದವರ ಪತ್ನಿಯರು ಮೊದಲಾದ ತಾಮಸ ಪಾತ್ರಗಳು ಇನ್ನೊಂದೆಡೆ. ದ್ರೌಪದಿಯ ಪಾತ್ರ ಮಾತ್ರ ವಿಶ್ವಸಾಹಿತ್ಯದಲ್ಲಿಯೇ ಅಪೂರ್ವವೆನ್ನಿಸುವ ವಿಶಿಷ್ಟ ಪಾತ್ರ.

ದ್ರೌಪದಿಯ ಪಾತ್ರ ಸನಾತನ ಪರಂಪರೆ ದಾಖಲಿಸಿರುವ ಅತ್ಯಂತ ವಿಲಕ್ಷಣವಾದ ಪಾತ್ರ. ಪ್ರತಿನಿತ್ಯದ ಪ್ರಾತಃಸ್ಮರಣೆಗೆ ವಿಹಿತವಾಗಿರುವ ಪಂಚ ಮಹಾಪತಿವ್ರತೆಯರಲ್ಲಿ ದ್ರೌಪದಿಯ ಹೆಸರಿದೆ[೧]. ಅಹಲ್ಯೆ ಮೊದಲಾದವರ ಪಾತಿವ್ರತ್ಯ ಬೇರೆ ಬಗೆಯದು. ಅವರೆಲ್ಲರೂ ಸಹ ಒಬ್ಬ ಪತಿಯನ್ನೇ ಹೊಂದಿ ಇತರ ಅನುಪಮ ಸಾಧನೆಯಿಂದಾಗಿ ಆ ಸಾಲಿಗೆ ಸೇರಿದವರು.

ದ್ರೌಪದಿಯ ಪಾತ್ರ ಹಾಗಲ್ಲ; ಇವಳು ಲೋಕದ ದೃಷ್ಟಿಯಲ್ಲಿ ಐವರು ಪತಿಯರನ್ನು ಹೊಂದಿದ್ದ ಮಹಿಳೆ. ಆದರೆ, ಅಪ್ರತಿಮ ಮಹಾಪತಿವ್ರತೆ. ವಿರೋಧವೆನ್ನಿಸಿದರೂ ಸತ್ಯವೆನ್ನಿಸುವ ಅಪೂರ್ವತೆ ಇದರಲ್ಲಿದೆ.

ಪಾರ್ಷತೀ, ದ್ರೌಪದೀ, ಯಾಜ್ಞಸೇನೀ, ಪಾಂಚಾಲೀ ಮೊದಲಾದ ಇತರ ಹೆಸರುಗಳು ಸಹ ದ್ರೌಪದಿಗೆ ಉಂಟು. ಕೃಷ್ಣಾ ಎಂಬುದು ಮಾತ್ರ ಇಟ್ಟ ಹೆಸರು. ತಂದೆ ದ್ರುಪದನಿಂದಾಗಿ ದ್ರೌಪದೀ; ತಂದೆ ಜನಕನಿಂದಾಗಿ ಜಾನಕಿಯಂತೆ. ಪಿತಾಮಹನಾದ ಪೃಷತ ಎಂಬ ರಾಜನಿಂದಾಗಿ ಪಾರ್ಷತೀ, ದ್ರುಪದನ ಮತ್ತೊಂದು ಹೆಸರಾದ ಯಜ್ಞಸೇನ ಎಂಬುದರಿಂದಾಗಿ ಯಾಜ್ಞಸೇನೀ, ಪಾಂಚಾಲದೇಶದ ರಾಜಕುಮಾರಿಯಾದ್ದರಿಂದ ಪಾಂಚಾಲೀ; ವಿದೇಹ ದೇಶದಿಂದಾಗಿ ವೈದೇಹೀ ಎಂಬುದಾಗಿ ಸೀತೆ ಹೇಗೋ ಹಾಗೆ. ಕೃಷ್ಣಾ ಎಂಬ ಹೆಸರು ದುರ್ಗೆಗೂ ಇದೆ[೨]. ತಮೋಭಿಮಾನಿನಿಯಾದ ದುರ್ಗೆಯದು ಸಹ

---

೧ ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ।
ಪಂಚಕನ್ಯಾಃ ಸ್ಮರೇನ್ನಿತ್ಯಂ ಮಹಾಪಾತಕ ನಾಶನಮ್ ॥ – ಪುರಾಣವಾಕ್ಯ

೨ ದುರ್ಗೇತಿ ಭದ್ರಕಾಳೀತಿ ವಿಜಯಾ ವೈಷ್ಣವೀತಿ ಚ।
ಕುಮುದಾ ಚಂಡಿಕಾ ಕೃಷ್ಣಾ ಮಾಧವೀ ಕನ್ಯಕೇತಿ ಚ।
ಮಾಯಾ ನಾರಾಯಣೀಶಾನಾ ಶಾರದೇತ್ಯಂಬಿಕೇತಿ ಚ॥ –ಭಾಗವತ (೧೦/೩/೧೨,೧೩)

ಕೃಷ್ಣವರ್ಣವೇ ಆಗಿದೆ. ಅದರ ಸ್ಮರಣೆಗೋಸ್ಕರ ಎಂಬಂತೆ ಕೃಷ್ಣಾ ಎಂಬುದು ದ್ರೌಪದಿಯ ಹೆಸರಾಗಿದೆ ಎಂದು ತಿಳಿಯಬಹುದು.

## ದ್ರೌಪದಿಯ ಅಪೂರ್ವರೀತಿಯ ಜನನ

ದ್ರೌಪದಿಯ ಹುಟ್ಟೇ ವಿಚಿತ್ರವಾದುದು. ತಂದೆಯಾದ ದ್ರುಪದ ದ್ರೋಣರಿಗೆ ಮಾಡಿದ ಅಪಮಾನದಿಂದಾಗಿ ಅವರ ಕೋಪಕ್ಕೆ ಬಲಿಯಾದ. ಅವನ ಸೊಕ್ಕು ಮುರಿಯುವ ಹಟ ತೊಟ್ಟ ದ್ರೋಣರು ಪಾಂಡವ, ಕೌರವರನ್ನು ಶಿಷ್ಯರನ್ನಾಗಿ ಮಾಡಿಕೊಂಡರು. ತಾನು ಬಯಸುವ ಗುರುದಕ್ಷಿಣೆ ನೀಡಿದವನನ್ನು ಅಪ್ರತಿಮ ಧನುರ್ಧಾರಿಯನ್ನಾಗಿ ರೂಪಿಸುವುದಾಗಿ ಘೋಷಿಸಿದರು. ಭೀಮಸೇನನ ಸೂಚನೆಯಂತೆ ಅರ್ಜುನ ಅದನ್ನು ಪೂರೈಸುವ ವಚನ ನೀಡಿದ. ದ್ರೋಣರು, ಅರ್ಜುನನನ್ನು ಅಪ್ರತಿಮ ಧನುರ್ಧಾರಿಯನ್ನಾಗಿ ರೂಪಿಸಿದರು. ಮುಂದೆ ಅವರು ಬಯಸಿದ ಗುರುದಕ್ಷಿಣೆಯನ್ನು ಕೊಡಲು ಕೌರವ, ಪಾಂಡವರು ಮುಂದಾದರು. ಉತ್ಸಾಹದಿಂದ ಕರ್ಣನೊಂದಿಗೆ ದ್ರುಪದನ ರಾಜಧಾನಿಯನ್ನು ಆಕ್ರಮಿಸಿದ ಕೌರವರು ಕಾರ್ಯವನ್ನು ಸಾಧಿಸಲಾಗದೆ ಹಿಮ್ಮೆಟ್ಟಿದರು. ಅದಕ್ಕೆ ದ್ರುಪದರಾಜನಿಗೆ ತನ್ನ ಊರಿನ ಸುತ್ತ ಒಂದು ಯೋಜನದವರೆಗೂ ಪರಾಭವ ಒದಗದು ಎಂಬ ಸೂರ್ಯ ನೀಡಿದ್ದ ವರ ಒಂದು ಕಾರಣವಾಗಿತ್ತು.

ಭೀಮಾರ್ಜುನರು, ಹಾಗೂ ನಕುಲ–ಸಹದೇವರು ಆ ಬಳಿಕ ದ್ರುಪದನನ್ನು ಆಕ್ರಮಿಸಿದರು. ಭೀಮಾರ್ಜುನರ ಸಾಮರ್ಥ್ಯದ ಮುಂದೆ ದ್ರುಪದರಾಜನ ಆಟ ಸಾಗದಾಯಿತು. ಕೊನೆಗೂ ಅವನನ್ನು ಭೀಮನ ರಕ್ಷಣೆಯಲ್ಲಿ ಅರ್ಜುನ ಸೆರೆಹಿಡಿದ. ಭೀಮಾರ್ಜುನರು ತಮಗೆ ಒಪ್ಪಿಸಿದ ದ್ರುಪದನನ್ನು ದ್ರೋಣರು, ಅವನ ಅರ್ಧರಾಜ್ಯವನ್ನು ಕಿತ್ತುಕೊಂಡು ಬಿಡುಗಡೆ ಮಾಡಿದರು. ಇದು ದ್ರುಪದನಿಗೆ ಅಪಾರ ಆಘಾತ ನೀಡಿದ ಘಟನೆಯಾಯಿತು. ದ್ರೋಣರಿಂದಾದ ಪರಾಭವ ಅವನನ್ನು ಸೇಡಿಗೆ ಪ್ರಚೋದಿಸಿತ್ತು. ಅವರನ್ನು ಕೊಲ್ಲುವಂತಹ ಮಗನನ್ನು ಪಡೆಯುವ ದೀಕ್ಷೆಯನ್ನು ಅಂದೇ ತೊಟ್ಟ. ತನ್ನನ್ನು ಸೆರೆಹಿಡಿಯುವ ಸಂದರ್ಭದಲ್ಲಿ ಅರ್ಜುನ ತನ್ನ ಬಗ್ಗೆ ಮೃದುವಾಗಿ ನಡೆದುಕೊಂಡಿದ್ದ ರೀತಿ ಅವನನ್ನು ಬಹಳವಾಗಿ ಆಕರ್ಷಿಸಿತ್ತು. ಆಗಲೇ ಅವನು ತೀರ್ಮಾನಿಸಿದ್ದ ಅವನು ತನಗೆ ಅಳಿಯನಾಗಲೇ ಬೇಕು ಎಂದು. ಆದರೆ, ಆಗಿನ್ನು ಅವನಿಗೆ ಹೆಣ್ಣು ಸಂತತಿ ಇರಲೇ ಇಲ್ಲ.

ಈ ಎರಡು ಉದ್ದೇಶವನ್ನು ಸಹ ಈಡೇರಿಸಿಕೊಳ್ಳಲು ದ್ರುಪದ ಹಿಡಿದ ಹಾದಿ ವಿಶಿಷ್ಟ ಯಜ್ಞವೊಂದರ ಆಚರಣೆ. ಯಜ್ಞ ಕ್ಷತ್ರಿಯರಿಗೆ ಕಾರ್ಯಸಾಧನೆಗೆ ವಿಹಿತವಾದ ಅತ್ಯುತ್ತಮ ಮಾರ್ಗ. ಅಂತಹ ಯಜ್ಞ ಸೂಕ್ತಸ್ಥಳದಲ್ಲಿ ಉತ್ತಮ ಸಿದ್ಧಿಯುಳ್ಳ ಪುರೋಹಿತರಿಂದ ನಡೆದಾಗ ಫಲ ಕೊಡುವುದು ನಿಶ್ಚಿತ ಎಂದು ವೈದಿಕಸಂಸ್ಕೃತಿ ನಿರೂಪಿಸಿದೆ.

ಗಂಗೆಯ ತೀರದಲ್ಲಿಯೇ ಯಾಗ ಎಂದು ನಿಶ್ಚಯಿಸಿದ ದ್ರುಪದ ಯೋಗ್ಯ ಪುರೋಹಿತರನ್ನು ಸಂಪಾದಿಸಲು ಪ್ರಯತ್ನಿಸಿದ. ಆ ಕಾಲದಲ್ಲಿ ಯಾಜ-ಉಪಯಾಜ ಎಂಬ ಮಹನೀಯರು ಅಂತಹ ಉತ್ತಮ ಅರ್ಹತೆಯ ಶ್ರೇಷ್ಠ ಪುರೋಹಿತರೆಂದು ಖ್ಯಾತರಾಗಿದ್ದರು. ದ್ರುಪದ ಅವರ ಬಳಿಗೆ ತೆರಳಿ ತನ್ನ ಉದ್ದೇಶವನ್ನು ತಿಳಿಸಿ, ಅದಕ್ಕಾಗಿ ತಾನು ಕೈಕೊಂಡ ಯಾಗದ ಪೌರೋಹಿತ್ಯವನ್ನು ವಹಿಸಲು ಪ್ರಾರ್ಥಿಸಿಕೊಂಡ. ೨೦ ಕೋಟಿ ಗೋವುಗಳನ್ನು ಕಾಣಿಕೆಯಾಗಿ ನೀಡುವುದಾಗಿ ಅರಿಕೆ ಮಾಡಿಕೊಂಡ. ಕೊನೆಗೆ ಅವರು ಆ ಕಾರ್ಯಕ್ಕೆ ಸಮ್ಮತಿಸಿದರು. ದ್ರುಪದ ರಾಜ ಈ ರೀತಿಯ ಸಮ್ಮತಿಯನ್ನು ಪಡೆಯುವ ಕಾರ್ಯದಲ್ಲಿ ಒಂದು ವರ್ಷದಷ್ಟು ದೀರ್ಘಕಾಲ ಹಿಡಿದಿತ್ತು. ಪರಮಪಾವನೆಯಾದ ಗಂಗೆಯ ತೀರದಲ್ಲೇ ಯಾಗ ನಡೆಯಿತು.

ವೇದಮಂತ್ರಗಳು ಸಾರಿರುವಂತೆ, ಬ್ರಹ್ಮಸೂತ್ರಗಳು ಅದನ್ನು ದೃಢಪಡಿಸಿರುವಂತೆ ಯಾಗದ ಫಲ ಕೂಡಲೇ ಗೋಚರಿಸಿತು. ಮಂತ್ರಿಸಿದ ಚರುವನ್ನು ಸ್ವೀಕರಿಸುವ ಹಂತ ಬಂದಿತು. ಕೂಡಲೇ ದ್ರುಪದರಾಜನ ಪತ್ನಿಗೆ ಯಾಜೋಪಯಾಜರು ಹೇಳಿಕಳುಹಿಸಿದರು. ಆದರೆ, ಮಹಾರಾಣಿ ಎಂಬ ಬಿಂಕದಿಂದ ಅವಳು ಕೂಡಲೇ ಅಲ್ಲಿಗೆ ಆಗಮಿಸಲಿಲ್ಲ, ತನ್ನ ಅಲಂಕಾರವಿನ್ನೂ ಪೂರೈಸಿಲ್ಲ ಎಂಬ ಕಾರಣವನ್ನು ಮುಂದಿಟ್ಟು ವಿಳಂಬ ಮಾಡಿದಳು. ಅಲಂಕಾರ ತಪ್ಪಲ್ಲ ಅಹಂಕಾರಕ್ಕಿಂತ ಬೇರೊಂದು ತಪ್ಪೂ ಇಲ್ಲ. ಅದನ್ನು ಅರ್ಥ ಮಾಡಿಕೊಂಡ ಯಾಜೋಪಯಾಜರು ಅವಳು ಪ್ರಾಶನ ಮಾಡಬೇಕಿದ್ದ ಹವಿಸ್ಸನ್ನು ಅಗ್ನಿಯಲ್ಲಿಯೇ ಹೋಮಿಸಿಬಿಟ್ಟರು. ಸಹಜವಾಗಿ ಜನ ಆತಂಕಕ್ಕೊಳಗಾದರು. ಮುನಿಗಳು ಆ ರೀತಿ ಮಾಡಿದ್ದರಿಂದ ಯಜ್ಞ ನಿರರ್ಥಕವಾಯಿತೋ ಎಂಬ ಚಿಂತೆ ಅನೇಕರಲ್ಲಿ ಮೂಡಿತು.

ಆದರೆ, ಆಗ ನಡೆದದ್ದು ಪವಾಡ. ಯಜ್ಞ ಕುಂಡದಿಂದ ರಥ ಸಮೇತವಾಗಿ ತರುಣನೊಬ್ಬ ಮೇಲೆದ್ದು ಬಂದ. ಅಗ್ನಿಯಂತೆ ಪ್ರಜ್ವಲಿಸುವ ಪ್ರಖರ ತೇಜಸ್ಸು, ಮುಖದಲ್ಲಿ ಅಪಾರವಾದ ವರ್ಚಸ್ಸು ಮೈತುಂಬಾ ವಸ್ತ್ರಾಭರಣಗಳು. ಹಾಗೆ ಬಂದದ್ದು ಬೇರಾರು ಆಗಿರದೇ ಸಾಕ್ಷಾತ್ ಅಗ್ನಿದೇವನೇ ಆಗಿದ್ದ. ಅವನ ಧಾರ್ಷ್ಟ್ಯ ಹಾಗೂ ತೇಜಸ್ಸನ್ನು ಗಮನಿಸಿದ ಅವನಿಗೆ ಧೃಷ್ಟದ್ಯುಮ್ನ ಎಂದೇ ನಾಮಕರಣವಾಯಿತು.

## ಅಗ್ನಿಕನ್ಯೆ ದ್ರೌಪದಿ

ಆ ಬಳಿಕ ನಡೆದದ್ದು ದೊಡ್ಡ ಇತಿಹಾಸ. ಅವನ ತೇಜಸ್ಸಿಗಿಂತ ಮಿಗಿಲೆನಿಸುವ ಅತ್ಯಪೂರ್ವ ಸೌಂದರ್ಯ ಲಾವಣ್ಯಗಳ ನಿಧಿ ಎನ್ನಿಸಿದ ತರುಣಿಯೊಬ್ಬಳು ಆ ಅಗ್ನಿಕುಂಡದಿಂದ ಮೇಲೆದ್ದು ಬಂದಳು. ಉಟ್ಟ ಪೀತಾಂಬರ, ತೊಟ್ಟ ಆಭರಣಗಳು ಸಭೆಯನ್ನೇ ಬೆಳಗುತ್ತಿದ್ದ ಅಪಾರವಾದ

ದೇಹಕಾಂತಿ, ದೇಹದಿಂದ ಸದಾ ಪಸರಿಸುತ್ತಿದ್ದ ಕನ್ನೈದಿಲೆಯ ಪರಿಮಳ ಜನರ ಅಚ್ಚರಿಗೆ ಮಿತಿಯೇ ಇರಲಿಲ್ಲ. ಜಗತ್ತು ಕಂಡ ಆಶ್ಚರ್ಯಗಳಲ್ಲಿ ಒಂದು ಎನ್ನಿಸಿದ ಘಟನೆ ಅದು. ಅದಕ್ಕೆ ಪೂರಕವಾಗಿ ಮತ್ತೊಂದು ಅಚ್ಚರಿ ನಡೆಯಿತು. ಅಶರೀರವಾಣಿಯ ಘೋಷ[೧] ಕೇಳಿಸಿತು. 'ಇವಳು ಭಗವತ್ಕಾರ್ಯ ಸಾಧನೆಗಾಗಿ ಅವತರಿಸಿ ಬಂದಿರುವ ಸಾಕ್ಷಾತ್ ಶ್ರೀ; ವಿದ್ಯೆಯ ಅಧಿದೇವತೆ. ಇವಳಿಗೆ ಮಿಗಿಲೆನ್ನಿಸುವ ಮತ್ತೊಬ್ಬ ಸ್ತ್ರೀ ಜೀವಕೋಟಿಯಲ್ಲಿಲ್ಲ. ದುಷ್ಟಕ್ಷತ್ರಿಯರ ನಾಶಕ್ಕೆಂದೇ ಇವಳ ಅವತಾರ'. ಅಗ್ನಿಕುಂಡದಿಂದ ಜನಿಸಿದ ಅವಳು ದುಷ್ಟಕ್ಷತ್ರಿಯರ ಪಾಲಿಗೆ ಅಗ್ನಿಯೇ ಆದಳು. ಅಗ್ನಿಯ ಅಂತರ್ಯಾಮಿಯಾದ ಶ್ರೀಪರಶುರಾಮ ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ದುಷ್ಟಕ್ಷತ್ರಿಯರ ವಿನಾಶಕ್ಕೆ ಅಗ್ನಿಯಂತಾದದ್ದು ಸುಪ್ರಸಿದ್ಧವೇ ಆದ ಸಂಗತಿ. ಒಬ್ಬ ಸ್ತ್ರೀ ಹೀಗೆ ದುಷ್ಟಕ್ಷತ್ರಿಯರ ವಿನಾಶಕ್ಕೆ ಅಗ್ನಿಸದೃಶೆಯಾದದ್ದು ಮಾತ್ರ ದೊಡ್ಡ ದಾಖಲೆಯೇ ಆಯಿತು.

ಇದು ದ್ರೌಪದಿಯ ಅವತಾರದ ಕಥೆ. ಇಂತಹ ಅದ್ಭುತವಾದ ಹುಟ್ಟನ್ನು ಸೀತೆಯ ಪ್ರಾದುರ್ಭಾವದ ಬಳಿಕ ಬೇರೆಡೆ ಕಾಣುವುದಿರಲಿ, ಕೇಳಲು ಸಹ ಸಾಧ್ಯವಿಲ್ಲ. ಸೀತೆ ಪ್ರಾದುರ್ಭವಿಸಿದ್ದು ಸಹ ಯಜ್ಞದ ಸಂದರ್ಭದಲ್ಲಿಯೇ. ಜನಕರಾಜನ ಯಜ್ಞದ ಫಲಶ್ರುತಿಯಾಗಿ ಸೀತೆ ಅವತರಿಸಿದಳು. ಸಾಕ್ಷಾತ್ ಮಹಾಲಕ್ಷ್ಮಿಯೇ ಸೀತೆ ಎಂಬುದು ರಾಮಾಯಣವು ಮತ್ತೆ ಮತ್ತೆ ಸಾರಿರುವ ತತ್ತ್ವ. ಸರ್ವೋತ್ತಮನೆನ್ನಿಸಿದ ನಾರಾಯಣನ ಪತ್ನಿ ಅವಳು. ಇಲ್ಲಿ ಅವತರಿಸಿದ್ದು ಭಾರತೀ. ಎಂದರೆ, ಭರತ ಎನ್ನಿಸಿದ ವಾಯುದೇವರ ಪತ್ನಿ. ವಾಯು ಭಾವಿಬ್ರಹ್ಮನಾದರೆ, ಭಾರತೀ ಭಾವಿಸರಸ್ವತಿ. ರಾಮಾಯಣದಲ್ಲಿ ನಡೆದದ್ದು ಲಕ್ಷ್ಮಿಯ ಪ್ರಾದುರ್ಭಾವವಾದರೆ, ಇಲ್ಲಿ ನಡೆದದ್ದು ಸರಸ್ವತಿಯ ಪ್ರಾದುರ್ಭಾವ. ಮಹಾಲಕ್ಷ್ಮಿಯು ಸಂಪತ್ತು ಮೊದಲಾದ ಸಕಲಕ್ಕೂ ಅಧಿದೇವತೆಯಾದರೆ, ಭಾರತಿ ವಿದ್ಯಾಭಿಮಾನಿನಿ, ಸಕಲವೇದಗಳಿಗೆ ಅಭಿಮಾನಿನಿ. ಮಹಾಲಕ್ಷ್ಮೀ ಸರ್ವೋತ್ತಮನ ಪತ್ನಿಯಾದರೆ, ಭಾರತೀ ಜೀವೋತ್ತಮನ ಪತ್ನಿ. ಹೀಗೆ ಲಕ್ಷ್ಮೀ, ಸರಸ್ವತಿಯರ ಪ್ರಾದುರ್ಭಾವ ಯಜ್ಞದಿಂದಲೇ ಸಾಧ್ಯ. ಯಜ್ಞವು ಸಕಲ ಕರ್ಮಗಳ ಸಾರ. ಅದರ ಫಲ ಅಲ್ಲಿ ಲಕ್ಷ್ಮೀ, ಇಲ್ಲಿ

---

೧ ಮಾನುಷಂ ವಿಗ್ರಹಂ ಕೃತ್ವಾ ಸಾಕ್ಷಾದಮರವರ್ಣಿನೀ ।
ನೀಲೋತ್ಪಲಸಮೋ ಗಂಧೋ ಯಸ್ಯಾಃ ಕ್ರೋಶಾತ್ ಪ್ರಧಾವತಿ ॥
ಯಾ ಬಿಭರ್ತಿ ಪರಂ ರೂಪಂ ಯಸ್ಯಾ ನಾಸ್ತ್ಯುಪಮಾ ಭುವಿ ॥ – ಭಾರತ (ಆದಿ. ೧೬೭/೪೬)
ತಾಂ ಚಾಪಿ ಜಾತಾಂ ಸುಶ್ರೋಣೀಂ ವಾಗುವಾಚಾಶರೀರಿಣೀ ।
ಸರ್ವಯೋಷಿದ್ವರಾ ಕೃಷ್ಣಾ ನಿನೀಷುಃ ಕ್ಷತ್ರಿಯಾನ್ ಕ್ಷಯಮ್ ॥
ಸುರಕಾರ್ಯಮಿಯಂ ಕಾಲೇ ಕರಿಷ್ಯತಿ ಸುಮಧ್ಯಮಾ ॥ – ಭಾರತ (ಆದಿ.೧೬೭/೪೮)
ಸರ್ವಲಕ್ಷಣಸಂಪೂರ್ಣಾ ವೈದೂರ್ಯಮಣಿಸಂನಿಭಾ ।
ಕೃಷ್ಣೇತ್ಯಬ್ರುವನ್ ಕೃಷ್ಣಾಂ ಕೃಷ್ಣಾಽಭೂತ್ ಸಾ ಹಿ ವರ್ಣತಃ ॥ – ಭಾರತ (ಆದಿ.೧೬೭/೫೪)

ಭಾವೀ ಸರಸ್ವತಿ. ಎಂದರೆ, ಇದು 'ಕರ್ಮಣಾ ಜ್ಞಾನಮಾತನೋತಿ' ಎಂಬ ಶ್ರುತಿವಚನಕ್ಕೆ ನಿದರ್ಶನದಂತಿದೆ.

ದ್ರೌಪದಿಯ ಈ ಪ್ರಾದುರ್ಭಾವ ದ್ರೌಪದಿಯ ಪಾತ್ರದ ಹಿರಿಮೆಯನ್ನು ಸಾರುವ ಅದ್ಭುತ ಪ್ರಸಂಗ. ಸಾಮಾನ್ಯವಾಗಿ ಅಗ್ನಿಯು ಸ್ವತಃ ಪರಿಶುದ್ಧ; ಅದನ್ನು ಪವಿತ್ರಗೊಳಿಸಲು ತೊಳೆಯುವ ಮೂರ್ಖತನ ತೋರಬೇಕಿಲ್ಲ; 'ತೀರ್ಥೋದಕಂ ಚ ವಹ್ನಿಶ್ಚ ನಾನ್ಯತಃ ಶುದ್ಧಿಮರ್ಹತಃ'.

ಅಗ್ನಿಯಂತೆ, ಅಗ್ನಿಯಿಂದ ಪ್ರಾದುರ್ಭವಿಸಿದ್ದು ಸಹ ಪರಿಶುದ್ಧವೇ. ಸೀತಾಕೃತಿಯ ಪಾವಿತ್ರ್ಯ ಜಗತ್ತಿಗೆ ಖಚಿತಪಟ್ಟಿದ್ದು ಅಗ್ನಿಯಿಂದಲೇ. ದ್ರೌಪದಿಯ ಪಾವಿತ್ರ್ಯಕ್ಕೂ ಈ ಅಗ್ನಿಯ ಮೂಲಕ ನಡೆದ ಪ್ರಾದುರ್ಭಾವ ಸಾಕ್ಷಿಯಾಗಿದೆ. ಸೀತೆಯ ಅಗ್ನಿಪ್ರವೇಶ ಕಾರ್ಯವು ರಾಮಾಯಣದ ಯುದ್ಧದ ಮುಕ್ತಾಯದ ಘಟ್ಟದಲ್ಲಿ ನಡೆದ ಪ್ರಸಂಗ. ದ್ರೌಪದಿಯ ಅಗ್ನಿಯಿಂದ ಪ್ರಾದುರ್ಭಾವವು ಅವರ ಅವತಾರ ಸಮಯದಲ್ಲೇ ನಡೆದ ಹಿರಿಮೆ. ಹೀಗೆ ಲಕ್ಷ್ಮೀ-ಸರಸ್ವತಿಯರ ಪಾವಿತ್ರ್ಯಕ್ಕೆ ಅಗ್ನಿ ಸಾಕ್ಷಿಯಾಗಿ ನಿಲ್ಲುತ್ತಾನೆ. ಅಗ್ನಿಸಾಕ್ಷಿ ಎಂಬ ಪದದ ಸಾರ್ಥಕ್ಯವನ್ನು ಈ ಎರಡೂ ಪ್ರಸಂಗದಲ್ಲಿ ಕಾಣಬಹುದು. ಒಂದು ರೀತಿಯಲ್ಲಿ ಇದು ದ್ರೌಪದಿಯ ಪರಿಶುದ್ಧತೆಗೆ ಅಗ್ನಿದಿವ್ಯದಂತಹ ಪುರಾವೆಯಾಯಿತು ಎನ್ನಬಹುದು. ಪರಿಶುದ್ಧಿಯಲ್ಲಿ ಅಗ್ನಿಯನ್ನೂ ಮೀರಿಸಿದ ದ್ರೌಪದಿಗೆ ಇದರ ಸಾಕ್ಷ್ಯ ಅನಗತ್ಯ ಎಂಬುದು ನಿಜ. ಆದರೆ, ಅದನ್ನು ಅರ್ಥ ಮಾಡಿಕೊಳ್ಳಲು ಜನತೆಯ ಪಾಲಿಗೆ ಮಾತ್ರ ತುಂಬಾ ಉಪಯುಕ್ತವೆನ್ನಿಸುವ ಸಂಗತಿಯಾಯಿತು ಎಂಬುದು ನಿಜ. ಸ್ವತಃ ಅಗ್ನಿಯ ಅವತಾರನೇ ಆಗಿ ಜನಿಸಿದ ಧೃಷ್ಟದ್ಯುಮ್ನನನ್ನೂ ಮೀರಿಸಿದ ಪರಿಶುದ್ಧಿ ದ್ರೌಪದಿಯದು ಎಂಬುದು ಮಾತ್ರ ವಿಶೇಷ.

ಸೀತೆ ಒಂದುವರ್ಷಕಾಲ ಲಂಕೆಯಲ್ಲಿ ಇದ್ದ ಪ್ರಸಂಗ ಅವಳ ಪಾವಿತ್ರ್ಯಕ್ಕೆ ಧಕ್ಕೆ ತರಲಿಲ್ಲ ಎಂಬುದು ರಾಮಾಯಣದ ಸಂದೇಶವಾದರೆ, ಐವರು ಪತಿಯರೊಂದಿಗೆ ನಡೆದ ದಾಂಪತ್ಯ ದ್ರೌಪದಿಯ ಪಾವಿತ್ರ್ಯಕ್ಕೆ ಕಲಂಕವಾಗಲಿಲ್ಲ ಎಂಬುದು ಮಹಾಭಾರತದ ಸಂದೇಶ. ಈ ಎರಡೂ ಪ್ರಸಂಗಗಳಲ್ಲೂ ಅಗ್ನಿಯ ಪಾತ್ರವಿರುವುದು ಗಮನಿಸಬೇಕಾದ ಅಂಶ.

ದ್ರೌಪದಿಯ ಪಾತ್ರ ಈ ಮುನ್ನವೇ ತಿಳಿಸಿರುವಂತೆ ಇತಿಹಾಸ, ಪುರಾಣ ಪ್ರಪಂಚದಲ್ಲಿ ತುಂಬಾ ಸಂಕೀರ್ಣವೆನ್ನಿಸುವ ಪಾತ್ರ. ಒಬ್ಬ ಸ್ತ್ರೀಗೆ ಐವರು ಪತಿಗಳೆಂಬುದು ಅಧರ್ಮವೇ ತಾಂಡವವಾಡುತ್ತಿರುವ ಈ ಕಾಲದಲ್ಲೂ ಸಹ ಯಾವ ದೇಶದ ಕಾನೂನು ಒಪ್ಪಲಾಗದ ವಿಷಯ. ಆದರೆ, ಪಾವಿತ್ರ್ಯವನ್ನೇ ಜೀವಾಳವನ್ನಾಗಿ ಹೊಂದಿದ ಇತಿಹಾಸ, ಪುರಾಣಗಳು ಇಂತಹ ಒಂದು ಪಾತ್ರವನ್ನು ಜಗತ್ತಿಗೆ ನೀಡಿರುವುದು ಸೋಜಿಗದ ಸಂಗತಿ. ಅದನ್ನು ವೇದೇತಿಹಾಸಗಳಲ್ಲಿ ಪರಿಣಿತರಾದ ಮಹಾತಪಸ್ವಿಗಳು, ದಿವ್ಯಜ್ಞಾನಿಗಳು ಸಹ ಮಾನ್ಯ ಮಾಡಿದ್ದು ಅಚ್ಚರಿ ಎನ್ನಿಸಿದರೂ ಸತ್ಯ. ದ್ರೌಪದಿಯ ಪಾತ್ರದ ಹಿರಿಮೆಯನ್ನು ಕೊಂಡಾಡುವ

ಮಹಾಭಾರತ ಮೊದಲಾದ ಮೂಲಕೃತಿಗಳು ಅಂತಹ ಬೇರೊಂದು ಪಾತ್ರವನ್ನು ಮುಂದಿಟ್ಟಿಲ್ಲ. ಮಹಾಭಾರತವನ್ನು ವ್ಯಾಸಪೀಠದ ಮೇಲಿರಿಸಿ ಪರಮಭಕ್ತಿಯಿಂದ ಪಠನ ಮಾಡುವ ಜನತೆ ಬಹುಪತಿತ್ವವನ್ನು ಯಾವ ಕಾಲಕ್ಕೂ ಅನುಸರಿಸಿಲ್ಲ. ಅದಕ್ಕೆ ಮುಖ್ಯಕಾರಣ ದ್ರೌಪದಿಯು ಅಗ್ನಿಯ ಮೂಲಕ ಪ್ರಾದುರ್ಭವಿಸಿದ್ದೇ ಎನ್ನಬಹುದು. ಆ ಅಗ್ನಿಯೂ ಸಹ ಯಾವುದೋ ಅಗ್ನಿಯಾಗಿರದೇ ಯಜ್ಞದಂತಹ ಪರಮಪವಿತ್ರವಾದ ಅಗ್ನಿ. ಯಾಜೋಪಯಾಜರಂತಹ ದಿವ್ಯಜ್ಞಾನಿಗಳ ನೇತೃತ್ವದಲ್ಲಿ ನಡೆದ ಮಹಾಯಜ್ಞದ ಅಗ್ನಿ. ಗಂಗೆಯಂತಹ ಪರಿಮಪವಿತ್ರವಾದ ದೇವನದಿಯ ತೀರದಲ್ಲಿ ನಡೆದ ಅನುಪಮವಾದ ಯಜ್ಞದ ಅಗ್ನಿ. ಸಾವಿರಾರು ದಿವ್ಯಜ್ಞಾನಿಗಳ, ಋಷಿಪುಂಗವರ ಸಾಕ್ಷಿಯಲ್ಲಿ ನಡೆದ ಯಜ್ಞದ ಅಗ್ನಿ. ಈ ಹಿನ್ನೆಲೆಯನ್ನು ಗಮನಿಸಿದ ಯಾರಿಗೂ ಸಹ ದ್ರೌಪದಿಯ ಪಾತ್ರದ ಪಾವಿತ್ರ್ಯದ ಸಲ್ಲದ ಚಿಂತನೆಗೆ ಅವಕಾಶವೇ ಇಲ್ಲ.

## ಸೌಂದರ್ಯದ ಖನಿ ದ್ರೌಪದಿ

ಹುಟ್ಟಿನಲ್ಲಿಯೇ ಇಂತಹ ಅಪೂರ್ವತೆಯನ್ನು ಪಡೆದ ದ್ರೌಪದಿ, ಪರಮ ರೂಪಸಿ ಎಂಬುದಾಗಿ ಪ್ರಸಿದ್ಧಳಾಗಿದ್ದಳು. ದ್ರೌಪದಿಯ ಸೌಂದರ್ಯ ಸಾರ್ವಕಾಲಿಕ ದಾಖಲೆಗಳಲ್ಲೊಂದು. ರಾಮಾಯಣದ ಸೀತೆ, ಮಹಾಭಾರತದ ರುಗ್ಮಿಣೀ, ಸತ್ಯಭಾಮೆಯರ ಬಳಿಕದ ಅತ್ಯಂತ ಸೌಂದರ್ಯವತಿಯೆಂದರೆ ದ್ರೌಪದಿಯೇ. ಹುಟ್ಟುವಾಗಲೇ ಯೌವನವತಿಯಾಗಿದ್ದವಳು. ಸಾವಿತ್ರೀ ಮೊದಲಾದವರ ಕಣ್ಣು ಕುಕ್ಕುವ ತೇಜಸ್ಸನ್ನು ಮಹಾಭಾರತ ವರ್ಣಿಸಿದೆ. ಅದರಂತೆ ಅದೆಷ್ಟೋ ಲಾವಣ್ಯವತಿಯರ ವರ್ಣನೆ ಇತಿಹಾಸ, ಪುರಾಣಗಳಲ್ಲಿ ದಾಖಲಾಗಿದೆ. ಆದರೆ, ದ್ರೌಪದಿಯ ಸೌಂದರ್ಯದ ರೀತಿ ಮಾತ್ರ ಸಾವಿತ್ರೀ ಮೊದಲಾದವರಿಗಿಂತ ತೀರ ವಿಭಿನ್ನವಾದ ಬಗೆಯದಾಗಿತ್ತು. ಸಾವಿತ್ರಿಯ ತೇಜಸ್ಸನ್ನು ತಡೆದುಕೊಳ್ಳುವ ಶಕ್ತಿಯು ಸಹ ಅವಳನ್ನು ವರಿಸಲು ಬಂದ ರಾಜಕುಮಾರರಿಗೆ ಇರಲಿಲ್ಲ.[೧] ಸಾವಿತ್ರಿಯ ವರದಿಂದ ಜನಿಸಿದ್ದ ಆ ಸಾವಿತ್ರಿಯ ತೇಜಸ್ಸೇ ಹಾಗಿದ್ದಾಗ, ಸಾಕ್ಷಾತ್ ಭಾವೀ ಸಾವಿತ್ರಿ ಎನ್ನಿಸಿದ ದ್ರೌಪದಿಯ ತೇಜಸ್ಸಿನ ಅಪೂರ್ವತೆ ವರ್ಣನೆಗೆ ಮೀರಿದ್ದು ಎಂಬುದು ಕೈಮುತ್ಯ ಸಿದ್ಧ.

ಮೇಲ್ನೋಟಕ್ಕೆ ದ್ರೌಪದಿಯದು ಕೃಷ್ಣವರ್ಣ. ಕೃಷ್ಣೆ ಎಂಬ ಹೆಸರು ಅವಳಿಗೆ ಬರಲು ಅದು ಒಂದು ಕಾರಣ. ಆ ಅರ್ಥದಲ್ಲಿ ದ್ರೌಪದೀ ಕೃಷ್ಣಸುಂದರಿ. ಆದರೆ ಈ ಕೃಷ್ಣವರ್ಣ ಲೋಕದ ಜನರ ಕಪ್ಪು ಬಣ್ಣದಂತಹುದಲ್ಲ; ಅದಕ್ಕೆ ಹತ್ತಿರವೆನ್ನಿಸಿದರೂ ವಿಲಕ್ಷಣವೆನ್ನಿಸುವ ಕಡು ನೀಲಿ ಬಣ್ಣ. ನಿಜವಾದ ಅರ್ಥದಲ್ಲಿ ಭಗವಂತನಾದ ಶ್ರೀಕೃಷ್ಣನ ಬಣ್ಣ. ಶ್ರೀಕೃಷ್ಣನಿಗೆ ಆ ಹೆಸರು ಬರಲು

೧ ತಾಂ ತು ಪದ್ಮಪಲಾಶಾಕ್ಷೀಂ ಜ್ವಲಂತೀಮಿವ ತೇಜಸಾ ।
ನ ಕಶ್ಚಿದ್ವರಯಾಮಾಸ ತೇಜಸಾ ಪರಿವಾರಿತಃ ॥ – ಮ.ಭಾ(ವನಪರ್ವ.೨೯೩/೨೭)

ಅದೂ ಸಹ ಒಂದು ಕಾರಣವಾಗಿತ್ತು. ಅಂತಹ ವರ್ಣದ ಸ್ತ್ರೀ ಎಂಬ ಕಾರಣಕ್ಕೆ ದ್ರೌಪದಿಗೆ ಕೃಷ್ಣೆ ಎಂಬ ಹೆಸರು ಸಾರ್ಥಕವಾಗಿತ್ತು: ಕೃಷ್ಣಾ ಭೂತ್ ಸಾ ಹಿ ವರ್ಣತಃ. ಕೃಷ್ಣ ಎಂಬುದಕ್ಕೆ ಕಪ್ಪು ಎಂಬ ಅರ್ಥವೇ ಇದ್ದಲ್ಲಿ ಅದೆಷ್ಟೋ ಕೃಷ್ಣೆಯರು ದಾಖಲಾಗುತ್ತಿದ್ದರು. ಆದರೆ, ಪ್ರಾಚೀನ ಕೃತಿಗಳು ಬಣ್ಣಿಸಿದ ಒಬ್ಬಳೇ ಒಬ್ಬ ಕೃಷ್ಣೆಯೆಂದರೆ ದ್ರೌಪದೀ. ಇಂತಹ ಕೃಷ್ಣವರ್ಣಕ್ಕೂ ಒಂದು ಕಾರಣವಿದೆ. ದ್ರೌಪದೀ ಈಗಾಗಲೇ ತಿಳಿಸಿರುವಂತೆ ಭಾವಿಸರಸ್ವತಿ. ಸರಸ್ವತಿ ವಿದ್ಯೆಯ ಅಧಿದೇವತೆ. ಕೃತಿಯೊಂದು ಲಿಪಿಬದ್ಧವಾದಾಗ ಅದಕ್ಕೆ ಅತ್ಯಂತ ಉಪಯುಕ್ತವೆನ್ನಿಸುವ ಮಸಿ ಕಪ್ಪು ಬಣ್ಣದ್ದೇ. ಆ ಕಪ್ಪು ಸಹ ಕಡು ನೀಲಿ ಬಣ್ಣದಾಗಿದ್ದಾಗ ಓದಲು ಸುಲಭ. ಕಣ್ಣಿಗೆ ಆಯಾಸವಾಗದಂತೆ ಗಂಟೆಗಟ್ಟಲೆ ಓದುವುದು ಸಾಧ್ಯವಾಗುವುದು ಕೆಂಪು ಅಥವಾ ಇತರ ಬಣ್ಣಗಳಲ್ಲಿ ಕೃತಿಗಳು ಬರೆಯಲ್ಪಟ್ಟಾಗ ಸಾಧ್ಯವಿಲ್ಲ. ಕೃಷ್ಣವರ್ಣದ ಲಿಪಿಯು ಮಾತ್ರವೇ ಓದಲು ಹಿತ. ತಾಳೆಗರಿಯ ಮೇಲಿನ ಲೇಖನಕ್ಕಂತು ನಿಯಮೇನ ಇಂತಹ ಕಪ್ಪು ಬಣ್ಣದ ಶಾಯಿಯೇ ಉಪಯೋಗಿಸಲ್ಪಡುತ್ತಿತ್ತು. ಭಾರತಿಯು ವಿದ್ಯಾಭಿಮಾನಿಯಾದ್ದರಿಂದ ಅವಳ ಅವತಾರವಾದ ದ್ರೌಪದಿಯು ಕೃಷ್ಣವರ್ಣದವಳಾಗಿರುವುದು ಸಮುಚಿತವೆನ್ನಿಸುವುದು.

ಸಾಮಾನ್ಯವಾಗಿ ಬಣ್ಣದಲ್ಲಿಯೇ ರೂಪವನ್ನು ಕಾಣುವುದು ಹೆಚ್ಚಿನವರ ಪ್ರವೃತ್ತಿ. ಬಿಳಿ ಅಥವಾ ಕೆಂಪು ಬಣ್ಣದ ಹೊರತು ಇತರ ಬಣ್ಣಗಳು ಅದರಲ್ಲೂ ಕೃಷ್ಣವರ್ಣ ಸೌಂದರ್ಯಕ್ಕೆ ಮೆರುಗು ನೀಡುವುದು ಎಂಬುದನ್ನು ಜನ ಒಪ್ಪಲಾರರು. ಆದರೆ ದ್ರೌಪದಿಯ ಪ್ರಸಂಗದಲ್ಲಿ ಅವಳ ಕೃಷ್ಣವರ್ಣ ಮಾತ್ರ ಇತರ ಸಕಲಸ್ತ್ರೀಯರ ಸೌಂದರ್ಯವನ್ನು ಮೀರಿಸುವಂತೆ ಮಾಡಿತ್ತು.

## ಸಕಲಸಲ್ಲಕ್ಷಣಗಳ ನಿಧಿ ದ್ರೌಪದಿ

ಸೌಂದರ್ಯದ ಪರಿಕಲ್ಪನೆಯನ್ನು ಬಣ್ಣದ ಹಿನ್ನಲೆಯಲ್ಲಿ ಅಳೆಯುವ ರೀತಿಯನ್ನು ಸಾಮುದ್ರಿಕಶಾಸ್ತ್ರ ಒಪ್ಪಿಲ್ಲ. ಲಕ್ಷಣ ಶಾಸ್ತ್ರ ತಿಳಿಸುವಂತೆ ನಿಜವಾದ ಸೌಂದರ್ಯ ಇರುವುದು ಲಕ್ಷಣಗಳಲ್ಲಿಯೇ ಹೊರತು ಬಣ್ಣದಲ್ಲಲ್ಲ. ಅಂತಹ ಲಕ್ಷಣಗಳು ಸಹ ೩೨ ಎಂಬುದಾಗಿ ಇತಿಹಾಸ, ಪುರಾಣಗಳು ದಾಖಲಿಸಿವೆ. ಸೀತಾರಾಮರ ಸೌಂದರ್ಯದ ವರ್ಣನೆಯ ಪ್ರಸಂಗದಲ್ಲಿ ರಾಮಾಯಣಲ್ಲೂ ಆ ವಿವರ ಬಂದಿದೆ. ಶ್ರೀಮನ್ಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ[೧], ಶ್ರೀಮದ್ಭಾಗವತತಾತ್ಪರ್ಯ, ಬೃಹದಾರಣ್ಯ-

೧ ದಶತಾಲೋ ದಶಮುಖೋ ಲಲಾಟಸ್ತ್ರಿಂಶಕಸ್ತಥಾ ।
ಸಾರ್ಧೋಽನ್ತಶ್ಚೈವ ಪುನಃ ಪರ್ಯಗ್ದಶಿರಾಸ್ತಥಾ ।
ಪಂಚೋರಾಃ ಸಪ್ತಪಾದೋ ಯೋ ನಾಶಂಕ್ಯಂ ತದ್ವಚಃ ಕ್ವಚಿತ್ ।
ನವಾಂಗುಲಮುಖೋ ಯಸ್ತು ಗಲೇ ಚ ಚತುರಂಗುಲಃ ।
ಚತುರ್ವಿಂಶಾಂಗುಲತನುಸ್ತದ್ವಾಕ್ಯಂ ದೇವಪೂಜಿತಮ್ ।
ಪ್ರಾಧಾನ್ಯಾಲ್ಲಕ್ಷಣೋಪೇತೋ ದುರ್ಲಕ್ಷಣಯುತೋಽಪಿ ಸನ್ ।

ಕೋಪನಿಷದ್ಭಾಷ್ಯ, ತಂತ್ರಸಾರಸಂಗ್ರಹ ಮೊದಲಾದ ಕೃತಿಗಳಲ್ಲಿ ಇಂತಹ ಲಕ್ಷಣಗಳ ಬಗ್ಗೆ ವಿವರಗಳು ದೊರೆಯುತ್ತವೆ. ೩೨ ಲಕ್ಷಣಗಳು ಸಹ ಪರಿಪೂರ್ಣವಾಗಿ ಕಂಡುಬರುವುದು ಭಗವಂತನಾದ ಶ್ರೀಹರಿಯಲ್ಲಿ. ಅವನ ಸಕಲ ಅವತಾರಗಳು ಸಹ ಅಂತಹ ಸಕಲ ಸಲ್ಲಕ್ಷಣಗಳಿಂದ ಪರಿಪೂರ್ಣವಾದವು. 'ಪೂರ್ಣಮದಃ ಪೂರ್ಣಮಿದಂ' ಎಂಬ ಉಪನಿಷದ್ವಾಣಿಗೆ ಈ ಅರ್ಥವೂ ಗ್ರಾಹ್ಯ ಎನ್ನಬಹುದು. ಅವನ ಲಕ್ಷಣಗಳ ವಿಶೇಷತೆ ಎಂದರೆ ಅವನು ಸರ್ವತಂತ್ರ ಸ್ವತಂತ್ರನಾದ ಏಕಮೇವಾದ್ವಿತೀಯ ಮಹಾಪುರುಷ ಎಂಬುದರ ಸೂಚನೆ.

ಆ ಬಳಿಕದ ಸರ್ವಲಕ್ಷಣಸಂಪನ್ನತೆ ಮಹಾಲಕ್ಷ್ಮಿಯದು. ಲಕ್ಷ್ಮೀ ಎಂಬ ಶಬ್ದದ ಮುಖ್ಯ ಅರ್ಥವೂ ಅದೇ ಆಗಿದೆ[೧]. ಲಕ್ಷ್ಮ ಎಂದರೆ ಲಕ್ಷಣ. 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂಬ ನ್ಯಾಯದಿಂದ ಅನನ್ಯಸಾಧಾರಣವಾದ ಲಕ್ಷಣವತಿ, ಸಮಸ್ತ ಸಲ್ಲಕ್ಷಣವತಿ ಎಂಬ ಅರ್ಥದಲ್ಲಿ ಲಕ್ಷ್ಮೀ ಎಂಬ ಹೆಸರು ಸಾರ್ಥಕ. ಸ್ತ್ರೀಯರಲ್ಲಿ ಅಂತಹ ಲಕ್ಷಣ ಬೇರಾರಲ್ಲೂ

---

ತಸ್ಯಾಪಿ ವಾಕ್ಯಂ ಮಾನಂ ಸ್ಯಾತ್ ಕಿಮು ಸರ್ವಯುತಸ್ಯ ತು ।
ಪ್ರಾಯೋ ದೇವಾಶ್ಚ ಋಷಯೋ ನ ಸರ್ವಶುಭಲಕ್ಷಣಾಃ ।
ಋತೇ ವಿಷ್ಣುಂ ಸುರಶ್ರೇಷ್ಠಂ ಬ್ರಹ್ಮಾಣಂ ವಾಽಪ್ಯನಂತರಮ್ ।
ಯಸ್ಮಾನ್ನ ವಿದುಷಾಂ ವಾಕ್ಯಮಾಶಂಕ್ಯಂ ಕೇನಚಿತ್ ಕ್ವಚಿತ್ ।
ತಸ್ಮಾದ್ವೇದೇಷು ಸರ್ವೇಷು ಕಥಾಃ ಪ್ರಶ್ನೋತ್ತರಾತ್ಮಿಕಾಃ ।
ಏತಸ್ಮಾದಾಶ್ವಲಾದ್ಯಾಶ್ಚ ಪ್ರಚ್ಛುರ್ನೈವ ಕುತ್ರಚಿತ್ ।
ಆಗಮಂ ಯಾಜ್ಞವಲ್ಕ್ಯೇಕ್ತೇರನ್ಯಂ ತಂ ಮಿಥಿಲೇಽಪಿ ಚ' ಇತಿ ಬ್ರಹ್ಮತರ್ಕೇ । - ಬೃಹದಾರಣ್ಯಕ
'ಅಶ್ರುತಪ್ರತಿಭಾ ಯಸ್ಯ ಶ್ರುತಿಸ್ಮೃತ್ಯವಿರೋಧಿನೀ ।
ವಿಶ್ರುತಾ ನೃಷು ಜಾತಂ ಚ ತಂ ವಿದ್ಯಾದ್ದೇವಸತ್ತಮಮ್ ।
ಯಶ್ಚ ಸ್ವಮುಖಮಾನೇನ ನವಾಧೋದೇಹವಾನ್ ಪುಮಾನ್ ।
ಅಷ್ಟಮಾನವತೀ ಸ್ತ್ರೀ ಚ ಷಣ್ಣವತ್ಯಂಗುಲೌ ಪುನಃ ।
ದಶತಾಲೌ ಸಪ್ತಪಾದೌ ವಿದ್ಯಾತ್ ತೌ ಚ ಸುರೋತ್ತಮೌ ।
ಯಾವತ್ ಪಂಚಾಂಗುಲೋನಂ ತದ್ದೇವಮಾನಂ ಕ್ರಮಾತ್ ಪರಮ್ ।
ಪಾದೇ ತ್ವಂಗುಲಮಾತ್ರೋನಂ ತದೂನಂ ಚತುರಂಗುಲಮ್ ।
ಯಾವದ್ದೇವೋಪದೇವಾನಾಂ ಪಾದೇ ಚೋನಾಂಗುಲಂ ಪುನಃ ।
ತಾವನ್ಮನುಷ್ಯಮಾನಂ ಸ್ಯಾತ್ ತತೋಽಧಸ್ತಾವಸುರಂ ಸ್ಮೃತಮಮ್ ।
ದ್ವಿಚತ್ವಾರ್ಯಧಿಕಂ ತಸ್ಮಾತ್ ಷಣ್ಣವತ್ಯಂಗುಲಾದಧಃ ।
ಜ್ಞೇಯಮಂಗುಲಮಾನಂ ತದುಪದೇವಾದಿಷು ಸ್ಫುಟಮ್ ।
ದೇವೇಷ್ವವರವಜ್ಞೇಯಮೃಷೀಣಾಂ ಚಕ್ರವರ್ತಿನಾಮ್ ।
ಯಾವದ್ ಯಾವತ್ ಪ್ರಿಯೋ ವಿಷ್ಣೋಸ್ತಾವತ್ ಸ್ತ್ರೀಪುಂಸ್ವರೂಪಿಣಃ ।
ಹರೇಃ ಸಾದೃಶ್ಯಮಸ್ಯ ಸ್ಯಾದನಾದಿಕ್ರಮಸುಸ್ಥಿರಮ್' ಇತಿ ಚ ॥ ೨೫,೨೬ ॥ - ಗೀತಾಭಾಷ್ಯ

೧ ಲಕ್ಷ್ಮೀರ್ಲಾಭಾದ್ವಾ ಲಕ್ಷಣಾದ್ವಾ (ಲಪ್ಸನಾದ್ವಾ) ಲಾಂಛನಾದ್ವಾ ಲಷತೇರ್ವಾ ಸ್ಯಾತ್ । ....
- ನಿರುಕ್ತ (೪/೨/೧೦)

ಇಲ್ಲ. ಆ ಲಕ್ಷಣದ ಮುಖ್ಯ ಸೂಚನೆ ಅವಳು ಅಕ್ಷರಪುರುಷಳು, ಅವ್ಯಕ್ತತತ್ತ್ವದ ಅಭಿಮಾನಿನಿ, ಭಗವಂತನಿಗೆ ಮಾತ್ರ ಅಧೀನಳಾದವಳು, ಬ್ರಹ್ಮಾದಿಗಳ ತಾಯಿ ಮೊದಲಾದ ಅನೇಕ ತತ್ತ್ವಗಳಿಗೆ ಅವು ಸಂಕೇತ. ನಿತ್ಯಮುಕ್ತತ್ವ ಆ ಲಕ್ಷಣಗಳ ಮುಖ್ಯವಾದ ಸೂಚನೆ.

ಆ ಬಳಿಕದ ಜೀವಕೋಟಿಯಲ್ಲಿ ೩೨ಲಕ್ಷಣಗಳನ್ನು ಹೊಂದಿದ ಗುಂಪು ಋಜುದೇವತೆಗಳದು. ಬ್ರಹ್ಮ ವಾಯುಗಳು ಮೊದಲಾದ ಪುರುಷಋಜುಗಳು, ಸರಸ್ವತೀ, ಭಾರತೀ ಮೊದಲಾದ ಸ್ತ್ರೀಋಜುಗಳು ಮಾತ್ರವೇ ಮೂಲರೂಪದಲ್ಲೂ ಹಾಗೂ ಅವತಾರರೂಪದಲ್ಲೂ ಇಂತಹ ಲಕ್ಷಣಗಳನ್ನು ಹೊಂದಿರುವವರು. ರಾಮಾಯಣದಲ್ಲಿ ಶ್ರೀರಾಮನ ಬಾಯಲ್ಲಿ ಬರುವ ಹನುಮಂತನ ವರ್ಣನೆಯಲ್ಲಿ ಈ ವಿಷಯ ಸ್ಫುಟಪಡುವುದು[3]. ಇಂತಹ ಲಕ್ಷಣಗಳ ಮುಖ್ಯ ಸೂಚನೆಯೆಂದರೆ ಅವರಿಗೆ ದುಃಖದ ಸಂಪರ್ಕವೇ ಇರದು. ಸದಾ ಪೂರ್ಣವೆನ್ನಿಸುವ ಆನಂದವನ್ನೇ ಅವರು ಹೊಂದಿರುವರು ಎಂಬುದು ಇದರ ಮುಖ್ಯ ಅರ್ಥ. ಪುರುಷಋಜುಗಳ ಲಕ್ಷಣಗಳು ಅವರ ಜೀವೋತ್ತಮತ್ವ, ಜಗದ್ಗುರುತ್ವ, ಪರಿಶುದ್ಧವಾದ ಸತ್ಯಧರ್ಮಗಳಲ್ಲಿ ನಿರತರಾಗಿರುವಿಕೆ ಮೊದಲಾದವುಗಳಿಗೆ ದ್ಯೋತಕ. ಸ್ತ್ರೀಋಜುಗಳ ಲಕ್ಷಣಗಳು ಅವರು ಸಕಲ ವಿದ್ಯಾಭಿಮಾನಿಗಳು, ತಮ್ಮ ಪತಿಗಳಂತೆ ಪರಿಶುದ್ಧವಾದ ಭಾಗವತಧರ್ಮದಲ್ಲಿ ನಿರತರಾದವರು[2] ಎಂಬ ಹಿರಿಮೆಗೆ ದ್ಯೋತಕ. ಅನಂತರದ ಕಕ್ಷೆಯ ಬೇರೆ ಯಾವ ದೇವತೆಗಳಿಗೂ ಸಹ ಈ ರೀತಿಯಾಗಿ ದ್ವಾತ್ರಿಂಶಲ್ಲಕ್ಷಣಗಳು ಕಂಡುಬರುವುದಿಲ್ಲ. ಗರುಡ, ಶೇಷಾದಿ ದೇವತೆಗಳದು ೨೮ ಲಕ್ಷಣಗಳ ದೇಹ ಮಾತ್ರ. ಕ್ರಮವಾಗಿ ಈ ಲಕ್ಷಣಗಳ ಸಂಖ್ಯೆ ಕಡಿಮೆಯಾಗುತ್ತಾ ಹೋಗುವುದು. ವೇದಮಂತ್ರಗಳ ದ್ರಷ್ಟಾರರೆನ್ನಿಸುವ ಋಷಿಗಳ ದೇಹಲಕ್ಷಣ ೨೦ಕ್ಕಿಂತ ಕಡಿಮೆ ಇರದು. ಹೀಗೆ ಲಕ್ಷಣಶಾಸ್ತ್ರದ ಬೆಳಕಿನಲ್ಲಿ ವ್ಯಕ್ತಿಗಳ ಹಿರಿಮೆ, ಗರಿಮೆಗಳನ್ನು ಗುರುತಿಸಲು ಸಾಧ್ಯವಿದೆ.

ಪ್ರಸ್ತುತ ದ್ರೌಪದೀದೇವಿಯು ಸಾಕ್ಷಾತ್ ಭಾರತೀ ಅವತಾರವಾದ್ದರಿಂದ ಅವರಲ್ಲಿ ೩೨ ಲಕ್ಷಣಗಳು ಸಹ ಇದ್ದವು[1]. ಅದರಿಂದಾಗಿಯೇ ದ್ರೌಪದಿಯ ಸೌಂದರ್ಯ ಸುಭದ್ರೆ

---

೧ ದ್ವಾತ್ರಿಂಶಲ್ಲಕ್ಷಣೈಃ ಸಮ್ಯಕ್ ಯುಕ್ತಾ ವಾಯುತ್ವಯೋಗ್ಯತಾಃ ।
ನಿಯಮೇನೈವ ವಿಷ್ಣೋಸ್ತು ಪ್ರಾದುರ್ಭಾವಾ ವಿಶೇಷತಃ ॥ – ಬೃಹದಾರಣ್ಯಕೋಪನಿಷದ್ಭಾಷ್ಯ
ದ್ವಾತ್ರಿಂಶಲ್ಲಕ್ಷಣೋಪೇತಮಗ್ರ್ಯಮ್ – ಮ.ಭಾ.ತಾ.ನಿ.(೧೨/೧೩೪)
ನ ಮುಖೇ ನೇತ್ರಯೋರ್ವಾಪಿ ಲಲಾಟೇ ಚ ಭ್ರುವೋಸ್ತಥಾ ।
ಅನ್ಯೇಷ್ವಪಿ ಚ ಗಾತ್ರೇಷು ದೋಷಃ ಸಂವಿದಿತಃ ಕ್ವಚಿತ್ ॥ – ವಾಲ್ಮೀಕಿ ರಾಮಾಯಣ(೪/೩/೩೦)
'ಸಂಪೂರ್ಣಲಕ್ಷಣಚಣಮ್' – ಸುಮಧ್ವವಿಜಯ (೨/೨೫)

೨ ಅನ್ವೇನಮೇವ ತದ್ಧರ್ಮೇ ಕೃಷ್ಣೈಕಾ ಸಂಶ್ರಿತಾ ಸದಾ – ಮ.ಭಾ.ತಾ.ನಿ(೧೮/೧೬)

೩ ನೈವಂರೂಪಾ ಭವಂತ್ಯೇವ ಯಥಾ ವದಸಿ ಭಾಮಿನಿ ।
ಪ್ರೇಷಯಂತೀವ ವೈ ದಾಸೀರ್ದಾಸಾಂಶ್ಚ ವಿವಿಧಾನ್ ಬಹೂನ್ ॥

ಮೊದಲಾದ ಇತರ ಎಲ್ಲರ ಸೌಂದರ್ಯಕ್ಕಿಂತ ವಿಲಕ್ಷಣವೆನ್ನಿಸಿತ್ತು. ಇಂತಹ ರೂಪವು ಸ್ತ್ರೀಯರಲ್ಲಿ ಹಿರಿಮೆಯನ್ನು ಗುರುತಿಸುವ ಮುಖ್ಯ ಸಾಧನ ಎಂಬುದು ಇನ್ನೊಂದು ಗಮನಿಸಬೇಕಾದ ಅಂಶ. ಯತ್ರ ರೂಪಂ ತತ್ರ ಗುಣಾಃ. ದ್ರೌಪದೀ ಆ ಕಾಲದ ಅನುಪಮ ಸೌಂದರ್ಯವತಿ ಎಂಬ ಮಾತು ಅವರು ಜೀವೋತ್ತಮೆ ಎಂದರೆ ಇತರ ಸಕಲ ಸ್ತ್ರೀಯರಿಗಿಂತಲೂ ಅವರು ಶ್ರೇಷ್ಠರು ಎಂಬ ಪ್ರಮೇಯಕ್ಕೆ ಸಾಕ್ಷಿಯಾಗುವುದು. ವಾಯು ಜೀವೋತ್ತಮ ಎನ್ನಿಸಿರುವಂತೆ, ಭಾರತೀ ಜೀವೋತ್ತಮೇ ಎನ್ನಿಸಿರುವಳು ಎಂದು ಇದರ ಒಟ್ಟು ಭಾವ.

ದ್ರೌಪದಿಯ ಸೌಂದರ್ಯದ ಬಗೆಯನ್ನು ಮಹಾಭಾರತ ಅನೇಕ ಪ್ರಸಂಗಗಳಲ್ಲಿ ವರ್ಣಿಸಿದೆ. ದ್ರೌಪದಿಗೆ ಅಭ್ಯಂಜನ ಮಾಡಿಸುವಾಗ ಸಖಿಯರ ಮನಸ್ಸಿನಲ್ಲಿ ಮೂಡುತ್ತಿದ್ದ ಪುರುಷಭಾವ ಇದಕ್ಕೆ ಅತ್ಯುತ್ತಮ ನಿದರ್ಶನ[೧]. ದ್ರೌಪದಿಯ ಸ್ವಯಂವರ ಇದಕ್ಕೆ ಕನ್ನಡಿ ಹಿಡಿಯುವ ಇನ್ನೊಂದು ಪ್ರಸಂಗ. ದ್ರೌಪದೀ ಸ್ವಯಂವರಕ್ಕೆ ಆ ಕಾಲದ ರಾಜ-ಮಹಾರಾಜರ ವೃಂದವೇ ಆಗಮಿಸಿತ್ತು. ದುರ್ಯೋಧನ, ಜರಾಸಂಧರಂತಹ ದುಷ್ಟಕೂಟದಿಂದ ಆರಂಭಿಸಿ, ಪಾಂಡವರಂತಹ ಶಿಷ್ಟಶ್ರೇಷ್ಠರವರೆಗೆ ಸಕಲರೂ ಆ ಸ್ವಯಂವರದಲ್ಲಿ ಪಾಲ್ಗೊಂಡಿದ್ದರು. ಈ ಮಾತಿನಲ್ಲಿ ದ್ರೌಪದಿಯ ಸೌಂದರ್ಯದ ಹಿರಿಮೆಯನ್ನು ಗುರುತಿಸಬಹುದು. ಆ ಸ್ವಯಂವರದಲ್ಲಿ ಇದ್ದ ಪಣವು ಸಹ ಸಾಮಾನ್ಯದ್ದಾಗಿರಲಿಲ್ಲ. ಮತ್ಸ್ಯಯಂತ್ರಭೇದನದಂತಹ ಪರಮದುಸ್ತರವೆನ್ನಿಸಿದ ಸವಾಲು ಸ್ವಯಂವರಾರ್ಥಿಗಳ ಮುಂದೆ ನಿಂತಿತ್ತು. ಇದನ್ನು ಗಮನಿಸಿದಾಗ ದ್ರೌಪದಿಯ ಸೌಂದರ್ಯದ ಬಗ್ಗೆ ಜನರಲ್ಲಿ ಮೂಡಿದ್ದ ಭಾವನೆ ಅರ್ಥವಾಗಲು ಸಾಧ್ಯ.

ದ್ರೌಪದಿಯು ಅವತರಿಸುವಾಗಲೇ ಅಶರೀರವಾಣಿ ನುಡಿದಿತ್ತು. ಇವಳು ಮುಪ್ಪಿಲ್ಲದವಳು, ಲೋಕಸುಂದರಿ ಎಂಬುದಾಗಿ ('ಅಜರಾ ಲೋಕಸುಂದರೀ'). ಅದರ ಯಥಾರ್ಥತೆ ಮಹಾಭಾರತದ ಉದ್ದಕ್ಕೂ ಕಂಡುಬರುವುದು.

---

ನೋಚ್ಚಗುಲ್ಫಾ ಸಂಹತೋರುಸ್ತ್ರಿಗಂಭೀರಾ ಷಡುನ್ನತಾ ।
ರಕ್ತಾ ಪಂಚಸು ರಕ್ತೇಷು ಹಂಸಗದ್ಗದಭಾಷಿಣೀ ॥
ಸುಕೇಶೀ ಸುಸ್ತನೀ ಶ್ಯಾಮಾ ಪೀನಶ್ರೋಣಿಪಯೋಧರಾ ।
ತೇನ ತೇನೈವ ಸಂಪನ್ನಾ ಕಾಶ್ಮೀರೀವ ತುರಂಗಮೀ ॥
ಆರಾಲಪಕ್ಷ್ಮನಯನಾ ಬಿಂಬೋಷ್ಠೀ ತನುಮಧ್ಯಮಾ ।
ಕಂಬುಗ್ರೀವಾ ಗೂಢಶಿರಾ ಪೂರ್ಣಚಂದ್ರನಿಭಾನನಾ ॥
ಶಾರದೋತ್ಪಲಪತ್ರಾಕ್ಷ್ಯಾ ಶಾರದೋತ್ಪಲಗಂಧಯಾ ।
ಶಾರದೋತ್ಪಲಸೇವಿನ್ಯಾ ರೂಪೇಣ ಸದೃಶೀ ಶ್ರಿಯಾ ॥ -ಮಹಾಭಾರತ (೪/೯/೯-೧೩)

೧ ಪಾಂಚಾಲ್ಯಾಃ ಪದ್ಮಪತ್ರಾಕ್ಷ್ಯಾಃ ಸ್ನಾಯಂತ್ಯಾ ಜಘನಂ ಘನಮ್ ।
ಯಾಃ ಸ್ತ್ರಿಯೋ ದೃಷ್ಟವತ್ಯಸ್ತಾಃ ಪುಂಭಾವಂ ಮನಸಾ ಯಯುಃ ॥ -ಮಹಾಭಾರತ

ಅಜ್ಞಾತವಾಸ ಕಾಲದಲ್ಲಿ ವಿರಾಟನಗರವನ್ನು ಸೈರಂಧ್ರಿಯ ವೇಷದಲ್ಲಿ ದ್ರೌಪದೀ ಪ್ರವೇಶಿಸುವಳು. ಸೈರಂಧ್ರೀ ಎಂದರೆ ಗಂಧಾದಿಗಳನ್ನು ತೇಯುವ ಕಾರ್ಯವನ್ನು ಮಾಡುವವಳು ಎಂದರ್ಥ. ಎಂದರೆ, ಅದೊಂದು ರೀತಿಯ ಆಳಿನ ಕೆಲಸ. ಅದಕ್ಕೆ ಸಹಜವಾಗಿಯೇ ವಿಹಿತವಾದಂತಹ ವೇಷಭೂಷಣ ತೀರಾ ಸಾಮಾನ್ಯವೆನ್ನಿಸುವಂತಹುದು. ಉಟ್ಟ ವಸ್ತ್ರದಿಂದ ಹಿಡಿದು ಎಲ್ಲವೂ ಸಾಮಾನ್ಯವೇ. ಆಭರಣಗಳನ್ನಂತು ಸೈರಂಧ್ರಿಯರು ತೊಡುವಂತೆಯೇ ಇಲ್ಲ. ಅಂತಹ ಸೈರಂಧ್ರಿಯ ವೇಷದಲ್ಲಿ ದ್ರೌಪದೀ ವಿರಾಟನಗರದಲ್ಲಿ ನಡೆಯುತ್ತಾ ಸಾಗಿದಾಗ ಮಹಾರಾಣಿಯಾದ ಸುದೇಷ್ಣೆಯು ಅವಳನ್ನು ಕಾಣುತ್ತಲೇ ಪಟ್ಟ ಆಶ್ಚರ್ಯದ ವಿವರ ಮಹಾಭಾರತದಲ್ಲಿ ಬಗೆಬಗೆಯಾಗಿ ನಿರೂಪಿತವಾಗಿದೆ[೧]. ಅವಳೇನು ಅಪ್ಸರೆಯೋ? ಗಂಧರ್ವಿಯೋ? ಎಂದು ಯೋಚಿಸುತ್ತಲೇ ಪಟ್ಟ ಅಚ್ಚರಿ ಅತ್ಯಂತ ಗಮನಾರ್ಹವೆನ್ನಿಸುವಂತಹುದು. ಇವಳೇನು ಮಹಾಲಕ್ಷ್ಮಿಯೋ? ಪಾರ್ವತೀ, ಶಚಿಯೋ? ಅಂತು ನಿಶ್ಚಿತವಾಗಿಯೂ ಒಬ್ಬ ದೇವತಾಸ್ತ್ರೀಯೇ ಇರಬೇಕು ಎಂಬ ನಿರ್ಣಯವನ್ನು ಸ್ವತಃ ಮಹಾರಾಣಿಯಾದ ಸುದೇಷ್ಣಾದೇವಿ ಮಾಡುವಳು. ಇದರಿಂದ ಅಂತಹ ತೀರಾ ತೀರಾ ಸಾಮಾನ್ಯವೆನ್ನಿಸುವಂತಹ ಉಡುಗೆ ತೊಡುಗೆಗಳಲ್ಲೂ ದ್ರೌಪದಿಯ ಸೌಂದರ್ಯ ಅವಳು ದೇವತಾ ಸ್ತ್ರೀ ಎಂಬುದನ್ನು ಸಾರಿ ಸಾರಿ ಹೇಳುತ್ತಿತ್ತು.

ಸಹಜ ಸೌಂದರ್ಯವೆಂದರೆ ಇದೇ; ನಿರಾಭರಣ ಸುಂದರಿ ಎಂಬ ಮಾತು ನಿಜ ಅರ್ಥದಲ್ಲಿ ದ್ರೌಪದಿಗೆ ಅನ್ವಯಿಸುವುದು.

ವನವಾಸದ ಕಾಲದಲ್ಲಿ ಎಂದರೆ, ಸರಿಸುಮಾರು ಆದರ ಮುಕ್ತಾಯದ ಘಟ್ಟದಲ್ಲಿ ಜಯದ್ರಥ ದ್ರೌಪದಿಯನ್ನು ಕಂಡು ಮೋಹಿತನಾಗುತ್ತಾನೆ[೨]. ಮತ್ತೊಂದು ಮದುವೆಗೆಂದು ಸಾಗುತ್ತಿದ್ದ ಅವನು ಕಾಡಿನಲ್ಲಿ ದ್ರೌಪದಿಯನ್ನು ಕಂಡು ಮೋಹಕ್ಕೊಳಗಾಗಿ ಅವಳ ಅಪಹರಣಕ್ಕೂ ಪ್ರಯತ್ನಿಸುತ್ತಾನೆ. ಭೀಮಾರ್ಜುನರಿಂದ ಪೆಟ್ಟು ತಿಂದು ಯುಧಿಷ್ಠಿರನ

---

೧ ಕಾ ತ್ವಂ ಬ್ರೂಹಿ ಯಥಾ ಭದ್ರೇ ನಾಸಿ ದಾಸೀ ಕಥಂಚನ।
ಯಕ್ಷೀ ವಾ ಯದಿ ವಾ ದೇವೀ ಗಂಧರ್ವೀ ಯದಿ ವಾಽಪ್ಸರಾಃ॥
ದೇವಕನ್ಯಾ ಭುಜಂಗೀ ವಾ ನಗರಸ್ಯಾಥ ದೇವತಾ।
ವಿದ್ಯಾಧರೀ ಕಿನ್ನರೀ ವಾ ಯದಿ ವಾ ರೋಹಿಣೀ ಸ್ವಯಮ್॥
ಅಲಂಬುಷಾ ಮಿಶ್ರಕೇಶೀ ಪುಂಡರೀಕಾಥ ಮಾಲಿನೀ।
ಇಂದ್ರಾಣೀ ವಾರುಣೀ ವಾ ತ್ವಂ ತ್ವಷ್ಟುರ್ಧಾತುಃ ಪ್ರಜಾಪತೇಃ।
ದೇವ್ಯೋ ದೇವೇಷು ವಿಖ್ಯಾತಾಸ್ತಾಸಾಂ ತ್ವಂ ಕತಮಾ ಶುಭೇ॥ -ಮ.ಭಾ.(೫/೯/೧೪-೧೬)

೨ ವಿಭ್ರಾಜಮಾನಾಂ ವಪುಷಾ ಬಿಭ್ರತೀಂ ರೂಪಮುತ್ತಮಮ್।
ಭ್ರಾಜಯಂತೀಂ ವನೋದ್ದೇಶಂ ನೀಲಾಭ್ರಮಿವ ವಿದ್ಯುತಮ್॥
ಅಪ್ಸರಾ ದೇವಕನ್ಯಾ ವಾ ಮಾಯಾ ವಾ ದೇವನಿರ್ಮಿತಾ।
ಇತಿ ಕೃತ್ವಾಽಂಜಲಿಂ ಸರ್ವೇ ದದೃಶುಸ್ತಾಮನಿಂದಿತಾಮ್॥ -ಮ.ಭಾ.(೪/೨೬೪/೯,೧೦)

ಕರುಣೆಯಿಂದ ಜೀವದಾನ ಪಡೆಯುತ್ತಾನೆ. ಆಗ ದ್ರೌಪದಿಯ ವಯಸ್ಸು ಸರಿಸುಮಾರು ೬೦ನ್ನು ದಾಟಿತ್ತು. ಮತ್ತು ವನವಾಸದ ಅವಧಿಯಾದ್ದರಿಂದ ದ್ರೌಪದಿಯು ಆಗ ನಿರಾಭರಣ ಸುಂದರಿಯಾಗಿದ್ದಳು. ಜಯದ್ರಥನ ದೃಷ್ಟಿಯಲ್ಲೂ ದ್ರೌಪದಿಯ ಸೌಂದರ್ಯ ಅಶ್ರುತಪೂರ್ವವಾಗಿತ್ತು. ವನವಾಸ, ಅಜ್ಞಾತವಾಸಗಳ ಕಾಲದಲ್ಲಿ ಲೋಕದೃಷ್ಟಿಯ ಚಿಂತನೆಯಲ್ಲಿ ಉಪವಾಸ, ಸಂಚಾರ ಮೊದಲಾದ ಕಾರಣದಿಂದ ಎಂತಹವರ ದೇಹಸೌಷ್ಠವವೂ ಕುಂದುವುದು. ಅದೂ ಹನ್ನೆರಡು ವರ್ಷಗಳಷ್ಟು ಸುದೀರ್ಘ ವನವಾಸ, ಕಾಡುಮೇಡುಗಳಲ್ಲಿ ಸಂಚಾರ ಮೊದಲಾದ ಹಿನ್ನೆಲೆಯಲ್ಲಿ ದ್ರೌಪದಿಯ ಸೌಂದರ್ಯಕ್ಕೆ ಸ್ವಲ್ಪವಾದರು ಕುಂದುಂಟಾಗುವ ಸಂಭವವಿತ್ತು. ಅದಾವುದು ನಡೆಯದೆ ದ್ರೌಪದಿಯು ಲೋಕಸುಂದರಿಯಾಗಿಯೇ ಕಾಣಿಸಿಕೊಂಡಿದ್ದು ಅದ್ಭುತಗಳಲ್ಲಿ ಅದ್ಭುತವೆನ್ನಿಸುವ ವಿಷಯ.

ಕೀಚಕ ಮಹಾಕಾಮುಕ ಎಂಬುದಾಗಿ ಕುಖ್ಯಾತನಾಗಿದ್ದ ಮಹಾನೀಚ. ಅವನ ಕಣ್ಣಿಗೆ ಬಿದ್ದ ಸುಂದರಿಯರು ಅವನ ವಶವಾಗದೇ ಇರಲು ಸಾಧ್ಯವೇ ಇರಲಿಲ್ಲ ಎಂಬಂತಹ ದುಷ್ಟತನ ಅವನದು. ಅವನ ಕಣ್ಣು ಸೈರಂಧ್ರೀ ವೇಷದ ದ್ರೌಪದಿಯ ಮೇಲೆ ಬೀಳುವದು. ಅವನಿಗಾದ ಆಶ್ಚರ್ಯಕ್ಕೆ ಮಿತಿಯೇ ಇಲ್ಲ. ಅಂತಹ ಸೌಂದರ್ಯದಿಂದ ಆಕರ್ಷಿತನಾದ ಅವನು ಬಗೆಬಗೆಯಲ್ಲಿ ಅವಳನ್ನು ಪಡೆಯುವ ಪ್ರಯತ್ನವನ್ನು ಮಾಡುತ್ತಾನೆ. ತನ್ನ ಸೋದರಿ ಸುದೇಷ್ಣೆಯ ಮುಂದೆ ತಾನು ಸೈರಂಧ್ರಿಯ ಬಗ್ಗೆ ಆಕರ್ಷಿತನಾಗಿರುವುದನ್ನು ವಿವರಿಸುತ್ತಾನೆ. ತನ್ನ ಬದುಕಿನಲ್ಲಿ ಅಂತಹ ಸುಂದರಿಯನ್ನು ಸರ್ವಥಾ ಕಂಡಿಲ್ಲ, ಕೇಳಿಯೂ ಇಲ್ಲ ಎಂದು ತಿಳಿಸುತ್ತಾನೆ[1].

---

೧ ಕಾ ತ್ವಂ ಕಸ್ಯಾಸಿ ಕಲ್ಯಾಣಿ ಕುತೋ ವಾ ತ್ವಂ ವರಾನನೇ।
ಪ್ರಾಪ್ತಾ ವಿರಾಟನಗರಂ ತತ್ ತ್ವಮಾಚಕ್ಷ್ವ ಶೋಭನೇ॥
ರೂಪಮಗ್ರ್ಯಂ ತಥಾ ಕಾಂತಿಃ ಸೌಕುಮಾರ್ಯಮನುತ್ತಮಮ್।
ಕಾಂತ್ಯಾ ವಿಭಾತಿ ವಕ್ತ್ರಂ ತೇ ಶಶಾಂಕ ಇವ ನಿರ್ಮಲಮ್॥
ನೇತ್ರೇ ಸುವಿಪುಲೇ ಸುಭ್ರು ಪದ್ಮಪತ್ರನಿಭೇ ಶುಭೇ।
ವಾಕ್ಯಂ ತೇ ಚಾರುಸರ್ವಾಂಗೀ ಪರಪುಷ್ಟರುತೋಪಮಮ್॥
ಏವಂರೂಪಾ ಮಯಾ ನಾರೀ ಕಾಚಿದನ್ಯಾ ಮಹೀತಲೇ।
ನ ದೃಷ್ಟಪೂರ್ವಾ ಸುಶ್ರೋಣಿ ಯಾದೃಶೀ ತ್ವಮನಿಂದಿತೇ॥
ಲಕ್ಷ್ಮೀಃ ಪದ್ಮಾಲಯಾ ಕಾ ತ್ವಮಥ ಭೂತಿಃ ಸುಮಧ್ಯಮೇ।
ಹ್ರೀಃ ಶ್ರೀಃ ಕೀರ್ತಿರಥೋ ಕಾಂತಿರಾಸಾಂ ಕಾ ತ್ವಂ ವರಾನನೇ॥
ಅತೀವರೂಪಿಣೀ ಕಿಂ ತ್ವಮನಂಗಾಂಗವಿಹಾರಿಣೀ।
ಅತೀವ ಭ್ರಾಜಸೇ ಸುಭ್ರು ಪ್ರಭೇವೇಂದೋರನುತ್ತಮಾ॥
ಅತಿ ಚೇಕ್ಷಣಪಕ್ಷ್ಮಾಣಾಂ ಸ್ಮಿತಂ ಜ್ಯೋತ್ಸ್ನೋಪಮಂ ಶುಭಮ್।
ದಿವ್ಯಾಂಶುರಶ್ಮಿಭಿರ್ವೃತ್ತಂ ದಿವ್ಯಕಾಂತಿಮನೋರಮಮ್॥

ಇಲ್ಲಿ ಗಮನಿಸಬೇಕಾದ ಅಂಶವೊಂದಿದೆ. ದ್ರೌಪದಿಯ ಇಂತಹ ಸೌಂದರ್ಯದ ವರ್ಣನೆ ಬಂದಿರುವ ಅಜ್ಞಾತವಾಸದ ಅವಧಿಯಲ್ಲಿ ದ್ರೌಪದಿಯ ವಯಸ್ಸಿನ ಪರಿಕಲ್ಪನೆಯನ್ನು ಇಂದಿನ ವಿಮರ್ಶಕರು ಗಮನಿಸಿಲ್ಲ. ದ್ರೌಪದಿಯು ಅವತರಿಸಿದ್ದೇ ಯೌವನವತಿಯಾಗಿ. ಪಾಂಡವರಿಗೆ ದ್ರೌಪದಿಯೊಂದಿಗೆ ವಿವಾಹದ ಕಾಲದಲ್ಲಿ ವಯಸ್ಸಿನ ವಿವರ ಹೀಗಿದೆ. ಯುಧಿಷ್ಠಿರನ ವಯಸ್ಸು ಆಗ ೩೦ ವರ್ಷ, ಭೀಮಸೇನನದು ೨೯ ವರ್ಷ, ಅರ್ಜುನನದು ೨೮ ಹಾಗೂ ಸಕುಲ-ಸಹದೇವರದು ೨೭. ದ್ರೌಪದಿಯ ವಯಸ್ಸು ಆಗ ಅತಿ ಕಡಿಮೆ ಎಂದರೂ ೨೦ ವರ್ಷ. ಅಜ್ಞಾತವಾಸ ಕಾಲದಲ್ಲಿ ಯುಧಿಷ್ಠಿರನ ವಯಸ್ಸು ೭೧, ಭೀಮಾದಿಗಳದು ಕ್ರಮವಾಗಿ ೭೦, ೬೯ ಹಾಗೂ ೬೮. ದ್ರೌಪದಿಯ ವಯಸ್ಸು ೬೦ರ ಅಂಚಿನದು. ಆ ವೇಳೆಗೆ ದ್ರೌಪದಿಗೆ ಐವರು ಮಕ್ಕಳಿದ್ದು ಅವರೆಲ್ಲ ಕುರುಕ್ಷೇತ್ರ ಯುದ್ಧದಲ್ಲಿ ಭಾಗವಹಿಸುವಷ್ಟು ದೊಡ್ಡವರಾಗಿದ್ದರು. ಎಂದರೆ ಅವರೆಲ್ಲರ ವಯಸ್ಸು ಸಹ ೨೦ನ್ನು ದಾಟಿತ್ತು. ಇದರಿಂದ ದ್ರೌಪದಿಯ ವಯಸ್ಸಿನ ಸ್ಪಷ್ಟ ಚಿತ್ರವನ್ನು ಪಡೆಯಲು ಸಾಧ್ಯ. ಆ ವಯಸ್ಸಿನಲ್ಲಿ ಸ್ತ್ರೀಯ ಸೌಂದರ್ಯದ ಕಲ್ಪನೆಯನ್ನು ಯಾವ ಕಾವ್ಯವೂ ಮುಂದಿಡುವುದಿಲ್ಲ. ಪೌರಾಣಿಕ ಪ್ರಪಂಚದಲ್ಲೂ ಆ ವಯಸ್ಸಿನ ಸ್ತ್ರೀಯ ಸೌಂದರ್ಯದ ವರ್ಣನೆ ಕಂಡುಬರುವುದಿಲ್ಲ. ಆದರೆ ದ್ರೌಪದಿಯ ಸೌಂದರ್ಯ ಮಾತ್ರ ಅದ್ವಿತೀಯವೆನ್ನಿಸುವಂತಹುದು. ಆ ಕಾಲಕ್ಕೂ ದ್ರೌಪದಿಯ ಸೌಂದರ್ಯ ತನ್ನ ಜೀವನದಲ್ಲೇ ಅಶ್ರುತಪೂರ್ವ ಎಂದು ಕೀಚಕನಂತಹ ನೀಚನು ವರ್ಣಿಸುವಾಗ ಬೇರಾವ ಪುರಾವೆಯ ಅಗತ್ಯವೂ ಕಂಡುಬರುವುದಿಲ್ಲ.

ವಿರಾಟಪರ್ವದ ಕೊನೆಯಲ್ಲಿ ಅಭಿಮನ್ಯು ಉತ್ತರೆಯರ ವಿವಾಹಕ್ಕೆ ನೆರೆದಿದ್ದ ಸ್ತ್ರೀವೃಂದದಲ್ಲಿ ದ್ರೌಪದಿ ರೂಪ, ಕಾಂತಿ ಮೊದಲಾದ ಪ್ರತಿಯೊಂದರಲ್ಲೂ ಸಹ ಇತರ ಸಕಲ ಸ್ತ್ರೀಯರನ್ನೂ ಮೀರಿಸಿದ್ದಳು ಎಂಬ ಮಾತು ಇದಕ್ಕೆ ಇನ್ನೊಂದು ರೀತಿಯ ಪುರಾವೆಯಾಗಿದೆ[೧]:

> ವರ್ಣೋಪಪನ್ನಾಸ್ತಾ ನಾರ್ಯೋ ರೂಪವತ್ಯಃ ಸ್ವಲಂಕೃತಾಃ।
> ಸರ್ವಾಸ್ತಾಽಭ್ಯಭವತ್ ಕೃಷ್ಣಾ ರೂಪೇಣ ಯಶಸಾ ಶ್ರಿಯಾ ॥

ಇನ್ನೂ ಗಮನಿಸಬೇಕಾದ ಸಂಗತಿಯೆಂದರೆ, ಕುಂತಿ ಮೊದಲಾದವರು ಕೊನೆಯ ಬಾರಿಗೆ ವನಕ್ಕೆ ತೆರಳುವ ಪ್ರಸಂಗ. ಆಗ, ಪಾಂಡವರ ರಾಜ್ಯಭಾರ ಪ್ರಾರಂಭವಾಗಿ ಹದಿನೈದು ವರ್ಷಗಳು ಕಳೆದಿದ್ದವು. ಎಂದರೆ, ಮೇಲೆ ತಿಳಿಸಿದ ಲೆಕ್ಕದಲ್ಲಿ ಧರ್ಮರಾಜಾದಿಗಳ ವಯಸ್ಸು ೮೭ ಮೊದಲಾದ ಘಟ್ಟದಲ್ಲಿತ್ತು. ದ್ರೌಪದಿಯ ವಯಸ್ಸು ಸುಮಾರು ೭೭ ವರ್ಷ. ಆಗಲೂ

---

ನಿರೀಕ್ಷ್ಯ ವಕ್ತ್ರಚಂದ್ರಂ ತೇ ಲಕ್ಷ್ಮ್ಯಾಽನುಪಮಯಾ ಯುತಮ್।
ಕೃತ್ಸ್ನೇ ಜಗತಿ ಕೋ ನೇಹ ಕಾಮಸ್ಯ ವಶಗೋ ಭವೇತ್ ॥ - ಮ.ಭಾ.(೪/೧೪/೧೨-೧೯)

೧ ಮ.ಭಾ.(ವಿರಾಟಪರ್ವ/೭೩/೩೨)

ಮಹಾಭಾರತ ದ್ರೌಪದಿಯ ಸೌಂದರ್ಯವನ್ನು ಮತ್ತೊಮ್ಮೆ ವರ್ಣಿಸುತ್ತದೆ. ಅಷ್ಟು ಜನರ ಮಧ್ಯದಲ್ಲಿ ಸ್ತ್ರೀವೃಂದದಲ್ಲಿ ದ್ರೌಪದಿಯ ಸೌಂದರ್ಯ ಎದ್ದು ಕಾಣುತ್ತಿತ್ತು:

> ಇಯಂ ಪುನಃ ಪದ್ಮದಲಾಯತಾಕ್ಷೀ ಮಧ್ಯಂವಯಃ ಕಿಂಚಿದಿವ ಸ್ಪೃಶಂತೀ ।
> ನೀಲೋತ್ಪಲಾಭಾ ಸುರದೇವತೇವ ಕೃಷ್ಣಾ ಸ್ಥಿತಾ ಮೂರ್ತಿಮತೀವ ಲಕ್ಷ್ಮೀಃ[೧] ॥

ಈ ಎಲ್ಲ ಪ್ರಸಂಗಗಳು ಸಹ ದ್ರೌಪದಿಯ ಬಗ್ಗೆ ಅಶರೀರವಾಣಿ ನುಡಿದ **ಅಜರಾ ಲೋಕಸುಂದರೀ**[೨] ಎಂಬ ಮಾತಿನ ಯಥಾರ್ಥತೆಗೆ ಹಿಡಿದ ಕನ್ನಡಿಯಾಗಿವೆ.

ಈ ಹಿನ್ನೆಲೆಯಲ್ಲಿ ತಾತ್ವಿಕವಾದ ಚಿಂತನೆಯ ಅಗತ್ಯ ಕಂಡುಬರುವುದು. ಮೇಲ್ನೋಟಕ್ಕೆ ಇದು ಒಂದು ಬಗೆಯ ಕಲ್ಪನೆಯೆಂದು ಸಾಮಾನ್ಯರು ಭಾವಿಸಬಹುದು. ಆದರೆ, ಶಾಸ್ತ್ರಗಳ ಪ್ರತಿಪಾದನೆ ಹಿನ್ನೆಲೆಯಲ್ಲಿ ಇಲ್ಲಿಯ ತತ್ವ ಹೀಗಿದೆ. ಮುಕ್ತಿ ಪಡೆಯುವ ಮುನ್ನ ಜೀವರಿಗೆ ಲಿಂಗದೇಹ, ಅನಿರುದ್ಧದೇಹ, ಸ್ಥೂಲದೇಹ ಎಂಬ ಇತರ ಮೂರು ದೇಹಗಳು ಸ್ವರೂಪದೇಹದ ಮೇಲೆ ಆವರಕವಾಗಿರುತ್ತವೆ. ಸ್ವರೂಪದೇಹದ ಹೊರತು ಉಳಿದ ದೇಹಗಳಲ್ಲಿ ಪ್ರಾಕೃತಿಕ ಅಂಶ ಮೇಳೈಸಿರುತ್ತದೆ. ಅದರಲ್ಲೂ ಭೂಮಿಯಲ್ಲಿ ಅವತರಿಸಿದಾಗ ಮನುಷ್ಯಯೋನಿ ಹಾಗೂ ಭೂಮಿಯ ಪರಿಸರ ಎಂಬ ಕಾರಣದಿಂದ ಪ್ರಾಕೃತಿಕವಾದ ಅಂಶ ತುಸು ಮಿಗಿಲಾಗಿಯೇ ಇರುತ್ತದೆ. ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರು ಗುಣಗಳು ಪ್ರತಿಯೊಂದು ಪ್ರಾಕೃತಿಕ ದೇಹದಲ್ಲೂ ಇದ್ದೇ ಇರುವವು. ಅವುಗಳ ಪ್ರಮಾಣದಲ್ಲಿ ಆಗುವ ವ್ಯತ್ಯಾಸದಿಂದಾಗಿ ದೇಹದ ಮೇಲೆ ಆಗುವ ಪರಿಣಾಮವು ವಿಭಿನ್ನವಾಗಿರುವುದು. ಋಜುಗಳ ಪ್ರಾಕೃತ ದೇಹದಲ್ಲೂ ಸತ್ವ ಗುಣದ ಅಂಶ ಪ್ರಧಾನವಾಗಿರುತ್ತದೆ. ಇತರ ಎರಡು ಗುಣಗಳು ನಗಣ್ಯವೆನ್ನುವಷ್ಟು ಅಲ್ಪ ಪ್ರಮಾಣದಲ್ಲಿರುವವು. ಅವತಾರಗಳಲ್ಲೂ ಸಹ ಋಜುಗಳಿಗೆ ಇದೇ ತೆರನಾದ ಹಿರಿಮೆ ಇದ್ದು ದ್ವಾತ್ರಿಂಶಲ್ಲಕ್ಷಣಗಳು ಕಂಡುಬರುವವು. ಇತರ ಜೀವರ ಮೇಲೆ ಕ್ರಮವಾಗಿ ಇತರ ಎರಡು ಗುಣಗಳ ಪ್ರಭಾವ ಹೆಚ್ಚುತ್ತಾ ಹೋಗುವುದು. ದೈತ್ಯರ ಗುಣದಲ್ಲಿ ತಮೋಗುಣದ್ದೇ ಪ್ರಾಚುರ್ಯ. ಕಲಿಯ ದೇಹದಲ್ಲಂತೂ ತಮೋಗುಣದ್ದೇ ಪ್ರಾಧಾನ್ಯ; ಋಜುಗಳ ದೇಹಕ್ಕೆ ನೇರ ವಿರುದ್ಧವೆನ್ನಿಸುವ ದೇಹ ಅವನದು.

ಪ್ರಸ್ತುತ ದ್ರೌಪದಿಯು ಭಾರತೀದೇವಿಯ ಅವತಾರವಾದ್ದರಿಂದ ಅವರು ಋಜುದೇವತೆ. ಅವರ ದೇಹದಲ್ಲಿ ಸತ್ವಗುಣವೇ ಪ್ರಚುರ. ಅವತಾರಕಾಲದಲ್ಲೂ ಅವರದು ದ್ವಾತ್ರಿಂಶಲ್ಲಕ್ಷಣೋಪೇತವಾದ ದೇಹ; ವಾಯುದೇವರ ಹನುಮದಾದಿ ರೂಪಗಳಲ್ಲಿ ಹೇಗೋ ಹಾಗೆ. ಆದ್ದರಿಂದಲೇ ಅವರ ದೇಹ ಪ್ರಾಕೃತಿಕವಾದರೂ ಅದರ ಗುಣಲಕ್ಷಣಗಳು

---

೧ ಮ.ಭಾ.(ಆಶ್ರಮವಾಸಿಕಪರ್ವ/೨೫/೯)

೨ ಮ.ಭಾ.ತಾ.ನಿ.(೧೮/೧೦೭)

ಇತರರ ದೇಹಕ್ಕಿಂತ ತುಂಬಾ ವಿಭಿನ್ನವಾಗಿರುವವು. ಇತರ ಗುಣಗಳಿಂದಾಗಿ ದೇಹದಲ್ಲಿ ಉಂಟಾಗುವ ರೋಗ, ರುಜಿನ, ಮುಪ್ಪು, ಅಶಕ್ತಿ ಮೊದಲಾದವುಗಳು ಅವರನ್ನು ಸರ್ವಥಾ ಬಾಧಿಸದು. ಅವರ ಸ್ಮರಣೆಯೇ ಅಂತಹ ದೋಷಗಳನ್ನು ಪರಿಹರಿಸುವಾಗ ಅವುಗಳ ಬಾಧೆ ಅವರಿಗೆ ತಟ್ಟಲಾರದು ಎಂಬುದು ಕೈಮುತ್ಯಸಿದ್ಧ. ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ ಮೊದಲಾದವುಗಳು ಲೋಹಗಳೇ ಆದರೂ ಸಹ ಅವುಗಳ ಮೇಲೆ ಉಂಟಾಗುವ ಕಾಲದ ಪರಿಣಾಮ ಒಂದೇ ತೆರನಾಗಿರುವುದಿಲ್ಲ. ಕಬ್ಬಿಣಕ್ಕೆ ತುಕ್ಕು ಹಿಡಿಯುತ್ತದೆ. ತಾಮ್ರ ಕಿಲುಬುಗಟ್ಟುವುದು, ಬೆಳ್ಳಿ ಕಪ್ಪಾಗುವುದು. ಆದರೆ, ಚಿನ್ನದ ಮೇಲೆ ಮಾತ್ರ ಯಾವುದೇ ಪರಿಣಾಮವು ಆಗುವುದೇ ಇಲ್ಲ. ಹಳತಾದಂತೆ ಕಬ್ಬಿಣದ ಮೌಲ್ಯ ನಗಣ್ಯವೆನ್ನಿಸುವುದು. ಬೆಳ್ಳಿ ಮೊದಲಾದವುಗಳು ಅಪಮೌಲ್ಯಕ್ಕೊಳಗಾಗುವವು. ಆದರೆ, ಚಿನ್ನದ ಮೌಲ್ಯ ಹಳತಾದಂತೆ ಮತ್ತಷ್ಟು ಹೆಚ್ಚುವುದು. ಋಜುಗಳ ದೇಹ ಅಪ್ಪಟ ಚಿನ್ನಕ್ಕಿಂತ ಪರಿಶುದ್ಧವಾದುದು. ಆದ್ದರಿಂದಲೇ ವಾಯುದೇವರ ಹನುಮದಾದಿ ರೂಪಗಳು ಹೇಗೆ ಮುಪ್ಪು ಮೊದಲಾದವುಗಳಿಗೆ ಅತೀತವೆನ್ನಿಸುವವೋ, ಅದರಂತೆ ದ್ರೌಪದೀದೇವಿಯ ದೇಹವು ಸಹ ವಯಸ್ಸಿನ ಪರಿಣಾಮವನ್ನು ಮೆಟ್ಟಿ ನಿಲ್ಲುವುದು. ಅದಕ್ಕೆಂದೇ ಅವರ ಬದುಕಿನಲ್ಲಿ ವಯಸ್ಸಿನ ಪರಿಣಾಮ ಯಾವ ಹಂತದಲ್ಲೂ ಕಾಣಿಸಿಕೊಳ್ಳದೇ ಅವರು **ಅಜರಾ ಲೋಕಸುಂದರಿಯೇ** ಆಗಿದ್ದರು ಎಂಬುದು ಸ್ಫುಟಪಡುವುದು.

ಹೀಗೊಂದು ಚಿಂತನೆಗೆ ಅವಕಾಶವಿದೆ. ಹೀಗೆ ದ್ರೌಪದಿಯ ರೂಪದ ವರ್ಣನೆಗೆ ಒತ್ತು ನೀಡುವ ಅಗತ್ಯ ಎಲ್ಲಿದೆ? ಅದಕ್ಕೆ ಉತ್ತರ ಹೀಗಿದೆ. ವ್ಯಕ್ತಿಗಳ ಹಿರಿಮೆ-ಗರಿಮೆಗಳನ್ನು ನಿರ್ಣಯಿಸುವ ಮಾನದಂಡವನ್ನು ಶಾಸ್ತ್ರಗಳು ವಿವರಿಸಿವೆ. ಬ್ರಾಹ್ಮಣವರ್ಣದ ವ್ಯಕ್ತಿಗಳ ಹಿರಿಮೆ ನಿರ್ಣಯಕ್ಕೆ ಜ್ಞಾನವೇ ಅಳತೆಗೋಲು. ಎಂದರೆ, ಬ್ರಾಹ್ಮಣರಲ್ಲಿ ಜ್ಞಾನಕ್ಕೆ ಪ್ರಾಧಾನ್ಯವಾದ್ದರಿಂದ ವಯಸ್ಸು ಮೊದಲಾದವುಗಳನ್ನು ಪರಿಗಣಿಸದೇ ಜ್ಞಾನವನ್ನು ಆಧರಿಸಿಯೇ ಯೋಗ್ಯತೆಯನ್ನು ನಿರ್ಣಯಿಸಬೇಕು. ಇಂದೂ ಸಹ ವಿದ್ವಾಂಸರನ್ನು ವಯಸ್ಸಿನ ಲೆಕ್ಕದಲ್ಲಿ ಅಳೆಯದೇ ವಿದ್ವತ್ತಿನ ಲೆಕ್ಕದಲ್ಲಿ ಅಳೆಯುವ ಪದ್ಧತಿ ರೂಢಿಯಲ್ಲಿರುವುದು ಇದಕ್ಕೆ ಗಮಕ.

ಇನ್ನು ಕ್ಷತ್ರಿಯರ ಯೋಗ್ಯತೆಯ ನಿರ್ಣಯ. ಅದಕ್ಕೆ ಬಲವೇ ಆಧಾರ. ಇಲ್ಲಿ ಬಲ ಎಂದರೆ, ಮುಖ್ಯವಾಗಿ ಬಾಹುಬಲ: 'ಯೋ ಯ ಏವ ಬಲಜ್ಯೇಷ್ಠ ಕ್ಷತ್ರಿಯೇಷು ಸ ಉತ್ತಮಃ'. ಕ್ಷತ್ರಿಯರ ಯೋಗ್ಯತೆಯ ನಿರ್ಣಯ ಬಲದ ಆಧಾರದ ಮೇಲೆಯೇ ಎಂಬುದು ಸಹ ರೂಢಿಯಲ್ಲಿ ಬಂದಿರುವ ವಿಷಯವೇ ಆಗಿದೆ. ಈ ಹಿನ್ನೆಲೆಯಲ್ಲಿ ಮಹಾಭಾರತದ ಭೀಮಸೇನ ಸಮಸ್ತ ಕ್ಷತ್ರಿಯರಲ್ಲಿ ಉತ್ತಮ: **ಭೀಮಸೇನಸಮೋ ನಾಸ್ತಿ.**

[1]ವೈಶ್ಯರ ಯೋಗ್ಯತೆಯ ನಿರ್ಣಯಕ್ಕೆ ಧನ-ಧಾನ್ಯರೂಪದ ಸಂಪತ್ತು ಆಧಾರ. ಹೆಚ್ಚು ಶ್ರೀಮಂತನಾದ ವೈಶ್ಯ ಯೋಗ್ಯತೆಯಲ್ಲಿ ಹಿರಿಯ ಎಂದು ಅರ್ಥ. ಶೂದ್ರರಲ್ಲಿ ಮಾತ್ರ ವಯಸ್ಸೇ ಪ್ರಧಾನ.

ಸ್ತ್ರೀಯರ ಯೋಗ್ಯತೆಯ ನಿರ್ಣಯಕ್ಕೆ ಅಳತೆಗೋಲು ಬೇರೆ ತೆರನಾದದ್ದು. ಅವರಲ್ಲಿನ ಹಿರಿಮೆಯ ಅಳತೆಗೋಲು ಎಂದರೆ, ರೂಪವೇ ಆಗಿದೆ: ಯತ್ರ ರೂಪಂ ತತ್ರ ಗುಣಾಃ.

ಈ ಹಿನ್ನೆಲೆಯಲ್ಲಿ ಸ್ತ್ರೀಯರ ಹಿರಿಮೆಯನ್ನು ವಿಶ್ಲೇಷಿಸಿದಾಗ ಮಹಾಭಾರತ ಕಾಲದಲ್ಲಿ ಅಂತಹ ಹಿರಿಮೆಯ ಪರಾಕಾಷ್ಠೆ ಕಂಡುಬರುವುದು ರುಗ್ಮಿಣೀ, ಸತ್ಯಭಾಮೆಯರಲ್ಲಿ. ಅವರಿಬ್ಬರೂ ಸಹ ಮಹಾಲಕ್ಷ್ಮಿಯ ಶ್ರೀ, ಭೂ ಎಂಬ ಎರಡು ರೂಪಗಳು. ಅದರಿಂದಾಗಿಯೇ ಅವರಿಗೆ ಅಂತಹ ಮಹತ್ವ. ಆ ಬಳಿಕದ ಸ್ಥಾನ ದ್ರೌಪದೀ ದೇವಿಯದು; ಅದರಂತೆ ಅವರ ಮತ್ತೊಂದು ರೂಪವಾದ ಕಾಳೀ ಎಂಬ ರೂಪದ್ದು. ಸುಭದ್ರೆ ಮೊದಲಾದ ಇತರ ಸಕಲರ ಸೌಂದರ್ಯವು ಸಹ ದ್ರೌಪದಿಯ ಸೌಂದರ್ಯಕ್ಕೆ ಸಾಟಿಯೆನ್ನಿಸುವಂತಿರಲಿಲ್ಲ.

ಇಂತಹ ರೂಪವು ಸಹ ಸಹಜವಾದ ರೂಪವಾಗಿರಬೇಕು. ಅಲಂಕಾರಾದಿಗಳ ನಿಮಿತ್ತದಿಂದ ಉಂಟಾದ ಹಿರಿಮೆ ಅದರದ್ದಾಗಿರಕೂಡದು. ಅದರಂತೆ ವರ ಮೊದಲಾದ ಇತರ ಕಾರಣಗಳು ಅದಕ್ಕಿರಕೂಡದು[2]. ಇತರ ದೇವತೆಗಳ ಆವೇಶ ಮೊದಲಾದವುಗಳು ಸಹ

---

೧ ಈ ಕಾಲದಲ್ಲೂ ಸಹ ಅಧಿಕಾರಿಗಳ ತಾರತಮ್ಯವನ್ನು ಅವರಿಗಿರುವ ಅಧಿಕಾರದ ವ್ಯಾಪ್ತಿಯ ಹಿನ್ನೆಲೆಯಲ್ಲಿಯೇ ನಿರೂಪಿಸಲಾಗುವುದು. ಆಡಳಿತ ವರ್ಗದವರು ಕ್ಷತ್ರಿಯರಿದ್ದಂತೆ; ಅದರಂತೆ, ಉದ್ದಿಮೆದಾರರನ್ನು ಸಂಪತ್ತಿನ ಹಿನ್ನೆಲೆಯಲ್ಲಿ ಗುರುತಿಸಲಾಗುವುದು ಎಂಬುದನ್ನು ಗಮನಿಸಿದರೆ, ಮಹಾಭಾರತತಾತ್ಪರ್ಯನಿರ್ಣಯದಲ್ಲಿನ ಈ ವಿವರ ಎಷ್ಟು ಸಮಂಜಸ ಎಂಬುದು ಮನವರಿಕೆಯಾಗುವುದು.

೨ ಯತ್ರ ರೂಪಂ ತತ್ರ ಗುಣಾಃ ಭಕ್ತ್ಯಾದ್ಯಾಃ ಸ್ತ್ರೀಷು ನಿತ್ಯಶಃ।
ರೂಪಂ ಹಿ ಸ್ಥೂಲದೃಷ್ಟೀನಾಂ ದೃಶ್ಯಂ ವ್ಯಕ್ತಂ ತತೋ ಹಿ ತತ್ ॥
ಪ್ರಾಯೋ ವೇತ್ತುಂ ನ ಶಕ್ಯಂತೇ ಭಕ್ತ್ಯಾದ್ಯಾಃ ಸ್ತ್ರೀಷು ಯತ್ ತತಃ।
ಯಾಸಾಂ ರೂಪಂ ಗುಣಾಸ್ತಾಸಾಂ ಭಕ್ತ್ಯಾದ್ಯಾ ಇತಿ ನಿಶ್ಚಯಃ॥
ತಚ್ಚ ನೈಸರ್ಗಿಕಂ ರೂಪಂ ದ್ವಾತ್ರಿಂಶಲ್ಲಕ್ಷಣೈರ್ಯುತಮ್ ।
ನಾಲಕ್ಷಣಂ ವಪುರ್ಮಾತ್ರಂ ಗುಣಹೇತುಃ ಕಥಂಚನ॥
ಆಸುರೀಣಾಂ ವರಾದೇಸ್ತು ವಪುರ್ಮಾತ್ರಂ ಭವಿಷ್ಯತಿ।
ನ ಲಕ್ಷಣಾನ್ಯತಸ್ತಾಸಾಂ ನೈವ ಭಕ್ತಿಃ ಕಥಂಚನ॥
ತಸ್ಮಾದ್ ರೂಪಗುಣೋದಾರಾ ಜಾನಕೀ ರುಗ್ಮಿಣೀ ತಥಾ।
ಸತ್ಯಭಾಮೇತ್ಯಾದಿರೂಪಾ ಶ್ರೀಃ ಸರ್ವಪರಮಾ ಮತಾ॥
ತತಃ ಪಶ್ಚಾತ್ ದ್ರೌಪದೀ ಚ ಸರ್ವಾಭ್ಯೋ ರೂಪತೋ ವರಾ।
ಭೂಭಾರಕ್ಷಪಣೇ ಸಾಕ್ಷಾದಂಗಂ ಭೀಮವದೀಶಿತುಃ॥
ಹಂತಾ ಚ ವೈರಹೇತುಶ್ಚ ಭೀಮಃ ಪಾಪಜನಸ್ಯ ತು।
ದ್ರೌಪದೀ ವೈರಹೇತುಃ ಸಾ ತಸ್ಮಾದ್ಭೀಮಾದನಂತರಾ॥ -ಮ.ಭಾ.ತಾ.ನಿ.(೨/೩೬-೪೨)

ಇದಕ್ಕೆ ಕಾರಣವಾಗಲಾರದು. ವರದಿಂದಾಗಿ ಕೆಲವೊಮ್ಮೆ ಸಾಮಾನ್ಯರು ಸಹ ಅಸಾಮಾನ್ಯ ಸುಂದರಿ ಎನ್ನಿಸಬಹುದು. ಸುಭದ್ರೆಯಲ್ಲಿ ಪಾರ್ವತಿ ಆವೇಶದಿಂದಾಗಿ ಒಂದು ವಿಶೇಷ ಸೌಂದರ್ಯ ಉಂಟಾಗಿತ್ತು. ದುರ್ಯೋಧನನ ಪತ್ನಿಯಲ್ಲಿ ಪಾರ್ವತಿಯ ಆವೇಶವಿದ್ದಿತು[೧]. ತಾಟಕಿಯ ಅವತಾರಳಾಗಿದ್ದ ಪೂತನಿಯಲ್ಲಿ ಉರ್ವಶಿಯ ಆವೇಶದಿಂದಾಗಿ ಸೌಂದರ್ಯ ಉಂಟಾಗಿತ್ತು. ಇನ್ನು ವರದಿಂದಾಗಿ ಸೌಂದರ್ಯ ಹೆಚ್ಚಬಹುದು. ವರದಿಂದಾಗಿ ಆವೇಶವೂ ಲಭಿಸಬಹುದು. ಅಲಂಕಾರಾದಿಗಳಿಂದ ಸೌಂದರ್ಯ ಹೆಚ್ಚುವುದಂತೂ ಲೋಕದಲ್ಲಿ ಪ್ರಸಿದ್ಧವೇ ಆದ ವಿಚಾರ.

ಆದರೆ, ದ್ರೌಪದಿಯ ಸೌಂದರ್ಯ ಇದಾವ ಕಾರಣಕ್ಕೂ ಆಗಿರದೇ ಕೇವಲ ಸಹಜ ಸೌಂದರ್ಯವೇ ಆಗಿದ್ದಿತು. ದ್ರೌಪದಿಯು ನಿರಾಭರಣಸುಂದರಿ ಎಂಬುದನ್ನು ಈಗಾಗಲೇ ವಿವರಿಸಿ ಆಗಿದೆ. ಆದ್ದರಿಂದ ಅಲಂಕಾರಾದಿಗಳ ನಿಮಿತ್ತವಾದ ಸೌಂದರ್ಯ ಅವರದಾಗಿರಲಿಲ್ಲ. ದ್ರೌಪದಿಯಲ್ಲಿ ಉಮಾ ಮೊದಲಾದ ದೇವತಾಸ್ತ್ರೀಯರ ಆವೇಶವಿದ್ದಿದ್ದು ನಿಜ. ಆದರೆ, ಅವರಾರು ಸಹ ಭಾರತೀದೇವಿಗಿಂತ ಮಿಗಿಲಾಗುವುದಿರಲಿ, ಸಮರೂ ಅಲ್ಲ. ಎಂದರೆ ಆವೇಶದಿಂದಾಗಿ ಸೌಂದರ್ಯ ಹೆಚ್ಚುವುದು ಆವೇಶಿಸಿದವರು ಇವರಿಗಿಂತ ಉತ್ತಮರಾಗಿದ್ದಾಗ ಮಾತ್ರ. ಆದರೆ, ಪಾರ್ವತಿ ಮೊದಲಾದವರು ಭಾರತೀದೇವಿಗಿಂತ ತಾರತಮ್ಯದಲ್ಲಿ ಕಡಿಮೆಯವರಾದ್ದರಿಂದ ಅವರ ಆವೇಶ ಅವರ ವಿಶಿಷ್ಟ ಸೌಂದರ್ಯಕ್ಕೆ ಕಾರಣವಾಗಿರಲಿಲ್ಲ. ಈ ಎಲ್ಲ ವಿವೇಚನೆಯಿಂದ ದ್ರೌಪದಿಯ ಸೌಂದರ್ಯ ಸಹಜವಾದ್ದು ಅಪೂರ್ವವಾದದ್ದು ಶಾಶ್ವತವಾದದ್ದು ಅಬಾಧಿತವಾದದ್ದು ಎಂದು ಸ್ಫುಟಪಡುವುದರಿಂದ ಅವರ ಹಿರಿಮೆ-ಗರಿಮೆಗಳು ಜೀವಕೋಟಿಯಲ್ಲಿನ ಸಮಸ್ತ ಸ್ತ್ರೀವೃಂದಕ್ಕಿಂತ ಮಿಗಿಲಾಗಿದ್ದಿತು ಎಂಬ ಅಂಶ ತಿಳಿಯುವುದು.

ಇನ್ನು ಇಂತಹ ಸೌಂದರ್ಯದ ಪರಿಣಾಮದ ಚಿಂತನೆ. ರೂಪವು ಭಗವತ್ಕಾರ್ಯ ಸಾಧನೆಗೆ ನೆರವಾಗುವ ರೀತಿ ಎಂತಹುದು? ಪುರುಷರಲ್ಲಿ ಬ್ರಾಹ್ಮಣರಲ್ಲಿನ ಜ್ಞಾನ ಮಿಥ್ಯಾವಾದಿಗಳ ನಿಗ್ರಹಕ್ಕೆ ಕಾರಣವಾಗಿ ಯಥಾರ್ಥಜ್ಞಾನದ ಪ್ರಸಾರಕ್ಕೆ ಕಾರಣವಾಗುವುದರಿಂದ ಅದು ಭಗವಂತನ ಸೇವೆ ಎಂದು ಪರಿಗಣಿತವಾಗುವುದು. ಕ್ಷತ್ರಿಯರಲ್ಲಿನ ಬಲ ದುಷ್ಟರ ನಿಗ್ರಹಕ್ಕೆ ಕಾರಣವಾಗಿ ಜನರ ನೆಮ್ಮದಿಯ ಜೀವನಕ್ಕೆ ನೆರವಾಗಿ ಭಗವತ್ಪೂಜೆ ಎನ್ನಿಸುವುದು. ವೈಶ್ಯರಲ್ಲಿನ ಧನ-ಧಾನ್ಯದ ಸಂಪತ್ತಿ ದ್ರೋಹವಿಲ್ಲದ ಉತ್ತಮ ವ್ಯಾಪಾರಕ್ಕೆ ಕಾರಣವಾಗಿ ಯಥಾರ್ಥ ಬದುಕಿಗೆ ನೆರವಾಗುವ ಮೂಲಕ ಭಗವದಾರಾಧನೆಯಾಗುವುದು. ಸ್ತ್ರೀಯರಲ್ಲಿನ ರೂಪ ಹೇಗೆ ಭಗವತ್ಕಾರ್ಯ ಸಾಧನೆಯಾಗಲು ಸಾಧ್ಯ?

---

೧ ಉದ್ವಾಹ್ಯ ಕಾಶಿತನಯಾಂ ಗಿರಿಜಾಭಿವಿಷ್ಟಾಂ
ಸಾಕ್ಷಾನ್ನರೇಷು ಜನಿತಾಂ ಪ್ರಥಮಾಮಲಕ್ಷ್ಮೀಮ್ । -ಮ.ಭಾ.ತಾ.ನಿ.(೧೯/೨೦೧)

ಇದಕ್ಕೆ ಉತ್ತರ ಹೀಗಿದೆ. ಜ್ಞಾನಕಾರ್ಯ, ಬಲಕಾರ್ಯಗಳು ಬ್ರಾಹ್ಮಣ, ಕ್ಷತ್ರಿಯರಿಂದ ನಡೆಯುವುದು ನಿಜ. ವಿಶೇಷವಾಗಿ ಕ್ಷತ್ರಿಯರಿಂದ ದುಷ್ಟರ ನಿಗ್ರಹವಾಗಿ ಸಮಾಜಕ್ಕೆ ಒಳಿತಾಗಬೇಕು. ಆದರೆ, ದುಷ್ಟರ ದುಷ್ಟತನ ಪ್ರಕಟವಾದಾಗ ಅವರ ನಿಗ್ರಹ ಅರ್ಥವತ್ತಾಗುವುದು. ಅಂತಹ ದುಷ್ಟತನದ ಪ್ರಕಟಣೆಗೆ ಇರುವ ಅವಕಾಶಗಳಲ್ಲಿ ಅತ್ಯಂತ ಮಿಗಿಲಾದದ್ದು ಎಂದರೆ ಅವರಿಗಿರುವ ಪರಸ್ತ್ರೀಯರ ಮೇಲಿನ ವ್ಯಾಮೋಹ. ಇತರ ಸಕಲದೋಷಗಳಿಗಿಂತ ಪರಸ್ತ್ರೀಮೋಹ ಅದರಲ್ಲೂ ಸ್ವೋತ್ತಮಸ್ತ್ರೀಯರಲ್ಲಿ ಮಾಡುವ ಕಾಮನೆ ಪುರುಷನ ಅಧಃಪತನಕ್ಕೆ ಮುಖ್ಯ ಕಾರಣ ಎಂಬ ಮಾತು ಶಾಸ್ತ್ರಗಳಲ್ಲಿ ಬಂದಿದೆ[1]. ಅಂತಹ ಪರಸ್ತ್ರೀವ್ಯಾಮೋಹರೂಪದ ದೋಷವು ಹೊರಹೊಮ್ಮಲು ಸ್ತ್ರೀಯರ ಸೌಂದರ್ಯ ಕಾರಣವಾಗುವುದು. ದುರ್ಯೋಧನ, ಜಯದ್ರಥ, ಕೀಚಕ ಮೊದಲಾದ ದುಷ್ಟರ ದುಷ್ಟತನ ಪ್ರಕಟವಾದದ್ದು ಅವರು ದ್ರೌಪದಿಯ ಬಗ್ಗೆ ಸಲ್ಲದ ವ್ಯಾಮೋಹವನ್ನು ಬೆಳೆಸಿಕೊಂಡಾಗ. ದ್ಯೂತದಲ್ಲಿ ದುರ್ಯೋಧನ, ಕಾಡಿನಲ್ಲಿ ಜಯದ್ರಥ, ವಿರಾಟನಗರದಲ್ಲಿ ಕೀಚಕ ಹೀಗೆ ಆ ಕಾಲದ ಮಹಾದುಷ್ಟರ ದಂಡು ದ್ರೌಪದಿಯ ನಿಮಿತ್ತದಿಂದಾಗಿ ತಮ್ಮ ದುಷ್ಟತನವನ್ನು ಪ್ರಕಟಿಸುವಂತಾಯಿತು. ಆ ಮೂಲಕವಾಗಿ ಅವರು ದ್ರೌಪದೀಪತಿಯಾದ ಭೀಮಸೇನನ ಕೋಪಕ್ಕೆ ಗುರಿಯಾಗಿ ದುರಂತದ ಸಾವನ್ನು ಕಂಡರು. ಇಲ್ಲಿ ದುರ್ಯೋಧನಾದಿಗಳ ವಧೆಯಾದದ್ದು ಭೀಮಸೇನನಿಂದಾದ್ದರಿಂದ ಆತನ ಭಗವತ್ಕಾರ್ಯ ಸಾಧನೆ ಸರ್ವಶ್ರೇಷ್ಠವೆನ್ನಿಸಿತು. ಅದಕ್ಕೆ ದ್ರೌಪದಿಯ ಸೌಂದರ್ಯ ಕಾರಣವಾದ್ದರಿಂದ ಅಂತಹ ಭೀಮನ ಕಾರ್ಯಕ್ಕೆ ಪೂರಕವೆನ್ನಿಸುವ ಮೂಲಕ ಭಗವತ್ಪೂಜೆಯಾಯಿತು. ಆದ್ದರಿಂದ ದ್ರೌಪದಿಯ ರೂಪದ ಚಿಂತನೆ ಅವರ ಸಾಧನೆಯ ಚಿಂತನೆಯಾಗಿ ಗೋಚರಿಸುವುದು[2].

## ದ್ರೌಪದಿಯ ಅವತಾರದ ಹಿನ್ನೆಲೆ

ಅದೊಂದು ವಿಚಿತ್ರವಾದ ಪ್ರಸಂಗ. ಪಾರ್ವತೀ, ಶಚೀ, ಶ್ಯಾಮಲಾ ಹಾಗೂ ಉಷಾ ಈ ನಾಲ್ವರು ಕ್ರಮವಾಗಿ ಶಿವ, ಇಂದ್ರ, ಯಮ ಹಾಗೂ ಅಶ್ವಿನೀದೇವತೆಗಳ ಪತ್ನಿಯರು. ಅವರೆಲ್ಲ ಒಟ್ಟಾಗಿ ಸಂಚೊಂದನ್ನು ಹೂಡಿದರು. ಒಂದೆಡೆ ಧ್ಯಾನಮಗ್ನರಾಗಿ ಕುಳಿತಿದ್ದ ಬ್ರಹ್ಮದೇವರ ಬಳಿಗೆ ತಾವೆಲ್ಲ ಒಂದೇ ದೇಹದಲ್ಲಿ ನೆಲೆಸಿ ಕಾಣಿಸಿಕೊಳ್ಳಲು ನಿಶ್ಚಯಿಸಿದರು.

---

೧ ಧರ್ಮೋ ಗುಣೋತ್ತಮಾನಂ ತು ಸ್ಪೃತ್ಯೈವಾಂಧಂತಮೋ ವ್ರಜೇತ್ ।
ಗುಣಸರ್ವಸ್ವಹಾನಿಃ ಸ್ಯಾದುತ್ತರೋತ್ತರತೋಽತ್ರ ಚ ॥ -ಮ.ಭಾ.ತಾ.ನಿ.(೨೯/೩೬)

೨ ತತಃ ಪಶ್ಚಾತ್ ದ್ರೌಪದೀ ಚ ಸರ್ವಾಭ್ಯೋ ರೂಪತೋ ವರಾ ।
ಭೂಭಾರಕ್ಷಪಣೇ ಸಾಕ್ಷಾದಂಗಂ ಭೀಮವದೀಶಿತುಃ ॥
ಹಂತಾ ಚ ವೈರಹೇತುಶ್ಚ ಭೀಮಃ ಪಾಪಜನಸ್ಯ ತು ।
ದ್ರೌಪದೀ ವೈರಹೇತುಃ ಸಾ ತಸ್ಮಾದ್ಭೀಮಾದನಂತರಾ ॥ -ಮ.ಭಾ.ತಾ.ನಿ(೨/೪೧,೪೨)

ಹಾಗೆ ತಾವು ಒಂದೇ ದೇಹದಲ್ಲಿ ಇರುವುದನ್ನು ಅವರು ಗುರುತಿಸಬಲ್ಲರೇ? ಎಂಬುದು ಅವರ ಜಿಜ್ಞಾಸೆಯಾಗಿತ್ತು. ಬ್ರಹ್ಮದೇವರು ಚತುರ್ಮುಖರು. ಅವರ ನಾಲ್ಕು ಮುಖಗಳು ನಾಲ್ಕು ದಿಕ್ಕನ್ನು ನೋಡುವ ಮೂಲಕ ಅವರು ಸರ್ವಜ್ಞರು ಎಂಬುದನ್ನು ಸೂಚಿಸುವವು. ಅವರ ಜ್ಞಾನದ ಹಿರಿಮೆಯು ಸಹ ಅಂತಹುದೇ ಆಗಿತ್ತು. ಅವರಿಗೆ ಲಕ್ಷ್ಮೀನಾರಾಯಣರ ಹೊರತು ಇತರ ಎಲ್ಲರ, ಎಲ್ಲದರ ಬಗ್ಗೆಯೂ ಸಹ ಪರಿಪೂರ್ಣವಾದ ಜ್ಞಾನ ಸದಾ ಇರುವುದು. ಋಜುಗಣದ ಜೀವರ ಹಿರಿಮೆಯೇ ಅಂತಹುದು. ಅದಕ್ಕೆಂದೇ ಪೂರ್ಣಪ್ರಜ್ಞ, ಸರ್ವಜ್ಞ ಎಂದು ಅವರು ಪ್ರಸಿದ್ಧರು. ಇಷ್ಟು ಮಾತ್ರದಿಂದಲೇ ಅವರು ತಮ್ಮನ್ನು ಖಚಿತವಾಗಿ ಗುರುತಿಸುವರು ಎಂಬುದನ್ನು ಆ ನಾಲ್ವರು ದೇವತೆಗಳು ತಿಳಿಯಬಹುದಿತ್ತು. ಆದರೆ, ಪ್ರಾರಬ್ಧ ಕರ್ಮ ಅವರನ್ನು ಅಂತಹ ಘೋರ ಅಪಚಾರಕ್ಕೆ ತೊಡಗಿಸಿತ್ತು. ಬ್ರಹ್ಮದೇವರು ಅವರನ್ನು ನೋಡಿದರು, ಸಹಜವಾಗಿಯೇ ಗುರುತಿಸಿದರೂ ಸಹ. ಆದರೆ, ಅದನ್ನು ಅವರು ತೋರ್ಪಡಿಸದೇ ಸುಮ್ಮನೆ ಇದ್ದುಬಿಟ್ಟರು. ಇವರಿಗೆ ಗೊಂದಲವೋ ಗೊಂದಲ. ವಿಷಯ ನಿಶ್ಚಯವಾಗಲಿಲ್ಲ ಎನ್ನಿಸಿತು. ಮತ್ತೊಮ್ಮೆ ಅದೇ ರೀತಿಯಾಗಿ ಒಂದೇ ದೇಹದಲ್ಲಿ ನೆಲೆಸಿ ಅವರ ಮುಂದೆ ಓಡಾಡಿದರು. ಆಗಲೂ ಬ್ರಹ್ಮದೇವರ ಪ್ರತಿಕ್ರಿಯೆ ಅವರಿಗೆ ತಿಳಿಯದಾಯಿತು. ಮತ್ತೊಮ್ಮೆಯು ಹಾಗೆಯೇ ಮಾಡಿದರು. ಆಗಲೂ ಬ್ರಹ್ಮದೇವರ ಪ್ರತಿಕ್ರಿಯೆ ಅದೇ ತೆರನಾಗಿದ್ದಿತು.

ಅವರಿಗೆ ಜಿಜ್ಞಾಸೆ ಹೆಚ್ಚಿತು. ಆಗೊಮ್ಮೆ ಆ ನಾಲ್ವರು ಪ್ರತ್ಯೇಕವಾಗಿಯೇ ಬ್ರಹ್ಮದೇವರ ಮುಂದೆ ತಮ್ಮ ಪತಿಗಳ ಸಮೇತವಾಗಿ ಓಡಾಡಿದರು; ಓಡಾಟದೊಂದಿಗೆ ವಿಲಾಸವನ್ನು ಸಹ ಪ್ರದರ್ಶಿಸಿದರು. ಪತಿ-ಪತ್ನಿಯರ ವಿಲಾಸ-ವಿಹಾರಗಳು ತಪ್ಪೇನಲ್ಲ. ಆದರೆ, ಅದಕ್ಕೆ ಒಂದು ದೇಶ, ಕಾಲ ಮೊದಲಾದವುಗಳ ಔಚಿತ್ಯ ಅಗತ್ಯ. ಗುರು-ಹಿರಿಯರ ಮುಂದೆ ವಿಲಾಸವನ್ನು ಮೆರೆಯುವುದು ಸಭ್ಯತೆ ಎನ್ನಿಸದು. ಅದನ್ನು ಅವರು ತಿಳಿಯದವರೇನಲ್ಲ. ಆದರೆ ಪ್ರಾರಬ್ಧಕರ್ಮ ಅವರಿಂದ ಅಂತಹ ಅಕಾರ್ಯವನ್ನು ಮಾಡಿಸಿತ್ತು. ಈ ಬಾರಿ ಬ್ರಹ್ಮದೇವರು ಶಾಪವನ್ನು ನೀಡಿದರು; "ನೀವು ಹೀಗೆ ನನ್ನನ್ನು ಪರೀಕ್ಷಿಸುವಂತಹ ಅಪಚಾರವನ್ನು ಮಾಡಿರುವುದು ನಾಲ್ಕನೇ ಬಾರಿ ಅದಕ್ಕಾಗಿ ನೀವು ನಾಲ್ಕು ಜನ್ಮ ಭೂಮಿಯಲ್ಲಿ ಹುಟ್ಟಬೇಕು. ನೀವು ಮೂರು ಬಾರಿ ಏಕದೇಹದಲ್ಲಿ ಸೇರಿಕೊಂಡು ನನ್ನನ್ನು ಪರೀಕ್ಷಿಸಲು ಬಂದಿದ್ದರಿಂದ ಮೂರು ಬಾರಿ ಹಾಗೂ ವಿಲಾಸ ಪ್ರದರ್ಶನಕ್ಕಾಗಿ ಮತ್ತೊಮ್ಮೆ ಬಂದಿದ್ದರಿಂದ ಇನ್ನೊಂದು ಬಾರಿ ಹೀಗೆ ಒಟ್ಟು ನಾಲ್ಕು ಬಾರಿ ಒಂದೇ ದೇಹದಲ್ಲಿಯೇ ಸೇರಿಕೊಂಡು ಹುಟ್ಟುವಂತಾಗಲಿ. ನಿಮ್ಮ ಪತಿಯರೊಂದಿಗೆ ತೋರಿಸಿದ ವಿಲಾಸವು ಸಹ ಸಭ್ಯತೆ ಮೀರಿತ್ತು. ಅದಕ್ಕಾಗಿ ಒಂದು ಜನ್ಮದಲ್ಲಿ ನಿಮಗೆ ಪರಪುರುಷರ ಸಂಪರ್ಕವಾಗಲಿ". ಬ್ರಹ್ಮದೇವರ ಮಾತು ಎಂದೂ ಪ್ರತಿ ಇಲ್ಲದಂತಹುದು. ಸಾಮಾನ್ಯವಾಗಿ ಜ್ಞಾನಿಗಳಾದ ವಿಪ್ರರ ಶಾಪವೇ

ಸುಳ್ಳಾಗದು. ಬ್ರಹ್ಮದೇವರಂತೂ ವಿಪ್ರಕುಲಕ್ಕೆ ಅಭಿಮಾನಿ ಎನ್ನಿಸಿದ ಸರ್ವಶ್ರೇಷ್ಠ ವಿಪ್ರತ್ವವನ್ನು ಹೊಂದಿದವರು. ಸತ್ಯಲೋಕಾಧಿಪತಿಗಳು. ಅವರ ಬಾಯಿಂದ ಬಂದ ಮಾತು ಎಂದೂ ಸುಳ್ಳಾಗದು[೧]. ಸದಾ ಸತ್ಯವೇ ಆಗುವಂತಹುದು. ಹಿಂದೊಮ್ಮೆ ಸತ್ಯಲೋಕದ ಸಭೆಯಲ್ಲಿ ಗಂಗೆ ಆಗಮಿಸಿದಾಗ ಗಾಳಿಗೆ ಅವಳ ಸೆರಗು ಹಾರಿತ್ತು. ಆಗ ಗಂಗೆಯ ಪತಿಯೆನ್ನಿಸಿದ ವರುಣನ ಅವತಾರವಾದ ಮಹಾಭಿಷಕ್ ಆ ಸಭೆಯಲ್ಲಿ ಮಂಡಿಸಿದ್ದ. ಇತರ ದೇವತೆಗಳು ಆ ಸಮಯದಲ್ಲಿ ತಲೆ ಬಗ್ಗಿಸಿ ಆ ದೃಶ್ಯವನ್ನು ನೋಡದೇ ಪುಣ್ಯಭಾಗಿಗಳಾದರು. ಆದರೆ, ಅವಳು ತನ್ನ ಪತ್ನಿ ಎಂಬ ಭಾವದಿಂದ ಮಹಾಭಿಷಕ್ ಮಾತ್ರ ಆ ರೀತಿ ನಡೆದುಕೊಳ್ಳದೇ ನೆಟ್ಟ ನೋಟದಿಂದ ಗಂಗೆಯನ್ನು ದಿಟ್ಟಿಸಿದ. ಕೂಡಲೇ ಬ್ರಹ್ಮದೇವರು ಶಪಿಸಿದ್ದರು. "ಸಭಾಮರ್ಯಾದೆಯನ್ನು ಉಲ್ಲಂಘಿಸಿದ ಕಾರಣ ನೀನು, ನಾನು ಈಗಾಗಲೇ ಶಾಪ ನೀಡಿರುವಂತೆ ಕೂಡಲೇ ಭೂಮಿಯಲ್ಲಿ ಜನಿಸು. ಶಂತನು ಎಂಬ ಹೆಸರನ್ನು ಹೊಂದಿ ಜೀವಿಸು".

ಬ್ರಹ್ಮದೇವರು ಹೀಗೆ ಅಪಚಾರಕ್ಕೆ ತಕ್ಕ ಶಿಕ್ಷೆಯನ್ನು ನೀಡುವ ಮೂಲಕ ಭಗವತ್ಕಾರ್ಯವನ್ನು ನೆರವೇರಿಸುವ ಮಹಾಧರ್ಮಿಷ್ಠರು. ಅದಕ್ಕೆಂದೇ ಅವರಿಗೆ ಅಂತಹ ಉನ್ನತ ಪದವಿ ಲಭಿಸಿತ್ತು. ಪ್ರಸ್ತುತ ಪ್ರಸಂಗದಲ್ಲಿ ನಡೆದದ್ದು ಸಹ ಇದರಂತೆಯೇ. ಬ್ರಹ್ಮದೇವರ ಶಾಪ ಎಂದರೆ, ಇತರ ಋಷಿ, ಮುನಿಗಳು ನೀಡುವ ಶಾಪದಂತೆ ಅವರ ತಪಸ್ಸಿನ ಕ್ಷಯಕ್ಕೆ ಕಾರಣವಾಗುವಂತಹ ದೋಷವಲ್ಲ. ಅದು ನಿಜ ಅರ್ಥದಲ್ಲಿ ಅವರು ನೀಡಿದ ಶಿಕ್ಷೆ ಎಂದು ತಿಳಿಯಬೇಕು. ಆದರಿಂದ ಅವರಿಗೆ ವಿಶೇಷವಾದ ಪುಣ್ಯವು ಲಭಿಸುವುದೇ ಹೊರತು, ಪುಣ್ಯಕ್ಕೆ ಹಾನಿ ಉಂಟಾಗದು.

ಬ್ರಹ್ಮದೇವರ ಶಾಪದ ಅಮೋಘತೆಯನ್ನು ಬಲ್ಲ ಆ ನಾಲ್ವರು ಘೋರ ಚಿಂತೆಗೆ ಈಡಾದರು. ಆ ಶಾಪಕ್ಕೆ ಪರಿಹಾರವಿಲ್ಲ. ಪರಪುರುಷನ ಸಂಪರ್ಕಕ್ಕೆ ಕಾರಣವಾಗುವ ಶಾಪವಂತೂ ತಮ್ಮ ಪಾವಿತ್ರ್ಯಕ್ಕೆ ಧಕ್ಕೆ ಉಂಟು ಮಾಡುವುದು ಖಚಿತ. ಕೊನೆಗೂ ಅವರಿಗೆ ಪರಿಹಾರದ ಮಾರ್ಗ ಗೋಚರಿಸಿತು. ವಾಯುಪತ್ನಿಯಾದ ಭಾರತೀದೇವಿ ಯಾವ ಕಾಲಕ್ಕೂ ಧರ್ಮ ತಪ್ಪದ ಪರಿಶುದ್ಧ ಧರ್ಮನಿಷ್ಠೆಯನ್ನು ಹೊಂದಿದವರು. ಅವರನ್ನು ಪ್ರಾರ್ಥಿಸಿಕೊಂಡರೆ ತಮ್ಮ ಅಭಿಲಾಷೆ ಸಿದ್ಧಿಸುವುದು. ಅವರು ತಮ್ಮನ್ನೆಲ್ಲ ತಮ್ಮೊಂದಿಗೆ ಸೇರಿಸಿಕೊಂಡು ಒಂದೇ ದೇಹದಲ್ಲಿ ಜನಿಸಿದರೆ ತಮಗೆ ಸಂಪೂರ್ಣ ಭದ್ರತೆ ಲಭಿಸುವುದು. ವಾಯುಪತ್ನಿಯಾದ ಅವರನ್ನು ಕೆಣಕುವ ಸಾಮರ್ಥ್ಯ ಯಾರಿಗೂ ಸರ್ವಥಾ ಇಲ್ಲ. ತಮಗೆ ಒಂದು ಜನ್ಮದಲ್ಲಿ ಮಾತ್ರ ಪರಪುರುಷ ಸಂಪರ್ಕದ ಅಪಾಯವಿದ್ದರೂ ಉಳಿದ ಮೂರು ಜನ್ಮಗಳಲ್ಲೂ ವರಬಲ ಮೊದಲಾದವುಗಳ ಹಿನ್ನೆಲೆಯಲ್ಲಿ ದೈತ್ಯರ ಆಕ್ರಮಣದ ಅಪಾಯ ಸಂಭವಿಸಬಹುದು. ಆದ್ದರಿಂದ ನಾಲ್ಕು ಜನ್ಮದಲ್ಲೂ ಭಾರತೀದೇವಿಯ ದೇಹದೊಂದಿಗೆ

೧ ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ। - ಭಾಗವತ (೨//೬/೩೩)

ತಾವು ಜನಿಸಿದ್ದಲ್ಲಿ ಯಾವ ದುಷ್ಪರ ಅಪಾಯವು ಇರದು. ಇನ್ನು ಬ್ರಹ್ಮದೇವರ ಶಾಪ. ಭಾರತೀದೇವಿಯನ್ನು ವಾಯುದೇವರ ಹೊರತು ಬೇರಾರು ಸಹ ಮುಟ್ಟಲಾರರು. ಅವರ ಸಾಮರ್ಥ್ಯವೇ ಅಂತಹುದು. ವಾಯುದೇವರು ಭಾರತೀದೇಹದಲ್ಲಿನ ತಮ್ಮನ್ನು ಮುಟ್ಟಿದರೆ, ಅದು ಅಪಾವಿತ್ರ್ಯಕ್ಕೆ ಕಾರಣವಾಗದು. ಪವನರಾದ ಅವರ ಸ್ಪರ್ಶ ಪಾವನಕರವೇ ಹೊರತು ದೋಷವೆನ್ನಿಸದು. ಪರಿಶುದ್ಧಸ್ವರೂಪದ ಅವರು ಪರಸ್ತ್ರೀಯರಾದ ತಮ್ಮನ್ನು ಸ್ಪರ್ಶಿಸುವುದು ತಂದೆ ಮಗಳನ್ನು ಪ್ರೀತಿಯಿಂದ ಸ್ಪರ್ಶಿಸಿದಂತೆ ತಾರಕವೇ ಹೊರತು ಮಾರಕವಾಗದು. ಇದರಿಂದಾಗಿ ಬ್ರಹ್ಮದೇವರ ಶಾಪವು ಸಹ ಸತ್ಯವೆನ್ನಿಸುವುದು; ತಮ್ಮ ಚಾರಿತ್ರ್ಯಕ್ಕೂ ಕಳಂಕ ತಟ್ಟದು.

ಇಂತಹ ಯೋಚನೆಯಿಂದ ಅವರ ಸಮಸ್ಯೆಗೆ ಪರಿಹಾರ ಲಭಿಸಿತ್ತು. ಮುಂದಿನದು ಶ್ರೀಭಾರತೀದೇವಿಯ ಅನುಗ್ರಹವನ್ನು ಸಂಪಾದಿಸುವ ಕಾರ್ಯ. ಅದಕ್ಕಾಗಿ ಅವರು ನಾಲ್ವರು ಭಾರತೀದೇವಿಯನ್ನು ಕುರಿತು ಉಗ್ರವಾದ ತಪಸ್ಸಿಗೆ ತೊಡಗಿದರು. ದಿನಗಳು ಕಳೆದವು. ಮಾಸಗಳು, ಋತುಗಳು ಸಾಗಿದವು. ವರ್ಷಗಳೂ ಉರುಳಿದವು. ಕೊನೆಗೆ ಸಾವಿರ ವರ್ಷಗಳಷ್ಟು ದೀರ್ಘಕಾಲ ಸಂದಿತು. ಆಗ ಭಾರತೀದೇವಿಯು ಪ್ರತ್ಯಕ್ಷಳಾಗಿ ಅವರಿಗೆ ವರ ಬೇಡಲು ತಿಳಿಸಿದರು. ಅವರೆಲ್ಲ ತಮಗೆ ಒದಗಿದ್ದ ಬ್ರಹ್ಮದೇವರ ಶಾಪವನ್ನು ಅರಿಕೆಮಾಡಿಕೊಂಡು ಅದರ ಪರಿಹಾರಕ್ಕಾಗಿ ಸ್ವತಃ ಭಾರತೀದೇವಿಯೇ ತಮ್ಮನ್ನೆಲ್ಲ ತಮ್ಮ ದೇಹದಲ್ಲಿ ಸೇರಿಸಿಕೊಂಡು ನಾಲ್ಕು ಜನ್ಮ ಭೂಮಿಯಲ್ಲಿ ಅವತರಿಸಬೇಕು ಎಂದು ಬೇಡಿಕೊಂಡರು.

ಇದು ಸಾಮಾನ್ಯ ಬೇಡಿಕೆಯಾಗಿರಲಿಲ್ಲ. ಶಾಪ ಅನುಭವಿಸಬೇಕಾದದ್ದು ಅವರು. ಅವರ ಉದ್ಧಾರಕ್ಕಾಗಿ ತಾವು ತಮಗೆ ಮೆಚ್ಚುಗೆಯೆನ್ನಿಸದ ಭೂಲೋಕದಲ್ಲಿ ಅವತರಿಸಬೇಕು. ಅದೂ ಒಂದಲ್ಲ ಎರಡಲ್ಲ ನಾಲ್ಕು ಜನ್ಮಗಳಷ್ಟು ದೀರ್ಘಕಾಲ. ಒಂದು ರೀತಿಯಲ್ಲಿ ಇದು ಈಡೇರಿಸಲು ಯೋಗ್ಯವೆನ್ನಿಸದಂತಹ ವರ. ಆದರೆ, ಭಾರತೀದೇವಿ ಅತ್ಯಂತ ಕರುಣಾಮಯಿ. ದೊಡ್ಡವರ ಕಳಸಪ್ರಾಯವೆನ್ನಿಸುವ ಗುಣ ಅಂತಹ ಕಾರುಣ್ಯವೇ ಆಗಿದೆ. ಭಗವಂತನಾದ ಶ್ರೀಹರಿಯು ಸಹ ಭಕ್ತರನ್ನು ಅನುಗ್ರಹಿಸಲು ಅನೇಕ ಅವತಾರಗಳನ್ನು ತಾಳುವುದು ಸಹ ಇಂತಹ ಕರುಣೆಯ [೧]ಹಿನ್ನೆಲೆಯಲ್ಲಿಯೇ. ಅಂತಹ ಕರುಣೆಯ ಹೊರತು ಜೀವಿಗಳ ಉದ್ಧಾರಕ್ಕೆ ಭಗವಂತನಿಗೆ ಬೇರಾವ ಕಾರಣವು ಇಲ್ಲವೇ ಇಲ್ಲ. ಜೀವಕೋಟಿಯಲ್ಲಿ ಋಜುಗಳ ಕಾರುಣ್ಯ ಇತರ ದೇವತೆಗಳ ಕಾರುಣ್ಯಕ್ಕಿಂತ ಮಿಗಿಲೆನ್ನಿಸುವಂತಹುದು. ಸ್ತ್ರೀಯರಲ್ಲಿ ಅಂತಹ

೧ ಮೀನ ಕೂರ್ಮ ವರಾಹ ನರಪಂಚಾನನಾತುಳಶೌರ್ಯ ವಾಮನ
ರೇಣುಕಾತ್ಮಜ ರಾವಣಾದಿನಿಶಾಚರಧ್ವಂಸಿ।
ಧೇನುಕಾಸುರಮಥನ ತ್ರಿಪುರವ ಹಾನಿಗೈಸಿದ ನಿಪುಣ ಕಲಿಮುಖ–
ದಾನವರ ಸಂಹರಿಸಿ ಧರ್ಮದಿ ಕಾಯ್ದ ಸುಜನರನ॥ –ಹರಿಕಥಾಮೃತಸಾರ (೨/೩೦)

ಸ್ಥಾನ ಭಾರತೀದೇವಿಯದು. ಬ್ರಹ್ಮ-ಸರಸ್ವತಿಯರು ಸಹ ವಾಯು-ಭಾರತಿಯರಂತೆ ಮಹಾ ಕರುಣಾಳುಗಳು. ಆದರೆ, ಅವರು ಭೂಮಿಯಲ್ಲಿ ಅವತಾರ ಮಾಡುವವರಲ್ಲ. ಹಾಗೆಂದೆ ಅವರಿಗೆ ಭಗವದಾದೇಶ.

ಹೀಗಾಗಿ ಭಾರತೀದೇವಿಯರನ್ನು ಅವರು ಶರಣುಹೊಂದಿದ ಕಾರ್ಯ ಅತ್ಯಂತ ಸಮೀಚೀನವಾಗಿತ್ತು. ಭಾರತೀದೇವಿ ಅವರ ಪ್ರಾರ್ಥನೆಯನ್ನು ಅಂಗೀಕರಿಸಿದರು. ತಮ್ಮ ದೇಹದಲ್ಲಿ ಅವರಿಗೆ ಅವಕಾಶ ಕಲ್ಪಿಸಿ ತನ್ನೊಂದಿಗೆ ಅವರು ಜನಿಸುವಂತೆ ವರ ನೀಡಿದರು. ಹೀಗೆ ಶಾಪವಿತ್ತ ಆ ದೇವತೆಗಳ ಕಲ್ಯಾಣಕ್ಕಾಗಿ ಶಾಪದ ಪ್ರಸಕ್ತಿಯೇ ಇರದ ಭಾರತೀದೇವಿ ನಾಲ್ಕು ಜನ್ಮಗಳನ್ನು ಭೂಮಿಯಲ್ಲಿ ಹೊಂದುವಂತಾಯಿತು. ಯಾವುದೇ ಶಾಪಾದಿಗಳ ಕಾರಣವಿಲ್ಲದೆ ಕೇವಲ ಭಗವತ್ಕಾರ್ಯ ಸಾಧನೆಗೆಂದೇ ಹನುಮಂತ ಅವತರಿಸಿದ್ದು ಹೇಗೋ ಹಾಗೆ.

ಅಂತಹ ನಾಲ್ಕು ಜನ್ಮಗಳಲ್ಲಿ ಮೊದಲನೆಯದು ತ್ರೇತಾಯುಗದಲ್ಲಿ ನಡೆಯಿತು. ಆಗ ವಾಯುದೇವರು ಹನುಮಂತನಾಗಿ ಅವತರಿಸಿ ಶ್ರೀರಾಮನ ಸೇವೆಯಲ್ಲಿ ತೊಡಗಿದ್ದರು. ಆಗ ಭಾರತಿಯು ವಿಪ್ರಕನ್ಯೆಯಾಗಿ ಅವತರಿಸಿದರು. ಶಿವಕನ್ಯೆ ಎಂಬುದು ಆ ರೂಪದ ಇನ್ನೊಂದು ಹೆಸರು. ಆಗ ಹನುಮಂತನು ಬ್ರಹಚರ್ಯ ವ್ರತದೀಕ್ಷಿತನಾಗಿದ್ದರಿಂದ ಅವರೂ ಸಹ ಕನ್ಯೆಯಾಗಿಯೇ ಉಳಿದರು. ಆ ಜನ್ಮ ಹಾಗೆಯೇ ಕಳೆಯಿತು.

ಎರಡನೆಯ ಜನ್ಮ ದ್ವಾಪರಯುಗದಲ್ಲಾಯಿತು. ನಳ-ದಮಯಂತಿಯರ ಕಾಲ ಅದು. ಅವರ ಬಹುಜನ್ಮದ ಪುಣ್ಯದ ಫಲವಾಗಿ ಅವರಿಗೆ ಶ್ರೀಭಾರತೀದೇವಿ ಮಗಳಾಗಿ ಜನಿಸಿದರು; ಇಂದ್ರಸೇನೆ ಎಂದು ಆ ರೂಪಕ್ಕೆ ಹೆಸರು. ತಂದೆಯ ನಿಮಿತ್ತದಿಂದಾಗಿ ನಳನಂದಿನೀ ಎಂದೂ ಹೆಸರಾಯಿತು. ಆ ಸಮಯದಲ್ಲಿ ಅದಕ್ಕೆ ಸಂಬಂಧಿಸಿದಂತೆ ಮತ್ತೊಂದು ಪ್ರಸಂಗ ನಡೆದಿತ್ತು.

ಬ್ರಹ್ಮದೇವರು ಸತ್ಯಲೋಕದ ಸಭೆಯಲ್ಲಿ ಶ್ರೀಮದ್ಭಾಗವತ ಮಹಾಪುರಾಣವನ್ನು ಪ್ರವಚನಗೈಯುತ್ತಿದ್ದರು. ಶ್ರೋತೃಗಳ ಗುಂಪಿನಲ್ಲಿ ದೇವತೆಗಳು ಋಷಿಮುನಿಗಳು ಮೊದಲಾದ ಮಹನೀಯರು ಸೇರಿದ್ದರು. ತೃತೀಯಸ್ಕಂಧದ ಪ್ರವಚನವನ್ನು ಮಾಡುತ್ತಾ ಬ್ರಹ್ಮದೇವರು ತಮ್ಮದೇ ಸೃಷ್ಟಿಯ ವಿವರಗಳನ್ನು ತಿಳಿಸುವಾಗ 'ತಾವು ಸೃಷ್ಟಿಸಿದ ಒಬ್ಬ ಕನ್ಯೆಯನ್ನು ತಾವೇ ಮೋಹಿಸಿದರು' ಎಂದು ಹೇಳುತ್ತಾ ಅವರು ಮುಂದೆ ವಿವರಿಸುವವರಿದ್ದರು. ಆ ಮುನ್ನವೇ ಅಲ್ಲಿ ಕುಳಿತಿದ್ದವರಲ್ಲಿ ಮುದ್ಗಲ ಎಂಬ ಒಬ್ಬ ಮುನಿ ವಿಷಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಬ್ರಹ್ಮದೇವರು ಸಹ ಕಾಮಕ್ಕೆ ಒಳಗಾಗಿ ತಮ್ಮ ಮಗಳನ್ನೇ ಮೋಹಿಸಿದರು ಎಂದು ತಪ್ಪಾಗಿ ತಿಳಿದು ಅಪಹಾಸ್ಯಮಾಡಿ ನಕ್ಕುಬಿಟ್ಟ[೧].

---

೧ ಈ ಪ್ರಸಂಗವನ್ನು ಈ ಮುದ್ಗಲ ಮುನಿಯಂತೆ ತಪ್ಪಾಗಿ ತಿಳಿದ ಜನರೇ ಹೆಚ್ಚು. ಪುರಾಣದ ಬಗ್ಗೆ ಶ್ರದ್ಧೆ ಇಲ್ಲದ ಜನರೂ ಸಹ ಈ ಪ್ರಸಂಗವನ್ನು ಬ್ರಹ್ಮದೇವರು ತಮ್ಮ ಮಗಳನ್ನೇ ಕಾಮಿಸಿದವರು ಎಂಬುದಾಗಿ

ಕೂಡಲೇ ಬ್ರಹ್ಮದೇವರು ಅವನಿಗೆ [೧]ಶಾಪವಿತ್ತರು. ''ವಿಷಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಹೀಗೆ ಅಪಹಾಸ್ಯ ಮಾಡಿದ ನೀನು ಭಾರತೀ ಮೊದಲಾದ ಸ್ತ್ರೀಯರ ಸಂಪರ್ಕಕ್ಕೆ ಒಳಗಾಗು''. ತನ್ನ ತಪ್ಪಿನ ಅರಿವಾದ ಮುದ್ಗಲ ಮುನಿ ತನಗೆ ಒದಗಿದ ಶಾಪಕ್ಕಾಗಿ ಬಹಳವಾಗಿ ಪರಿತಪಿಸಿದ. ತನ್ನ ಅವಿವೇಕಕ್ಕೆ ಬಹಳವಾಗಿ ಪಶ್ಚಾತ್ತಾಪ ಪಟ್ಟ, ಬ್ರಹ್ಮದೇವರನ್ನು ಪರಿಪರಿಯಾಗಿ ಪ್ರಾರ್ಥಿಸಿ ವಿಶಾಪ ನೀಡಲು ಕೇಳಿಕೊಂಡ. ಬ್ರಹ್ಮದೇವರು ಕರುಣೆ ತೋರಿದರು. ''ತಮ್ಮ ಶಾಪ ತಪ್ಪದು; ಆದರೆ, ಅವನು ಪಶ್ಚಾತ್ತಾಪ ಪಟ್ಟಿರುವುದರಿಂದ ನಿನ್ನ ದೇಹದೊಳಗೆ ವಾಯುದೇವರು ಪ್ರವೇಶ ಮಾಡಿ ಆ ಸ್ತ್ರೀಯನ್ನು ಹೊಂದುವರು''. ನಿನಗೆ ದೋಷದ ಪ್ರಸಕ್ತಿ ಇರದು. ಅವರಿಗಂತೂ ದೋಷದ ಹೆಸರೇ ಇಲ್ಲ.

ಇಂತಹ ಶಾಪ ಹೊತ್ತ ಮುದ್ಗಲ ಮುನಿಯನ್ನೇ ನಳನಂದಿನಿಯಾದ ಇಂದ್ರಸೇನೆ ಪತಿಯನ್ನಾಗಿ ಹೊಂದಿದಳು. ಆವರ ದಾಂಪತ್ಯ ನಡೆದಷ್ಟು ಕಾಲ ಮುದ್ಗಲ ಮುನಿಯಲ್ಲಿ ವಾಯುದೇವರು ನೆಲೆಸಿದ್ದು ಅವರಿಗೆ ಪಾಪ ತಟ್ಟದಂತೆ ನೋಡಿಕೊಂಡರು. ಕೊನೆಗೆ ಅವರ ಆವೇಶ ಹಿಂತೆಗೆದುಕೊಳ್ಳುತ್ತಲೇ ಮುದ್ಗಲ ನಳನಂದಿನಿಯೊಂದಿಗೆ ದೂರವಾಗಿ ತಪಸ್ಸಿಗೆ ತೆರಳಿ ಉದ್ಧಾರವನ್ನು ಹೊಂದಿದ[೨].

## ಇಂದ್ರಸೇನೆಗೆ ಲಭಿಸಿದ ವಿಚಿತ್ರ ವರ

ಇತ್ತ ಇಂದ್ರಸೇನೆ ತಪಸ್ಸಿಗೆ ತೊಡಗಿದಳು. ಮುಖ್ಯವಾಗಿ ಭಾರತಿಯಾದ ಅವಳು ಶ್ರೀಹರಿಯನ್ನು ಕುರಿತು ತಪಸ್ಸನ್ನು ಮಾಡಿದರೆ, ಪಾರ್ವತೀ ಮೊದಲಾದವರು ಶಿವನನ್ನು

---

ಮತ್ತೆ ಮತ್ತೆ ಉದಾಹರಿಸುವುದುಂಟು. ಅವರೆಲ್ಲರೂ ಸಹ ಈ ಮುದ್ಗಲ ಮುನಿಯಂತೆ ಅಪಚಾರ ಮಾಡುವವರೇ ಸರಿ. ಮುದ್ಗಲ ಮುನಿಗೆ ದೊರೆತ ಆ ಶಿಕ್ಷೆಯನ್ನು ತಿಳಿದವರು ಈ ತಪ್ಪನ್ನು ಸರ್ವಥಾ ಮಾಡಲಾರರು. ವಾಸ್ತವವಾಗಿ ಅಲ್ಲಿ ನಡೆದದ್ದು ಇಷ್ಟು, ಬ್ರಹ್ಮಪತ್ನಿಯಾದ ಸರಸ್ವತಿ ಬ್ರಹ್ಮದೇವರ ಮಗಳಲ್ಲ. ಆ ಸರಸ್ವತಿ ಕೃತಿ ಹಾಗೂ ಪ್ರದ್ಯುಮ್ನ ಎಂಬ ಮಹಾಲಕ್ಷ್ಮೀ ಹಾಗೂ ನಾರಾಯಣರ ರೂಪಗಳ ಪುತ್ರಿ. ಇಲ್ಲಿ ಬ್ರಹ್ಮದೇವರಿಂದ ಸೃಷ್ಟಳಾದ ಸರಸ್ವತಿ ಮನುಷ್ಯನ ಮಾತಿಗೆ ಅಭಿಮಾನಿ ಎನ್ನಿಸಿದ ಬೇರೊಬ್ಬ ಸ್ತ್ರೀ. ಬ್ರಹ್ಮದೇವರು ನಿಜಕ್ಕೂ ಅವಳನ್ನು ಕಾಮಿಸಲಿಲ್ಲ. ಅವರಿಗೆ ಕಾಮಾದಿ ದೋಷಗಳ ಪ್ರಸಕ್ತಿ ಸರ್ವಥಾ ಇಲ್ಲವೇ ಇಲ್ಲ. ಅಂತಹ ಯಾವುದೇ ದೋಷವಿರುವವರಿಗೆ ಸತ್ಯಲೋಕಾಧಿಪತ್ಯದಂತಹ ಅತ್ಯುನ್ನತ ಪದವಿ ಲಭಿಸುವುದೂ ಇಲ್ಲ. ಈ ಸರಸ್ವತಿಯನ್ನು ಕಾಮಿಸಿದಂತೆ ಮಾಡಿದ್ದು ಕೇವಲ ಅಸುರಮೋಹನಕ್ಕೋಸ್ಕರ. ಹಾಗೂ ಆ ಮೂಲಕ ಅಸುರ ಜನರು ಅಧೋಗತಿಗೆ ತೆರಳಲು ಅವಕಾಶ ಕಲ್ಪಿಸಿದರು. ಶ್ರೀಹರಿಯ ಅನೇಕ ಮೋಹಕ ಕಾರ್ಯಗಳಂತೆ ಬ್ರಹ್ಮ ದೇವರ ಈ ಕಾರ್ಯವೂ ಸಹ ಎಂದು ತಿಳಿಯಬೇಕು.

೧ ಭಾರತ್ಯಾದ್ಯಾಃ ಪಂಚದೇವೀರ್ಗಚ್ಛ ಮಾನಿನ್ನಭೂತಯೇ। – ಮ.ಭಾ.ತಾ.ನಿ(೧೮/೧೨೪)

೨ ರೇಮೇ ಚ ಸ ತಯಾ ಸಾರ್ಧಂ ದೀರ್ಘಕಾಲಂ ಜಗತ್ಪ್ರಭುಃ।
ತತೋ ಮುದ್ಗಲಮುದ್ಬೋಧ್ಯ ಯಯೌ ಚ ಸ್ವಂ ನಿಕೇತನಮ್ ॥
ತತೋ ದೇಶಾಂತರಂ ಗತ್ವಾ ತಪಶ್ಚಕ್ರೇ ಸ ಮುದ್ಗಲಃ।
ಸೇಂದ್ರಸೇನಾ ವಿಯುಕ್ತಾಽಥ ಭರ್ತ್ರಾ ಚಕ್ರೇ ಮಹತ್ತಪಃ॥ – ಮ.ಭಾ.ತಾ.ನಿ(೧೮/೧೨೨,೧೨೩)

ಕುರಿತು ತಪಸ್ಸು ಮಾಡಿದರು. ಸುದೀರ್ಘಕಾಲದ ಆ ತಪಸ್ಸಿಗೆ ಶಿವ ಪ್ರತ್ಯಕ್ಷನಾದ. ಆದರೆ, ಅವರು ಹಾಗೆ ಕಾಣಿಸಿಕೊಂಡಿದ್ದು ಒಬ್ಬ ವಟುವಿನ ರೂಪದಲ್ಲಿ. ವರವನ್ನು ಬೇಡಲು ತಿಳಿಸಿದಾಗ, ಇಂದ್ರಸೇನೆ 'ಪತಿಂ ದೇಹಿ' ಎಂದು ಕೇಳಿದಳು. ಮುಖ್ಯವಾಗಿ ಆ ಮಾತು ಅವರಲ್ಲಿದ್ದ ಪ್ರತಿಯೊಬ್ಬರದ್ದು ಆಗಿತ್ತು. ಭಾರತಿಯ ಹೊರತು ಇತರರಿಗೆ ಆ ಪರಿಜ್ಞಾನವಿಲ್ಲದ್ದರಿಂದ ಅವರೆಲ್ಲ ಪ್ರತ್ಯೇಕವಾಗಿ 'ಪತಿಂ ದೇಹಿ' ಎಂದೇ ಕೇಳಿದರು. ವ್ಯಕ್ತಿಗಳು ಬೇರೆಯೇ ಆಗಿದ್ದರೂ ದೇಹ ಒಂದೇ ಆಗಿದ್ದು ಅವರ ಬಾಯಿಂದ ಆ ಮಾತು 'ಪತಿಂ ದೇಹಿ' ಎಂಬುದಾಗಿ ಐದು ಬಾರಿ ಬಂದಂತಾಯಿತು. ಇದನ್ನು ಗಮನಿಸದೇ ಶಿವ ನಿನಗೆ ಐವರು ಪತಿಗಳಾಗಲಿ ಎಂದು ನುಡಿದುಬಿಟ್ಟ. ಈ ಮಾತು ಭಾರತೀ ದೇಹದಲ್ಲಿದ್ದ ಇತರ ದೇವತೆಗಳಿಗೆ ಆಘಾತಕ್ಕೆ ಕಾರಣವಾಯಿತು. ಒಬ್ಬಳೇ ಸ್ತ್ರೀಗೆ ಐದು ಪತಿ ಎನ್ನುವುದು ವರವಲ್ಲದೆ ಶಾಪ ಎನ್ನಿಸುವುದೇ ನಿಶ್ಚಯ. ಆದರಿಂದಾಗಿ ಅವಳು ದುಃಖಿಸತೊಡಗಿದಳು. ಹಾಗೆ ದುಃಖಿಸುತ್ತಿದ್ದಾಗ ಅವಳ ಕಣ್ಣಿಂದ ಸುರಿದ ನೀರಿನ ಹನಿಗಳು ಬಳಿಯಲ್ಲಿದ್ದ ನದಿಯಲ್ಲಿ ಬೀಳುತ್ತಿದ್ದಂತೆ ಕಮಲದ ರೂಪವನ್ನು ತಾಳಿ ಹರಿದುಹೋಗುತ್ತಿದ್ದವು[೧].

ಆ ವೇಳೆಗೆ ಅಲ್ಲಿಗೆ ದೈವಯೋಗದಿಂದಾಗಿ ಆಗಮಿಸಿದ್ದ ಇಂದ್ರನ ಕಣ್ಣಿಗೆ ಆ ದೃಶ್ಯ ಕಾಣಿಸಿತು. ಕುತೂಹಲದಿಂದ ಅಲ್ಲಿಗೆ ಧಾವಿಸಿದ ಇಂದ್ರ ಅಳುತ್ತಿದ್ದ ಸ್ತ್ರೀಯನ್ನು ಕುರಿತು ಅವಳ ಅಳುವಿಗೆ ಕಾರಣವನ್ನು ಕೇಳಿದ. ಅವಳು ವಟುರೂಪದ ಶಿವನತ್ತ ಬೆರಳು ಮಾಡಿ ತಾನು ವರ ಕೇಳಿದರೆ ಈತ ಐವರು ಪತಿಗಳಾಗಲಿ[೨] ಎಂದು ಶಾಪ ನೀಡಿರುವನು ಎಂದು ತನ್ನ

---

೧ ತಸ್ಯಾಶ್ರುಬಿಂದುಃ ಪತಿತೋ ಜಲೇ ಯಸ್ತತ್ ಪದ್ಮಮಾಸೀದಥ ತತ್ರ ಕಾಂಚನಮ್ ।
ತದದ್ಭುತಂ ಪ್ರೇಕ್ಷ್ಯ ವಜ್ರೀ ತದಾನೀಮಪೃಚ್ಛತ್ ತಾಂ ಯೋಷಿತಮಂತಿಕಾದ್ ವೈ ॥
ಕಾ ತ್ವಂ ಭದ್ರೇ ರೋದಿಷಿ ಕಸ್ಯ ಹೇತೋರ್ವಾಕ್ಯಂ ತಥ್ಯಂ ಕಾಮಯೇಽಹಂ ಬ್ರವೀಹಿ ॥
- ಮಹಾಭಾರತ (ಆದಿಪರ್ವ ೧೯೬/೧೧,೧೨)

೨ ಆಸೀತ್ ತಪೋವನೇ ಕಾಚಿದೃಷೇಃ ಕನ್ಯಾ ಮಹಾತ್ಮನಃ ।
ವಿಲಗ್ನಮಧ್ಯಾ ಸುಶ್ರೋಣೀ ಸುಭ್ರೂಃ ಸರ್ವಗುಣಾನ್ವಿತಾ ॥
ಕರ್ಮಭಿಃ ಸ್ವಕೃತೈಃ ಸಾ ತು ದುರ್ಭಗಾ ಸಮಪದ್ಯತ ।
ನಾಧ್ಯಗಚ್ಛತ್ ಪತಿಂ ಸಾ ತು ಕನ್ಯಾ ರೂಪವತೀ ಸತೀ ॥
ತತಸ್ತಪ್ತುಮಥಾರೇಭೇಪತ್ಯರ್ಥಮಸುಖಾ ತತಃ ।
ತೋಷಯಾಮಾಸ ತಪಸಾ ಸಾ ಕಿಲೋಗ್ರೇಣ ಶಂಕರಮ್ ॥
ತಸ್ಯಾಃ ಸ ಭಗವಾಂಸ್ತುಷ್ಟಸ್ತಾಮುವಾಚ ಯಶಸ್ವಿನೀಮ್ ।
ವರಂ ವರಯ ಭದ್ರಂ ತೇ ವರದೋಽಸ್ಮೀತಿ ಶಂಕರಃ ॥
ಅಥೇಶ್ವರಮುವಾಚೇದಮಾತ್ಮನಃ ಸಾ ವಚೋ ಹಿತಮ್ ।
ಪತಿಂ ಸರ್ವಗುಣೋಪೇತಮಿಚ್ಛಾಮೀತಿ ಪುನಃ ಪುನಃ ॥
ತಾಮಥ ಪ್ರತ್ಯುವಾಚೇದಮೀಶಾನೋ ವದತಾಂ ವರಃ ।
ಪಂಚ ತೇ ಪತಯೋ ಭದ್ರೇ ಭವಿಷ್ಯಂತೀತಿ ಭಾರತಾಃ ॥

ದುಃಖವನ್ನು ತೋಡಿಕೊಂಡಳು. ಹಾಗೆ ವಟುವಿನ ವೇಷದಲ್ಲಿದ್ದದ್ದು ಸಾಕ್ಷಾತ್ ರುದ್ರದೇವರು ಎಂಬುದನ್ನು ಅರಿಯದೇ ಇಂದ್ರ ನುಡಿದ. "ಎಲವೋ! ನೀನು ಎಂತಹ ಕೇಡನ್ನು ಮಾಡಿರುವೆ. ನಾನು ಮೂರು ಲೋಕದ ದೊರೆ, ಆದ್ದರಿಂದ ಇವಳು ನನ್ನ ಪ್ರಜೆಗಳ ಸಾಲಿಗೆ ಸೇರುವವಳು. ಇವಳಿಗೆ ಇಂತಹ ಶಾಪವನ್ನು ನೀಡಿದ ನೀನು ದಂಡನೆಗೆ ಅರ್ಹ". ಇದನ್ನು ಕೇಳುತ್ತಲೆ ಕೆರಳಿದ ಶಿವ ನುಡಿದ. "ಎಲವೋ! ನನ್ನನ್ನು ಪ್ರಶ್ನಿಸಲು ನೀನಾರು? ಈ ತಪ್ಪಿಗಾಗಿ ನೀನು ಸಹ ಭೂಮಿಯಲ್ಲಿ ಜನಿಸು. ಆಗ ಇವಳು ನಿನ್ನ ಕೊರಳಿಗೇ ಮಾಲೆ ಹಾಕುವಂತಾಗಲಿ" ಹೀಗೆ ತನ್ನ ಮಾತನ್ನು ಮುಂದುವರೆಸುತ್ತಾ ಶಿವ ಹೇಳಿದ. "ನಿನ್ನಂತೆ ನನ್ನನ್ನು ಕೆಣಕಿದವರ ಗತಿ ಏನಾಗಿದೆ ನೋಡು?" ಎಂದು ಒಂದು ದೊಡ್ಡ ಬಂಡೆಯತ್ತ ಕೈತೋರಿಸಿದ. ಕುತೂಹಲದಿಂದ ಇಂದ್ರ ಆ ಬಂಡೆಯನ್ನು ಸರಿಸಿ ನೋಡಿದಾಗ ಅಲ್ಲಿ[೧] ನಾಲ್ವರು ಮಂತ್ರಾಲೋಚನೆ ನಡೆಸಿರುವುದು ಕಣ್ಣಿಗೆ ಬಿತ್ತು. ಅವರು ಸಾಮಾನ್ಯರಾಗಿರದೇ ವಾಯು, ಯಮ, ಹಾಗೂ ಅಶ್ವಿನಿದೇವತೆಗಳೆಂಬ ನಾಲ್ವರು ದೇವತೆಗಳೇ ಆಗಿದ್ದರು. ಅವರು ಹಾಗೆ ಅಲ್ಲಿ ಮಂತ್ರಾಲೋಚನೆ ನಡೆಸಿದ್ದು ಭಗವಂತನ ಕೃಷ್ಣಾವತಾರ ಕಾಲದಲ್ಲಿ ತಾವು ಸೇವೆ ಸಲ್ಲಿಸುವ ಬಗೆಯನ್ನು ನಿಶ್ಚಯಿಸಲೆಂದು ಮಾತ್ರ ಆಗಿತ್ತು. ಅದಕ್ಕೆ ಶಿವನು ಸರ್ವಥಾ ಕಾರಣನಾಗಿರಲಿಲ್ಲ. ಎಂದರೆ ಶಿವ ನಿಷ್ಕಾರಣವಾಗಿ ಅವರು ಅಲ್ಲಿ ಹಾಗೆ ಸೇರಿದ್ದುದು ತನ್ನನ್ನು ಕೆಣಕಿದ್ದರ ಫಲ ಎಂದು ಸುಳ್ಳಾಡಿದ್ದ.

ಆ ಕೂಡಲೇ ಅಲ್ಲಿ ಬ್ರಹ್ಮದೇವರು ಕಾಣಿಸಿಕೊಂಡು ನುಡಿದರು. "ಎಲೈ! ರುದ್ರದೇವರೇ; ನೀವು ಹೇಳಿದ್ದು ಸರಿಯಲ್ಲ. ಅವರು ಹಾಗೆ ಅಲ್ಲಿ ನೆರೆದಿರುವುದರಲ್ಲಿ ನಿಮ್ಮ ಪಾತ್ರವೇನಿಲ್ಲ. ನಿಷ್ಕಾರಣವಾಗಿ ಅವರು ಹಾಗೆ ಅಲ್ಲಿ ಇರುವುದು ನಿಮ್ಮನ್ನು ಕೆಣಕಿದ್ದಕ್ಕೆ ಪ್ರತಿಫಲವಾಗಿ

ಏವಮುಕ್ತಾ ತತಃ ಕನ್ಯಾ ದೇವಂ ವರದಮಬ್ರವೀತ್ ।
ಏಕಮಿಚ್ಛಾಮ್ಯಹಂ ದೇವ ತ್ವತ್ಪ್ರಸಾದಾತ್ ಪತಿಂ ಪ್ರಭೋ ॥
ಪುನರೇವಾಬ್ರವೀದ್ ದೇವ ಇದಂ ವಚನಮುತ್ತಮಮ್ ।
ಪಂಚಕೃತ್ವಸ್ತ್ವಯಾ ಹ್ಯುಕ್ತಃ ಪತಿಂ ದೇಹೀತ್ಯಹಂ ಪುನಃ ॥
ದೇಹಮನ್ಯಂ ಗತಾಯಾಸ್ತೇ ಯಥೋಕ್ತಂ ತದ್ ಭವಿಷ್ಯತಿ ।
ದ್ರುಪದಸ್ಯ ಕುಲೇ ಜಜ್ಞೇ ಸಾ ಕನ್ಯಾ ದೇವರೂಪಿಣೀ ॥
ನಿರ್ದಿಷ್ಟಾ ಭವತಾಂ ಪತ್ನೀ ಕೃಷ್ಣಾ ಪಾರ್ಷತ್ಯನಿಂದಿತಾ ।
ಪಾಂಚಾಲನಗರೇ ತಸ್ಮಾನ್ನಿವಸಧ್ವಂ ಮಹಾಬಲಾಃ ।
ಸುಖಿನಸ್ತಾಮನುಪ್ರಾಪ್ಯ ಭವಿಷ್ಯಥ ನ ಸಂಶಯಃ ॥ -ಮಹಾಭಾರತ (ಆದಿಪರ್ವ ೧೯೮/೬-೧೫)

೧ ನಿವರ್ತಯ್ಯೆನಂ ಚ ಮಹಾದ್ರಿರಾಜಂ ಬಲಂ ಚ ವೀರ್ಯಂ ಚ ತವಾಪ್ರಮೇಯಮ್ ।
ಛಿದ್ರಸ್ಯ ಚೈವಾವಿಶ ಮಧ್ಯಮಸ್ಯ ಯತ್ರಾಸತೇ ತ್ವದ್ವಿಧಾಃ ಸೂರ್ಯಭಾಸಃ ॥
ಸ ತದ್ ವಿವೃತ್ಯ ವಿವರಂ ಮಹಾಗಿರೇಸ್ತುಲ್ಯದ್ಯುತೀಂಶ್ಚತುರೋಽನ್ಯಾನ್ ದದರ್ಶ ।
ಸ ತಾನಭಿಪ್ರೇಕ್ಷ್ಯ ಬಭೂವ ದುಃಖಿತಃ ಕಚ್ಚಿನ್ನಾಹಂ ಭವಿತಾ ವೈ ಯಥೇಮೇ ॥
- ಮಹಾಭಾರತ (ಆದಿಪರ್ವ ೧೯೬/೧೯,೨೦)

ಲಭಿಸಿರುವ ಶಿಕ್ಷೆ ಎಂದು ಹೇಳಿಕೊಂಡಿದ್ದು ಸರ್ವಥಾ ಅನುಚಿತ. ಈ ತಪ್ಪಿಗಾಗಿ ನಿಮಗೆ ನಾನು ಶಾಪ ನೀಡುತ್ತಿರುವೆ. ನೀವು ಸಹ ಭೂಲೋಕದಲ್ಲಿ ಜನಿಸಿರಿ. ನಾನು ಇವಳ ಶರೀರದಲ್ಲಿರುವ ಪಾರ್ವತೀ ಮೊದಲಾದ ನಾಲ್ಕು ಜನರಿಗೆ ಪತಿಯೋಗವಾಗದಂತೆಯೂ, ಪರಪುರುಷರ ಸಂಪರ್ಕವಾಗುವಂತೆಯೂ ಶಾಪ ನೀಡಿದ್ದೆ. ಅದನ್ನು ಉಲ್ಲಂಘಿಸಿ ನೀವು ಪತಿ ಲಭಿಸುವ ವರವನ್ನು ನೀಡಿದ್ದು ಸಹ ಸರಿಯಲ್ಲ. ಆ ತಪ್ಪಿಗಾಗಿ ನೀವು ಮನುಷ್ಯರಾಗಿ ಜನಿಸಿದಾಗ ಇವಳ ದೇಹದಲ್ಲಿರುವ ನಿಮ್ಮ ಪತ್ನಿ ಪಾರ್ವತಿಯೊಂದಿಗೆ ನಿಮಗೆ ಸಂಪರ್ಕ ಆಗದಿರಲಿ. ಜೀವನ ಪೂರ್ತಿ ನೀವು ಬ್ರಹ್ಮಚರ್ಯದಿಂದಲೇ ಇರುವಂತಾಗಲಿ. ಅಲ್ಲದೆ ಇಂದ್ರನ ಮುಂದೆ ನೀವು ಸುಳ್ಳಾಡಿರುವುದರಿಂದ ಭೂಲೋಕದಲ್ಲಿ ಅರ್ಜುನನಾಗಿ ಜನಿಸುವ ಈ ಇಂದ್ರನಿಗೆ ನೀವು ಯುದ್ಧದಲ್ಲಿ ಸೋಲುವಂತಾಗಲಿ''.

ಬ್ರಹ್ಮದೇವರ ಮಾತು ಸತ್ಯವಾಗದೆ ಬೇರೆ ದಾರಿಯೇ ಇಲ್ಲ. ಇದರಿಂದಾಗಿ ಇಂದ್ರ ಅರ್ಜುನನಾಗಿಯೂ, ಶಿವ ಅಶ್ವತ್ಥಾಮನಾಗಿಯೂ ಜನಿಸುವಂತಾಯಿತು. ಇಂದ್ರಸೇನೆಯೇ ಸಾಕ್ಷಾತ್ ದ್ರೌಪದೀ.

ಭಾರತೀದೇವಿಯ ಕಾರುಣ್ಯವನ್ನು ಅಪೂರ್ವರೀತಿಯಲ್ಲಿ ವಿವರಿಸುವ ದಿವ್ಯ ಕಥಾನಕ ಇದು[೧]. ಒಂದೇ ದೇಹದಲ್ಲಿ ಹೀಗೆ ಐವರು ವಿಭಿನ್ನ ದೇವತಾಸ್ತ್ರೀಯರು ನೆಲೆಸಿದ ಈ ದಾಖಲೆಯ ಕಾರ್ಯಕ್ಕೆ ಈ ತೆರನಾದ ಬ್ರಹ್ಮದ್ರೋಹ ಕಾರಣವಾಯಿತು.

## 'ದ್ರೌಪದಿ' ಎಂಬ ಪ್ರಸಿದ್ಧಿ

ಹೀಗೆ ಅಯೋನಿಜೆಯಾಗಿ ಯಜ್ಞವೇದಿಕೆಯಿಂದ ಪ್ರಾದುರ್ಭವಿಸಿದ ಹಿರಿಮೆ ದ್ರೌಪದಿಯದಾಯಿತು. ಅವಳ ಅವತಾರಕಾರ್ಯ ಪೂರೈಸುವ ವೇಳೆಗೆ ದ್ರುಪದನ ಪತ್ನಿ ಅಲ್ಲಿಗೆ ಆಗಮಿಸಿದಳು. ತನ್ನ ಗರ್ಭದಲ್ಲಿ ಜನಿಸಬೇಕಿದ್ದ ಧೃಷ್ಟದ್ಯುಮ್ನ ದ್ರೌಪದಿಯರು ಹೀಗೆ ಅಗ್ನಿಯಿಂದ ಹುಟ್ಟಿದ್ದು ಅವಳಿಗೆ ಅಪಾರ ದುಃಖಕ್ಕೆ ಕಾರಣವಾಯಿತು. ಅವರ ತಾಯಿ ಎನ್ನಿಸಿಕೊಳ್ಳುವ ಭಾಗ್ಯ ತಪ್ಪಿದ್ದಕ್ಕಾಗಿ ಮಮ್ಮಲ ಮರುಗಿದಳು. ತನ್ನ ತಪ್ಪನ್ನು ಮನ್ನಿಸಲು ಯಾಜೋಪಯಾಜರನ್ನು ಪರಿಪರಿಯಾಗಿ ಕೇಳಿಕೊಂಡಳು. ಕರುಣಾಳುಗಳಾದ ಅವರು ಅನುಗ್ರಹಿಸಿದರು. ''ಇವರು ನಿನ್ನ ಗರ್ಭದಲ್ಲಿ ಜನಿಸುವ ಭಾಗ್ಯವನ್ನು ಅಹಂಕಾರದಿಂದಾಗಿ

---

೧ ಇದು ಪ್ರಾಚೀನ ಗ್ರಂಥಗಳಲ್ಲಿ ಉಕ್ತವಾದ ವಿಶೇಷ ಪ್ರಮೇಯ:
ವೇದೇಷು ಸಪುರಾಣೇಷು ಭಾರತೇ ಚಾವಗಮ್ಯತೇ। – ಮ.ಭಾ.ತಾ.ನಿ (೧೮/೧೪೬)
– ಪ್ರಸ್ತುತ ಮಹಾಭಾರತ ಪಾಠಗಳಲ್ಲಿ ಇದು ಪಂಚೇಂದ್ರೋಪಾಖ್ಯಾನ ಎಂಬುದಾಗಿ ಆದಿಪರ್ವದ ವೈವಾಹಿಕಪರ್ವದಲ್ಲಿ ಸಂಕ್ಷಿಪ್ತವಾಗಿ ಬಂದಿದೆ. ಇತರ ಪುರಾಣಗಳಲ್ಲಿ ಸಹ ಈ ವಿವರ ದೊರೆಯುವುದು. ಹೆಚ್ಚಿನ ವಿವರಗಳಿಗೆ ನಮ್ಮ ಪ್ರಕಾಶನದ ಕನ್ನಡ ಅನುವಾದ ಸಮೇತ 'ಮಹಾಭಾರತತಾತ್ಪರ್ಯನಿರ್ಣಯ' ಕೃತಿಯ ೧೮ನೇ ಅಧ್ಯಾಯದ ಈ ಶ್ಲೋಕದ ವಿವರಣೆಯನ್ನು ನೋಡಬಹುದು.

ನೀನು ಕಳೆದುಕೊಂಡೆ. ನೀನು ಈಗ ಪಶ್ಚಾತ್ತಾಪದಿಂದ ಬೆಂದಿರುವೆ. ಅದಕ್ಕಾಗಿ ನಿನಗೆ ವರ ನೀಡುತ್ತಿರುವೆವು. ಇವರಿಬ್ಬರಿಗೂ ನಿನ್ನ ಬಗ್ಗೆ ತಾಯಿ ಎಂಬ ಭಾವ ಉಂಟಾಗಲಿ. ಆ ಮೂಲಕ ನಿನಗೆ ಇವರಿಬ್ಬರ ತಾಯ್ತನದ ಭಾಗ್ಯ ಲಭಿಸಲಿ''.

ಹೀಗೆ ಅಯೋನಿಜರಾಗಿ ಜನಿಸಿದ್ದಕ್ಕಾಗಿ ಧೃಷ್ಟದ್ಯುಮ್ನ, ದ್ರೌಪದಿಯರು ಆ ಕಾಲದ ಇತರ ಅನೇಕ ದೇವತೆಗಳಿಗೆ ಅವತಾರದಲ್ಲಿ ಮನುಷ್ಯಾನ್ನ ಭೋಜನ ಮೊದಲಾದ ಕಾರಣದಿಂದ ಉಂಟಾಗುವ ಮಾನುಷ ಭಾವ ಅಷ್ಟಾಗಿ ಆಗಲಿಲ್ಲ. ಮುಖ್ಯವಾಗಿ ಸಾಕ್ಷಾತ್ ಭಾರತಿಯಾದ ದ್ರೌಪದಿಗಂತೂ ಆ ಪ್ರಸಂಗದಲ್ಲಿ ಮಾನುಷಭಾವ ಯಾವರೀತಿಯಲ್ಲೂ ಬರುವ ಪ್ರಸಕ್ತಿಯೂ ಇರಲಿಲ್ಲ. ಆ ಪ್ರಸಂಗದ ಲಾಭ ಧೃಷ್ಟದ್ಯುಮ್ನನಿಗಾಗಿದ್ದು ಮಾತ್ರ ನಿಜ.

## ದ್ರೌಪದೀಸ್ವಯಂವರದ ಹಿನ್ನೆಲೆ

ದ್ರುಪದರಾಜನ ಹಿಗ್ಗಿಗೆ ಮಿತಿಯೇ ಇರಲಿಲ್ಲ. ತನ್ನ ಸಂಕಲ್ಪ ಈಡೇರಿ ದ್ರೋಣರನ್ನು ಕೊಲ್ಲಬಲ್ಲ ಮಗ, ಅರ್ಜುನನ ಕೈಹಿಡಿಯುವಂತಹ ಮಗಳು ಜನಿಸಿದ್ದು ಅವನ ಅಪಾರ ಸಂತೃಪ್ತಿಗೆ ಕಾರಣವಾಗಿತ್ತು. ದಿನಗಳು ಕಳೆಯುತ್ತಿದ್ದವು, ಆ ವೇಳೆಗೆ ಅವನಿಗೆ ಬರಸಿಡಿಲಿನಂತಹ ವಾರ್ತೆ ಕಿವಿಗೆ ಅಪ್ಪಳಿಸಿತ್ತು. ಪಾಂಡವರು ಕುಂತಿಯ ಸಮೇತವಾಗಿ ಅರಗಿನ ಮನೆಯಲ್ಲಿ ಉರಿದು ಹೋದರು. ದ್ರುಪದನಿಗುಂಟಾದ ವ್ಯಥೆಗೆ ಪಾರವೇ ಇರಲಿಲ್ಲ. ತನ್ನ ಬಯಕೆ ವ್ಯರ್ಥವಾಯಿತೆಂದು ಒಂದು ಕ್ಷಣ ದಿಕ್ಕುತೋಚದವನಾದ. ಆದರೆ, ವಿಚಾರ ಮಾಡುತ್ತಾ ಹೋದಂತೆ ತನ್ನ ಚಿಂತೆಗೆ ಕಾರಣ ಅನಗತ್ಯ ಎಂದು ತೀರ್ಮಾನಿಸಿದ. ತಾನು ಮುಖ್ಯವಾಗಿ ದ್ರೌಪದಿಯನ್ನು ಪಡೆದದ್ದು ಅರ್ಜುನನಿಗೆ ಧಾರೆ ಎರೆಯಲೆಂದು; ಅದಕ್ಕಾಗಿ ತಾನು ಆರಿಸಿಕೊಂಡಿದ್ದು ಅಪೂರ್ವವಾದ ಯಜ್ಞ. ಅದು ನಡೆದದ್ದು ಪವಿತ್ರವಾದ ಗಂಗಾತಟದಲ್ಲಿ. ಯಜ್ಞ ನಡೆಸಿಕೊಟ್ಟ ಪುರೋಹಿತರು ಯಾಜೋಪಯಾಜರಂತಹ ದಿವ್ಯಜ್ಞಾನಿಗಳು. ಅವರು ಮಾಡಿಸಿದ ಯಜ್ಞವು ಸಹ ಅಪೌರುಷೇಯವೆನ್ನಿಸಿದ ವೇದಮಂತ್ರಗಳು. ಅಂತಹ ಯಜ್ಞದ ಫಲವೇ ದ್ರೌಪದೀ. ಎಂದ ಮೇಲೆ ತನ್ನ ಸಂಕಲ್ಪ ಸುಳ್ಳಾಗುವ ಸಾಧ್ಯತೆಯೇ ಇಲ್ಲ. ಪಾಂಡವರ ನಿಧನದ ವಾರ್ತೆ ನಿಶ್ಚಿತವಾಗಿಯೂ ಸುಳ್ಳೇ ಆಗಿರಬೇಕು. ಸ್ವತಃ ಧರ್ಮಿಷ್ಠರಾದ ಪಾಂಡವರಿಗೆ ಕೇಡು ಸಂಭವಿಸುವುದು ಅತ್ಯಂತ ಅಸಂಭಾವಿತ. ಅವರು ಜೀವಂತವಾಗಿಯೇ ಇದ್ದು ಎಲ್ಲಿಯೋ ಗುಪ್ತವಾಗಿ ಜೀವಿಸುತ್ತಿರಬೇಕು. ತಾನು ಸೂಕ್ತ ರೀತಿಯ ಯೋಜನೆ ಹಾಕಿಕೊಂಡಲ್ಲಿ ಅವರನ್ನು ಪತ್ತೆ ಹಚ್ಚಲು ಸಾಧ್ಯ. ಈ ಯೋಚನೆ ಬರುತ್ತಲೇ ತುಂಬಾ ಧೈರ್ಯ ತಾಳಿದ ಅವನು ಪಾಂಡವರನ್ನು ಗುರುತಿಸಲು ಉಪಾಯವೊಂದನ್ನು ಹೂಡಿದ. ಅದಕ್ಕಾಗಿ ದ್ರೌಪದಿಗೆ ಸ್ವಯಂವರ ಎಂಬುದಾಗಿ ಘೋಷಿಸಿದ. ಸ್ವಯಂವರದಲ್ಲಿ ಮತ್ಸ್ಯಯಂತ್ರ ಭೇದನದಂತಹ ಅತ್ಯಂತ ದುಸ್ತರವಾದ ಪಣವನ್ನು ಯೋಜಿಸಿದ. ಒಂದು ವಿಶಾಲವಾದ ಕೊಪ್ಪರಿಗೆ, ಅದರ ತುಂಬಾ ನೀರು, ಅದರ ಮೇಲ್ಭಾಗದಲ್ಲಿ ಒಂದು ಮತ್ಸ್ಯಯಂತ್ರ. ಕೊಪ್ಪರಿಗೆಯ ಪಕ್ಕದಲ್ಲಿ ಒಂದು

ಧನುಸ್ಸು. ಅದರ ಪಕ್ಕದಲ್ಲಿ ಐದು ಬಾಣಗಳು. ಮೊದಲಿಗೆ ಧನುಸ್ಸನ್ನು ಕಟ್ಟಬೇಕು, ಆ ಬಳಿಕ ಕೊಪ್ಪರಿಗೆಯ ನೀರಿನಲ್ಲಿ ಮೇಲಿನ ಮತ್ಸ್ಯಯಂತ್ರದ ಪ್ರತಿಬಿಂಬವನ್ನು ನೋಡುತ್ತಾ, ಐದೂ ಬಾಣಗಳನ್ನು ಬಿಲ್ಲಿನಲ್ಲಿ ಹೂಡಿ ಮತ್ಸ್ಯಯಂತ್ರಕ್ಕೆ ಆ ಐದು ಬಾಣಗಳು ತಾಕಿ ಭೇದಿಸಬೇಕು. ಹಾಗೆ ಮಾಡಿದವರಿಗೆ ಮಾತ್ರವೇ ದ್ರೌಪದಿಯು ಸ್ವಯಂವರದಲ್ಲಿ ಮಾಲೆ [1]ಹಾಕುವಳು. ಇಂತಹ ಕಠಿಣ ಸ್ಪರ್ಧೆಯನ್ನು ಮುಂದಿರಿಸಿದ್ದು ಅವನ ಜಾಣತನವೆನ್ನಿಸಿತು. ಅದೂ ಸಹ ಯಶಸ್ವಿಯಾಗಲೆಂದು ಶಿವನನ್ನು ಕುರಿತು ತಪಸ್ಸನ್ನು ಮಾಡಿದನು. ಪ್ರತ್ಯಕ್ಷನಾದ ಶಿವನಿಂದ ಅಲ್ಲಿ ಇರಿಸುವ ಧನುಸ್ಸನ್ನು ಕಟ್ಟಲು ಅರ್ಜುನನ ಹೊರತು ಬೇರೆ ಯಾರಿಗೂ ಸಹ ಸರ್ವಥಾ ಸಾಧ್ಯವಾಗಕೂಡದು ಎಂಬ ಮತ್ತೊಂದು ವರವನ್ನೂ ಪಡೆದುಕೊಂಡ[2].

ದ್ರುಪದನ ಈ ಯೋಜನೆ ಫಲ ಕೊಟ್ಟದ್ದು ಇತಿಹಾಸ.

## ಸ್ವಯಂವರದಲ್ಲಿ ಪಾಂಡವರು

ಪಾಂಡವರು ಈ ವೇಳೆಗೆ ಅರಗಿನ ಮನೆಯಿಂದ ಪಾರಾಗಿ ಬಂದಿದ್ದರು. ಭೀಮಸೇನನ ಪಾತ್ರ ಅದರಲ್ಲಿ ಪ್ರಧಾನವಾಗಿತ್ತು. ಹಿಡಿಂಬವನದಲ್ಲಿ ಹಿಡಿಂಬನ ಸಂಹಾರವು ಭೀಮಸೇನನಿಂದಲೇ ನಡೆಯಿತು. ಮುಂದೆ, ಏಕಚಕ್ರಾನಗರದಲ್ಲಿ ಪಾಂಡವರು ಆರು ತಿಂಗಳುಗಳ ಕಾಲ ತಂಗಿದ್ದರು. ಅಲ್ಲಿ ಅವರನ್ನು ಹಾಗೆ ನೆಲೆಗೊಳಿಸಿದ್ದು ಶ್ರೀವೇದವ್ಯಾಸರು. ಭೀಮಸೇನನಿಂದ ಏಕಚಕ್ರಾನಗರಕ್ಕೆ ಯುಗಯುಗಗಳಿಂದ ಒದಗಿದ್ದ ಬಕಾಸುರನ ಪೀಡೆ ಪರಿಹಾರವಾಗಲಿ ಎಂಬುದು ಅವರ ಆ ಕಾರ್ಯದ ಉದ್ದೇಶವಾಗಿತ್ತು; ನಡೆದದ್ದು ಸಹ ಹಾಗೆಯೇ. ರುದ್ರವರದಿಂದ ರಕ್ಷಿತನಾಗಿದ್ದ ಬಕಾಸುರನನ್ನು ಭೀಮಸೇನ ಸಂಹರಿಸಿದ. ನರಭಕ್ಷಕನಾದ ರಾಕ್ಷಸನ ಉಪಟಳದಿಂದ ಪಾರಾಗಿ ಏಕಚಕ್ರಾನಗರ ನೆಮ್ಮದಿ ಕಂಡಿತ್ತು. ಆ ವೇಳೆಗೆ ಅಲ್ಲಿ ಆಗಮಿಸಿದ ಶ್ರೀವೇದವ್ಯಾಸರು ಪಾಂಡವರಿಗೆ

---

೧ ಏತೇನ ಕಾರ್ಮುಕವರೇಣ ತರೂಪರಿಸ್ಥಮತ್ಸ್ಯಾವಭಾಸಮುದಕೇ ಪ್ರತಿವೀಕ್ಷ್ಯ ಯೇನ।
ಏತೈಃ ಶರೈಃ ಪ್ರತಿಹತೋ ಭವತೀಹ ಮತ್ಸ್ಯಃ ಕೃಷ್ಣಾನುಯಾಸ್ಯತಿ ತಮದ್ಯ ನರೇಂದ್ರವೀರಾಃ॥
-ಮ.ಭಾ.ತಾ.ನಿ (೧೯/೧೨೧)

ಇದಂ ಸಜ್ಯಂ ಧನುಃ ಕೃತ್ವಾ ಸಜ್ಯೈರೇಭಿಶ್ಚ ಸಾಯಕೈಃ।
ಅತೀತ್ಯ ಲಕ್ಷ್ಯಂ ಯೋ ವೇದ್ಧಾ ಸ ಲಬ್ಧಾ ಮತ್ಸುತಾಮಿತಿ॥....
ಇದಂ ಧನುರ್ಲಕ್ಷ್ಯಮಿಮೇ ಚ ಬಾಣಾಃ ಶೃಣ್ವಂತು ಮೇ ಭೂಪತಯಃ ಸಮೇತಾಃ।
ಛಿದ್ರೇಣ ಯಂತ್ರಸ್ಯ ಸಮರ್ಪಯಧ್ವಂ ಶರೈಃ ಶಿತೈರ್ವ್ಯೋಮಚರೈರ್ದಶಾರ್ಧೈಃ॥
- ಮಹಾಭಾರತ (ಆದಿಪರ್ವ ೧೮೩/೧೧,೩೫)

೨ ಪೂರ್ವಂ ಹಿ ಪಾರ್ಷತ ಇಮಾನ್ ಜತುಗೇಹದಗ್ಧಾನ್
ಶ್ರುತ್ವಾಽತಿದುಃಖಿತಮನಾಃ ಪುನರೇವ ಮಂತ್ರೈಃ।
ಯಾಜೋಪಯಾಜಮುಖನಿಃಸೃತ ಏವಮೇಷ
ನಾಸತ್ಯತಾರ್ಹ ಇತಿ ಜೀವನಮೇಷು ಮೇನೇ॥ - ಮ.ಭಾ.ತಾ.ನಿ (೧೯/೯೭)

ದ್ರೌಪದೀ ಸ್ವಯಂವರದ ವಿಷಯವನ್ನು ತಿಳಿಸಿ ಆ ಸ್ವಯಂವರಕ್ಕೆ ತೆರಳಲು ಆದೇಶಿಸಿದರು. ಮಾರ್ಗಮಧ್ಯದಲ್ಲಿ ಮಧ್ಯರಾತ್ರಿಯಲ್ಲಿ ಅರ್ಜುನನಿಂದ ಚಿತ್ರಸೇನ ಗಂಧರ್ವನ ನಿಗ್ರಹ ನಡೆಯಿತು. ಸುವರ್ಣವರ್ಣದ ಆ ಗಂಧರ್ವ ಅರ್ಜುನನ ಆಗ್ನೇಯಾಸ್ತ್ರದ ಪ್ರಭಾವದಿಂದ ಅಂಗಾರವರ್ಣ ಎನ್ನಿಸಿದ; ಧೌಮ್ಯರನ್ನು ಪುರೋಹಿತರನ್ನಾಗಿ ಮುಂದಿರಿಸಿಕೊಂಡು ಪಾಂಚಾಲ ಪಟ್ಟಣವನ್ನು ತಲುಪಿದರು. ಆ ವೇಳೆಗೆ ಸ್ವಯಂವರದ ದಿನ ಸಮೀಪಿಸಿತ್ತು. ಪಾಂಡವರು ಆ ಸಮಯದಲ್ಲಿ ತಮ್ಮ ಬಿಡಾರಕ್ಕಾಗಿ ಆರಿಸಿಕೊಂಡಿದ್ದು ಒಬ್ಬ ಕುಂಬಾರನ ಮನೆಯನ್ನು.

ಸ್ವಯಂವರದ ದಿನವು ಸಹ ಬಂದೇ ಬಿಟ್ಟಿತು. ಪ್ರಪಂಚದ ರಾಜ-ಮಹಾರಾಜರು, ರಾಜಕುಮಾರರು ಆ ಸ್ವಯಂವರಕ್ಕೆ ಆಗಮಿಸಿದ್ದರು. ದ್ರೌಪದಿಯ ಅದ್ಭುತ ಸೌಂದರ್ಯದ ಕಾರಣದಿಂದಾಗಿ ಅಂತಹ ಅಪೂರ್ವ ಸಮಾವೇಶ ನಡೆದಿತ್ತು. ಕರ್ಣನ ಸಮೇತವಾಗಿ ದುರ್ಯೋಧನಾದಿಗಳು ಆಗಮಿಸಿದ್ದರು. ಸ್ವತಃ ಭಗವಂತನಾದ ಶ್ರೀಕೃಷ್ಣ ಬಲರಾಮ ಮೊದಲಾದ ಸಮಸ್ತ ಯಾದವವೃಂದದೊಂದಿಗೆ ಅಲ್ಲಿಗೆ ಬಂದಿದ್ದ. ಸ್ವತಃ ಸರ್ವಜ್ಞನಾದ ಅವನಿಗೆ ದ್ರೌಪದೀಸ್ವಯಂವರದಲ್ಲಿ ಸ್ವತಃ ತಾನು ಉಪಸ್ಥಿತನಿದ್ದು ಪಾಂಡವರನ್ನು ಅನುಗ್ರಹಿಸುವ ಉದ್ದೇಶವಿತ್ತು; ತಾವು ತೆರಳುತ್ತಿರುವುದು ಸ್ವಯಂವರನ್ನು ನೋಡಲೆಂದೇ ಹೊರತು ಅದರಲ್ಲಿ ಪಾಲ್ಗೊಳ್ಳಲೆಂದಲ್ಲ[೧] ಎಂದು ಯಾದವರಿಗೆ ಕಟ್ಟಪ್ಪಣೆ ಮಾಡಿದ್ದ ಅದರಿಂದಾಗಿ ಬಲರಾಮಾದಿಗಳು ಅದರಲ್ಲಿ ಪಾಲ್ಗೊಳ್ಳುವ ಉದ್ದೇಶವನ್ನೇ ಹೊಂದಿರಲಿಲ್ಲ.

ಇದು ಶ್ರೀಕೃಷ್ಣನ ಸರ್ವಜ್ಞತ್ವಕ್ಕೂ ನಿದರ್ಶನವೆನ್ನಿಸುವ ವಿಷಯ. ಮಹಾಭಾರತದ ಕಥೆಯನ್ನು ಸಂಗ್ರಹಿಸುವ ವಿದ್ವಾಂಸರು ಈ ವಿವರವನ್ನು ಅಷ್ಟಾಗಿ ಗಮನಿಸಿಲ್ಲ ಎಂಬುದು ಅಚ್ಚರಿಯ ಸಂಗತಿ.

## ದ್ರೌಪದೀಸ್ವಯಂವರ

ಸ್ವಯಂವರದ ನಿಬಂಧನೆಯನ್ನು ಧೃಷ್ಟದ್ಯುಮ್ನ ಘೋಷಿಸಿದ; ಮತ್ಸ್ಯಯಂತ್ರ ಭೇದನ ಮಾಡುವವರಿಗೆ ತನ್ನ ಸೋದರಿ ದ್ರೌಪದಿಯು ಮಾಲೆ ಹಾಕುವುದಾಗಿ ತಿಳಿಸಿದ. ದ್ರೌಪದಿಯನ್ನು ಪಡೆಯುವ ಕಾತರದಿಂದ ಕೂಡಲೇ ಒಂದು ರಾಜಕುಮಾರರ ದಂಡು ಆ ಧನುಸ್ಸಿನತ್ತ ಧಾವಿಸಿತು. ಆದರೆ, ಅದನ್ನು ಸಮೀಪಿಸುತ್ತಲೇ ಅದು ತಮಗೆ ಆಗದ ಕಾರ್ಯ ಎಂಬ ಎಚ್ಚರ ಮೂಡಿ ಅವರು ಬಂದಷ್ಟೇ ವೇಗದಲ್ಲಿ ಮರಳಿ ತಮ್ಮ ಆಸನ ಅಲಂಕರಿಸಿದರು. ಆ ವೇಳೆಗೆ ಆ ಕಾರ್ಯದಲ್ಲಿ ಪಾಲ್ಗೊಳ್ಳಲು ಮುಂದೆ ಬಂದವನು ಶಿಶುಪಾಲ. ಧನುಸ್ಸನ್ನು ಹೆದೆ ಏರಿಸುವ ಕಾರ್ಯದಲ್ಲಿ ತೊಡಗಿದ. ಆದರೆ, ಒಂದು ಉದ್ದಿನಕಾಳಿನಷ್ಟು ಅಂತರವಿದ್ದಾಗ ಅದು ಅವನ ಕೈಜಾರಿ ಅವನನ್ನೇ ಅಪ್ಪಳಿಸಿತು. ಶಿಶುಪಾಲ

---

೧ ಪ್ರೇಕ್ಷ್ಯಾಸ್ಮ ಚಕ್ರುರ್ಯದುಪುಂಗವಾಸ್ತೇ।
ಸ್ಥಿತಾಶ್ಚ ಕೃಷ್ಣಸ್ಯ ಮತೇ ಮಹಾಂತಾಃ॥ - ಮಹಾಭಾರತ (೧/೧೮೬/೮)

ಧೊಪ್ಪೆಂದು ಭೂಮಿಗೆ ಉರುಳಿದ. ಮುಂದಿನ ಸರದಿ ಶಲ್ಯರಾಜನದು. ವೃದ್ಧನಾದ ಅವನಿಗೆ ದ್ರೌಪದಿಯ ಬಗ್ಗೆ ಬಯಕೆಯೇನಿರಲಿಲ್ಲ. ಆದರೆ, ತನ್ನ ಸಾಮರ್ಥ್ಯವನ್ನು ತೋರುವ ಕಾತರತೆ ಮಾತ್ರ ಇತ್ತು. ಅವನು ಸಹ ಇನ್ನೇನು ಒಂದು ಹೆಸರುಕಾಳಿನಷ್ಟು ಅಂತರವಿದ್ದಾಗ ಆ ಧನುಸ್ಸಿನ ಪೆಟ್ಟು ತಿಂದು ಕೆಳಗೆ ಬಿದ್ದು ತನ್ನ ಆಸನಕ್ಕೆ ಮರಳಿದ. ಆ ಬಳಿಕ ಎದ್ದವನು ಜರಾಸಂಧ. ಆ ಕಾಲದಲ್ಲಿ ಇತರ ರಾಜರಿಗೆಲ್ಲ ಸಿಂಹಸ್ವಪ್ನವಾಗಿದ್ದ ಮಹಾದೈತ್ಯ ಅವನು. ಬ್ರಹ್ಮವರ, ಶಿವವರ ಮೊದಲಾದವುಗಳಿಂದ ಬೀಗುತ್ತಿದ್ದವನು. ಅವನಿಗೆ ಆ ಕಾರ್ಯದ ಬಗ್ಗೆ ಒಂದು ರೀತಿಯ ಅವಜ್ಞೆ. ಆ ಭಾವದಿಂದಲೇ ಧನುಸ್ಸನ್ನು ಎತ್ತಿ, ಕಟ್ಟಲು ನೋಡಿದ. ಆದರೆ ಒಂದು ಸಾಸಿವೆ ಕಾಳಿನಷ್ಟು ಅಂತರವಿದ್ದಾಗ ಅದು ಅವನ ಕೈಜಾರಿ ಅವನನ್ನೇ ಅಪ್ಪಳಿಸಿತು. ಅವನು ಇತರರಂತೆ ಕೆಳಕ್ಕೆ ಬೀಳದೆ ಮೊಳಕಾಲು ಊರಿ ಕುಕ್ಕರಿಸಿದ. ತನಗಾದ ಅವಮಾನವನ್ನು ಸಹಿಸಿಕೊಳ್ಳಲಾಗದೆ ಅಲ್ಲಿಂದ ತನ್ನ ಪಟ್ಟಣಕ್ಕೆ ತೆರಳಿಯೇ ಬಿಟ್ಟ. ಅದರಿಂದಾಗಿ ಮುಂದೆ ನಡೆಯುವ ದ್ರೌಪದೀಸ್ವಯಂವರವನ್ನು ನೋಡುವ ಭಾಗ್ಯವನ್ನು ಸಹ ಕಳೆದುಕೊಂಡ. ಕೊನೆಯದಾಗಿ ಎದ್ದವನು ಕರ್ಣ. ಅವನಿಗೂ ಸಹ ದ್ರೌಪದಿಯ ವಿವಾಹದ ಬಯಕೆ ಏನಿರಲಿಲ್ಲ. ಆದರೆ, ತನ್ನ ಪರಾಕ್ರಮವನ್ನು ತೋರಿಸುವುದು, ಜೊತೆಗೆ ತಾನು ಯಶಸ್ವಿಯಾದಲ್ಲಿ ದ್ರೌಪದಿಯನ್ನು ದುರ್ಯೋಧನನಿಗೆ ಕೊಟ್ಟು ವಿವಾಹ ಮಾಡುವುದು ಅವನ ಪ್ರಯತ್ನದ ಉದ್ದೇಶವಾಗಿತ್ತು. ಪರಶುರಾಮದೇವರಲ್ಲಿ ಮಾಡಿದ ಅಧ್ಯಯನದ ಪ್ರಭಾವದಿಂದಾಗಿ ಇತರ ಎಲ್ಲರನ್ನೂ ಕರ್ಣ ಮೀರಿಸಿದ. ಒಂದು ಕೂದಲೆಳೆಯಷ್ಟು ಅಂತರದಲ್ಲಿ ಅವನ ಪ್ರಯತ್ನ ವಿಫಲವಾಯಿತು; ಅವನೂ ಸಹ ಧನುಸ್ಸಿನ ಪೆಟ್ಟನ್ನು ತಿನ್ನುವುದು ಅನಿವಾರ್ಯವಾಯಿತು[೧].

ಕರ್ಣನ ಪರಾಭವ ಇತರರ ಉತ್ಸಾಹವನ್ನು ಸಂಪೂರ್ಣವಾಗಿ ಉಡುಗಿಸಿಬಿಟ್ಟಿತು. ಆ ಕಾಲದಲ್ಲಿ ಅಸ್ತ್ರವಿದ್ಯೆಯ ಪರೀಕ್ಷೆಯ ಸಮಯದಲ್ಲಿ ಅರ್ಜುನನಿಗಿಂತ ಒಂದು ಕೈಮೇಲೆ ಎಂದು ಎನ್ನಿಸಿಕೊಂಡಿದ್ದ ಅವನ ಪರಿಸ್ಥಿತಿ ಇತರರಿಗೆ ಪಾಠವೆನ್ನಿಸಿತು. ಯಾವ ಕ್ಷತ್ರಿಯನು ಸಹ ಆ ಬಗ್ಗೆ

---

೧ ಕರ್ಣ ಮತ್ಸ್ಯಯಂತ್ರ ಭೇದನಕ್ಕೆಂದು ಏಳುತ್ತಲೇ ದ್ರೌಪದಿಯು ಸೂತಪುತ್ರನಾದ ಅವನನ್ನು ನಾನು ವರಿಸಲಾರೆ ಎಂದು ನುಡಿದು ಅಪಮಾನಿಸಿದಳೆಂದೂ, ಅದಕ್ಕಾಗಿಯೇ ಕರ್ಣ ಅವಳ ಮೇಲೆ ಸೇಡು ತೀರಿಸಿಕೊಳ್ಳಲೆಂದು ಮುಂದೆ ಅನೇಕ ಪ್ರಸಂಗಗಳಲ್ಲಿ ದ್ರೌಪದಿಯ ಬಗ್ಗೆ ಕೆಟ್ಟದಾಗಿ ನಡೆದುಕೊಂಡ ಎಂದು ಕೆಲವರು ಹೇಳುವುದುಂಟು. ಅದು ಸರಿಯಲ್ಲ. ಮಹಾಭಾರತ ಮೂಲದಲ್ಲಿ ಆ ವಿಷಯ ಕಂಡುಬರುವುದಿಲ್ಲ. ಮಹಾಭಾರತತಾತ್ಪರ್ಯನಿರ್ಣಯದಲ್ಲೂ ಕರ್ಣನಿಗೆ ಅವಕಾಶ ಲಭಿಸಿದ ವಿಷಯವೇ ಬಂದಿದೆ. ಮತ್ಸ್ಯಯಂತ್ರ ಭೇದನಕ್ಕೆ ಜಾತಿಯ ನಿಬಂಧನ ಇರಲಿಲ್ಲ ಎಂಬ ಮಾತು ಮಹಾಭಾರತದಲ್ಲಿಯೇ ಸ್ಪಷ್ಟವಾಗಿ ಬಂದಿದೆ. ಯುಧಿಷ್ಠಿರ– ನೊಂದಿಗೆ ದ್ರುಪದ ಜಾತಿಯ ಪ್ರಶ್ನೆ ಎತ್ತಿದಾಗ, ಯುಧಿಷ್ಠಿರ ಆ ಮುನ್ನ ಜಾತಿಯ ನಿಬಂಧನೆ ಇರಲಿಲ್ಲವಲ್ಲ ಎಂಬುದಾಗಿಯೇ ಉತ್ತರಿಸುತ್ತಾನೆ: ''ಪೂರ್ವಂ ಹಿ ವರ್ಣವಿಷಯೇ ನ ವಿಶೇಷ ಉಕ್ತಃ''. ಆದ್ದರಿಂದ ಮಹಾಭಾರತದ ಕೆಲವು ಮುದ್ರಿತ ಪ್ರತಿಗಳಲ್ಲಿ ಮಾತ್ರ ಕಂಡುಬರುವ 'ನಾಹಂ ವರಯಾಮಿ ಸೂತಂ' ಎಂಬ ಮಾತು ಕೇವಲ ಪ್ರಕ್ಷೇಪವೆಂದು ತಿಳಿಯಬೇಕು. ಆದ್ದರಿಂದ ಕರ್ಣನು ಮುಂದೆ ದ್ರೌಪದಿಯ ಬಗ್ಗೆ ಕೆಟ್ಟದಾಗಿ ನಡೆದುಕೊಳ್ಳಲು ಅವನೊಳಗಿದ್ದ ಸಹಸ್ರವರ್ಮ ಎಂಬ ಅಸುರನ ಆವೇಶವೇ ಕಾರಣ ಎಂದು ತಿಳಿಯಬೇಕು.

ಮುಂದುವರೆಯಲು ಇಚ್ಛಿಸಲಿಲ್ಲ. ಅಲ್ಲಿಗೆ ಕ್ಷತ್ರಿಯರು ಆ ಕಾರ್ಯದಿಂದ ಹಿಮ್ಮೆಟ್ಟಿದಂತೆಯೇ ಆಯಿತು. ಸ್ವಯಂವರದಲ್ಲಿ ಭಾಗವಹಿಸಲು ವರ್ಣದ ನಿಬಂಧನೆ ಏನಿರಲಿಲ್ಲ. ಹೀಗಾಗಿ ಬ್ರಾಹ್ಮಣವೃಂದದಲ್ಲಿ ಕುಳಿತಿದ್ದ ಪಾಂಡವರಿಗೆ ಅವಕಾಶ ಲಭಿಸಿತು. ಬ್ರಾಹ್ಮಣವೇಷದಲ್ಲಿದ್ದ ಭೀಮಾರ್ಜುನರಿಬ್ಬರು ಮೇಲೆದ್ದರು. ಅವರನ್ನು ಕಂಡು ಬ್ರಾಹ್ಮಣರಿಗೆ ಅಂಜಿಕೆ ಹುಟ್ಟಿತು. ತಾವು ಅಂತಹ ಕಾರ್ಯದಲ್ಲಿ ಭಾಗವಹಿಸದೇ ತಮ್ಮ ಗೌರವವನ್ನು ಕಾಪಾಡಿಕೊಂಡು ಬಂದವರು. ಇವರು ಈಗ ಹಾಗೆ ಅವರು ಸಿದ್ಧರಾದದ್ದು ತಮ್ಮ ಮರ್ಯಾದೆಗೆ ಕುಂದು. ಅಲ್ಲದೆ, ಕರ್ಣಾದಿಕ್ಷತ್ರಿಯರಿಗೇ ಆಗದ ಕಾರ್ಯವನ್ನು ಇವರೆಂತು ಮಾಡಿಯಾರು ಎಂಬ ಯೋಚನೆಯಿಂದ ಅವರಿಬ್ಬರನ್ನು ತಡೆಯಲು ಪ್ರಯತ್ನಿಸಿದರು. ಆದರೆ, ಬ್ರಾಹ್ಮಣರಲ್ಲೆ ಮತ್ತೊಂದು ಗುಂಪಿನವರು ಅವರನ್ನು ಪ್ರೋತ್ಸಾಹಿಸುತ್ತಾ ಪರಶುರಾಮ, ಅಗಸ್ತ್ಯ ಮೊದಲಾದವರ ದೃಷ್ಟಾಂತವನ್ನು ನೀಡಿ ಅವರಂತೆ ಇವರು ಸಹ ಯಶಸ್ಸು ಗಳಿಸುವುದು ನಿಶ್ಚಿತ ಎಂದು ಹುರಿದುಂಬಿಸಿದರು. ಭೀಮಾರ್ಜುನರಿಗೆ ಅದಾವುದರ ಅಗತ್ಯವು ಇರಲಿಲ್ಲ. ಧನುಸ್ಸಿನವರೆಗೂ ಭೀಮಾರ್ಜುನರು ಸಾಗಿ ಬಂದರು. ಅರ್ಜುನ ಆ ವೇಳೆಗೆ ಭೀಮನಿಗೆ ವಂದಿಸಿ ಮತ್ಸ್ಯಯಂತ್ರ ಭೇದನೆಯ ಕಾರ್ಯಕ್ಕೆ ತನಗೆ ಅವಕಾಶ ನೀಡಲು ಕೇಳಿಕೊಂಡ. ಮಹಾಕರುಣಾಳುವಾದ ಭೀಮ ಅದಕ್ಕೆ ಸಮ್ಮತಿಸಿದ. ಅರ್ಜುನ ಅಲ್ಲಿಂದಲೇ ತನ್ನ ದೃಷ್ಟಿಯನ್ನು ಶ್ರೀಕೃಷ್ಣನತ್ತ ತಿರುಗಿಸಿ ಮನಸಾರೆ ವಂದಿಸಿದ. ಧನುಸ್ಸಿನ ಬಳಿಗೆ ತೆರಳಿ ಪ್ರದಕ್ಷಿಣೆ ಹಾಕಿ ನಮಸ್ಕರಿಸಿದ. ಭಕ್ತಿಯಿಂದ ಅದನ್ನು ಮೇಲೆತ್ತಿ ಬಾಗಿಸಿದ. ಇಡೀ ಸಭೆ ನೋಡುನೋಡುತ್ತಿದ್ದಂತೆಯೇ ಅದನ್ನು ಕಟ್ಟುವಲ್ಲಿ ಯಶಸ್ವಿಯೂ ಆದ. ಅದಕ್ಕೆ ಅವನಿಗಿದ್ದ ಕೃಷ್ಣಭೀಮರ ಅನುಗ್ರಹದೊಂದಿಗೆ ಶಿವ ಅರ್ಜುನನಿಗೆ ಮಾತ್ರವೇ ಅದನ್ನು ಕಟ್ಟಲು ಸಾಧ್ಯವಾಗಲಿ ಎಂದು ನೀಡಿದ್ದ ವರವು ಸಹಕಾರಿಯಾಯಿತು. ಹಾಗೆ ಧನುಸ್ಸನ್ನು ಕಟ್ಟಿದವನೆ ಅದರಲ್ಲಿ ಐದು ಬಾಣಗಳನ್ನು ಹೂಡಿ ಕೊಪ್ಪರಿಗೆಯ ನೀರಿನಲ್ಲಿ ಮತ್ಸ್ಯಯಂತ್ರದ ಪ್ರತಿಬಿಂಬವನ್ನು ನೋಡುತ್ತಲೆ ಆ ಬಾಣಗಳನ್ನು ಮತ್ಸ್ಯಯಂತ್ರಕ್ಕೆ ಪ್ರಯೋಗಿಸಿದ. ಆ ಐದು ಬಾಣಗಳು ಮತ್ಸ್ಯಯಂತ್ರಕ್ಕೆ ತಾಕಿ ಅದು ಕೆಳಕ್ಕೆ ಬಿದ್ದಿತು. ಸ್ವಯಂವರದ ಪಣ ಈಡೇರಿತು. ಜನ ಜಯಕಾರ ಮಾಡಿದರು. ದ್ರೌಪದೀ ಅರ್ಜುನನತ್ತ ಸಾಗಿ ಅವನ ಕೊರಳಲ್ಲಿ ಮಾಲೆ ಹಾಕಿದಳು.

ದ್ರೌಪದಿ ಹಾಗೆ ಮಾಲೆ ಹಾಕಿದ್ದು ಶಚಿ - ಇಂದ್ರನಿಗೆ, ಸ್ವಾಹಾ - ಅಗ್ನಿಗೆ, ಮಹಾಲಕ್ಷ್ಮಿ-ನಾರಾಯಣನಿಗೆ, ಉಷೆಯು ಸೂರ್ಯನಿಗೆ, ರತಿಯು ಮನ್ಮಥನಿಗೆ, ಪಾರ್ವತಿ ಶಿವನಿಗೆ, ಸೀತೆ ಶ್ರೀರಾಮನಿಗೆ ಮಾಲೆ ಹಾಕಿದಂತಿತ್ತು ಎಂದು ಮಹಾಭಾರತ ವರ್ಣಿಸಿದೆ[೧].

---

೧ ಶಚೀವ ದೇವೇಂದ್ರಮಥಾಗ್ನಿದೇವಂ ಸ್ವಾಹೇವ ಲಕ್ಷ್ಮೀಶ್ಚ ಯಥಾ ಮುಕುಂದಮ್ ।
ಉಷೇವ ಸೂರ್ಯಂ ಮದನಂ ರತಿಶ್ಚ ಮಹೇಶ್ವರಂ ಪರ್ವತರಾಜಪುತ್ರೀ ।
ರಾಮಂ ಯಥಾ ಮೈಥಿಲರಾಜಪುತ್ರೀ ಭೈಮೀ ಯಥಾ ರಾಜವರಂ ನಲಂ ಹಿ ॥
- ಮಹಾಭಾರತ (ಆದಿಪರ್ವ ೧೮೭/೨೮,೨೯)

ದ್ರೌಪದೀಸ್ವಯಂವರವು ಆ ಕಾಲದ ದಾಖಲೆಯ ಸ್ವಯಂವರವೆನ್ನಿಸಿತ್ತು. ಅದಕ್ಕೆ ದ್ರೌಪದಿಯ ಅನುಪಮ ಸೌಂದರ್ಯ, ಸ್ವಯಂವರದ ನಿಬಂಧನೆ ಮೊದಲಾದ ಅನೇಕ ಕಾರಣಗಳು ಸೇರಿದ್ದವು.

## ದ್ರೌಪದೀಸ್ವಯಂವರದ ಅಂತರಾರ್ಥ

ದ್ರೌಪದೀ ಎಂದರೆ ಭಾರತೀ. ಭಾರತಿಯು ಭಾವಿಸರಸ್ವತಿ ಎಂದರೆ ಸಕಲ ವಿದ್ಯೆಯ ಅಭಿಮಾನಿದೇವತೆ. ಅವಳನ್ನು ಪಡೆಯುವುದು ಎಂದರೆ, ಸರಸ್ವತಿಯ ಅನುಗ್ರಹಕ್ಕೆ ಪಾತ್ರವಾಗುವುದು ಎಂದರ್ಥ. ಅದಕ್ಕಿರುವ ನಿಬಂಧನೆ ಎಂದರೆ ಬಿಚ್ಚಿಟ್ಟ ಧನುಸ್ಸನ್ನು ಕಟ್ಟುವುದು, ಅದರಲ್ಲಿ ಐದು ಬಾಣಗಳನ್ನು ಹೂಡುವುದು, ಕೊಪ್ಪರಿಗೆಯ ನೀರಿನಲ್ಲಿ ಮತ್ಸ್ಯಯಂತ್ರದ ಪ್ರತಿಬಿಂಬವನ್ನು ನೋಡುವುದು, ಹಾಗೆ ನೋಡುತ್ತಲೆ ಮೇಲೆ ಕಟ್ಟಿದ ಮತ್ಸ್ಯಯಂತ್ರವನ್ನು ಭೇದಿಸಿ ಕೆಳಕ್ಕೆ ಬೀಳಿಸುವುದು. ಇವುಗಳ ಅರ್ಥ ಹೀಗಿದೆ. ಧನುಸ್ಸು ಎಂದರೆ ಮನಸ್ಸು; ಅದನ್ನು ಕಟ್ಟುವುದು ಎಂದರೆ ಪೂರ್ಣವಾಗಿ ಹತೋಟಿಯಲ್ಲಿಟ್ಟುಕೊಳ್ಳುವುದು, ಐದು ಬಾಣಗಳು ಎಂದರೆ ಪಂಚಜ್ಞಾನೇಂದ್ರಿಯಗಳು, ಅವುಗಳನ್ನು ಧನುಸ್ಸಿನಲ್ಲಿ ಹೂಡುವುದು ಎಂದರೆ ಮನಸ್ಸಿನೊಂದಿಗೆ ಒಡಗೂಡಿಸಿ ಏಕಾಗ್ರತೆಯನ್ನು ಸಾಧಿಸುವುದು. ಕೊಪ್ಪರಿಗೆ ಎಂದರೆ ಗ್ರಂಥಗಳು, ಅದರಲ್ಲಿನ ನೀರು ಎಂದರೆ ಶಬ್ದರಾಶಿ ಸ್ವರೂಪದ ಶಾಸ್ತ್ರಪ್ರಪಂಚ. ಮೇಲಿನ ಮತ್ಸ್ಯಯಂತ್ರ ಮತ್ಸ್ಯಾದಿ ರೂಪದ ಭಗವಂತನ ಪ್ರತೀಕ. ನೀರಿನಲ್ಲಿ ಪ್ರತಿಬಿಂಬ ನೋಡುವುದು ಎಂದರೆ ಶಾಸ್ತ್ರಪ್ರತಿಪಾದ್ಯನಾದ ಭಗವಂತನನ್ನು ಜಿಜ್ಞಾಸೆ ಮಾಡುವುದು. ಮೇಲೆ ನೋಡುವುದು ಎಂದರೆ ಉನ್ನತ ಆದರ್ಶಗಳತ್ತ ಶಾಸ್ತ್ರಪ್ರತಿಪಾದ್ಯನಾದ ಭಗವಂತನತ್ತ ಗಮನಹರಿಸುವುದು ಎಂದರ್ಥ. ಶಮ ಎಂದರೆ ಇದೇ. ಐದು ಬಾಣಗಳು ಮತ್ಸ್ಯಯಂತ್ರಕ್ಕೆ ತಾಗುವುದು ಎಂದರೆ ಪಂಚೇಂದ್ರಿಯಗಳಿಂದಲೂ ಭಗವಂತನನ್ನೇ ಏಕಾಗ್ರತೆಯಿಂದ ಚಿಂತಿಸುವುದು. ಹಾಗೆ ಹೊಡೆದ ಬಾಣಗಳು ಮತ್ಸ್ಯಯಂತ್ರವನ್ನು ಭೇದಿಸುವುದು ಎಂದರೆ ಐದು ಇಂದ್ರಿಯಗಳಿಂದ ಭಗವಂತನ ಮಹಿಮೆಯನ್ನು ಆಸ್ವಾದಿಸುವುದು. ಅದು ಕೆಳಕ್ಕೆ ಬೀಳುವುದು ಎಂದರೆ ಬಿಂಬರೂಪಿಯಾದ ಭಗವಂತನು ಹೃದಯಾಕಾಶದಲ್ಲಿಯೇ ಅಪರೋಕ್ಷದರ್ಶನ ನೀಡುವುದು ಎಂದರ್ಥ. ಆಗ ದ್ರೌಪದಿಯು ಮಾಲೆ ಹಾಕುವುದು ಎಂದರೆ ಅಪರೋಕ್ಷಜ್ಞಾನ ಲಭಿಸುವುದು. ಹೀಗೆ ದ್ರೌಪದೀಸ್ವಯಂವರವು ಸಾಧಕನಿಗೆ ವಿದ್ಯಾಪ್ರಾಪ್ತಿಯ ಸಂಕೇತವಾಗಿದೆ.

---

– ಇಲ್ಲಿ ಶಚಿಯು ದೇವೇಂದ್ರನಿಗೆ ಎಂಬ ಮಾತಿನಲ್ಲಿ ದ್ರೌಪದಿಯಲ್ಲಿ ಆಗ ಶಚಿಯ ಆವೇಶ ಎಂಬ ಸೂಚನೆ ಇದೆ. ಅರ್ಜುನನಂತೂ ಇಂದ್ರನೆ. ದ್ರೌಪದಿಯಲ್ಲಿ ಇತರ ದೇವತಾ ಸ್ತ್ರೀಯರು ಆವಿಷ್ಟರಾಗಿದ್ದ ಸಂಗತಿ ಅನೇಕ ಪ್ರಸಂಗಗಳಲ್ಲಿ ಹೀಗೆ ಸೂಚ್ಯವಾಗಿ ಮಹಾಭಾರತದಲ್ಲಿ ಬಂದಿರುವುದು ಗಮನಿಸಬೇಕಾದ ಅಂಶ.

ಆ ಧನುಸ್ಸಿಗೆ ಶಿವನ ವರವಿದ್ದಿತು ಎಂದರೆ, ಮನಸ್ಸಿನ ಅಭಿಮಾನಿ ದೇವತೆ ಸಾಕ್ಷಾತ್ ರುದ್ರದೇವರು[೧]; ಅವರ ಅನುಗ್ರಹದ ಹೊರತು ಅದು ಪೂರ್ಣವೆನ್ನಿಸದು ಎಂದರ್ಥ. ಅದನ್ನು ಅರ್ಜುನ ನಮಸ್ಕರಿಸಿ ಕೈಗೆತ್ತಿಕೊಳ್ಳುವ ಮೂಲಕ ಮನೋನಿಗ್ರಹದ ಸಾಧನೆಗೆ ರುದ್ರದೇವರಿಗೆ ಶರಣಾಗುವುದೇ ಉಪಾಯ ಎಂದಾಗುವುದು. ಆ ಮುನ್ನ ಅವನು ಪಡೆದ ಭೀಮನ ಅನುಜ್ಞೆ 'ಶ್ರೀಗುರುಭ್ಯೋ ನಮಃ' ಎಂಬುದಕ್ಕೂ, ಶ್ರೀಕೃಷ್ಣನಿಗೆ ಮಾಡಿದ ವಂದನೆ 'ಹರಿಃ ಓಂ' ಎಂಬುದಕ್ಕೆ ಸಂಕೇತ. ಅರ್ಜುನನಂತು ಶ್ರವಣ, ಮನನ ಹಾಗೂ ಧ್ಯಾನಗಳ ಸಂಕೇತ. ಎಂದರೆ ಶ್ರವಣಾದಿಗಳನ್ನು ಮಾಡುವ ಜಿಜ್ಞಾಸುವಿಗಷ್ಟೇ ಹೀಗೆ ಮನೋನಿಗ್ರಹಾದಿಗಳ ಮೂಲಕ ಲಭಿಸುವ ಶ್ರೀಹರಿವಾಯುಗುರುಗಳ ಅನುಗ್ರಹದಿಂದ ವಿದ್ಯಾಪ್ರಾಪ್ತಿ ಎಂಬುದು ಈ ಘಟ್ಟದ ಒಟ್ಟು ಭಾವ.

## ಸ್ವಯಂವರದ ಅನಂತರ

ಸ್ವಯಂವರವೇನೋ ಪೂರೈಸಿತು. ಆ ಸಮಯದಲ್ಲಿಯೇ ಶ್ರೀಕೃಷ್ಣ ಬಲರಾಮ ಮೊದಲಾದವರಿಗೆ ಆಗ ಎದ್ದು ಬಂದ ಇಬ್ಬರು ಭೀಮಾರ್ಜುನರು ಅವರ ಜೊತೆಗೆ ಕುಳಿತಿದ್ದವರು ಇತರ ಪಾಂಡವರು ಎಂಬುದನ್ನು ತಿಳಿಸಿ ಪಾಂಡವರು ಜೀವಂತ ಇರುವುದನ್ನು ಸ್ಫುಟಪಡಿಸಿದ. ಯಾದವರಿಗೆಲ್ಲ ಸಂಭ್ರಮವೆನ್ನಿಸಿತು. ಆದರೆ, ಇತರ ಕ್ಷತ್ರಿಯರು ಅದನ್ನು ತಮ್ಮ ಸೋಲು ಎಂದು ಭಾವಿಸದೆ ದ್ರುಪದ ತಮಗೆ ಮಾಡಿದ ಅವಮಾನ ಎಂದು ತಪ್ಪಾಗಿ ತಿಳಿದರು. ಅದನ್ನು ಪ್ರತಿಭಟಿಸಲೆಂದು ಎಲ್ಲರು ಏಕಕಾಲಕ್ಕೆ ಅವನನ್ನು ಆಕ್ರಮಿಸಲು ನೋಡಿದರು. ದ್ರುಪದ ಒಂದು ಕ್ಷಣ ದಿಕ್ಕುತೋಚದಂತಾದ. ಆದರೆ, ಕೂಡಲೇ ಭೀಮಸೇನ ಯೋಜನಗಟ್ಟಲೆ ಎತ್ತರವಿದ್ದ ಒಂದು ಭಾರಿ ಗಾತ್ರದ ಮರವನ್ನು ಅನಾಮತ್ತಾಗಿ ಒಂದೇ ಕೈಯಿಂದ ಕಿತ್ತಿ, ಎತ್ತಿ ಹಿಡಿದುಕೊಂಡು ರಾಜರನ್ನೆಲ್ಲ ಎದುರಿಸಿ ನಿಂತ. ಅದನ್ನು ನೋಡುತ್ತಲೆ ಭಯದಿಂದ ಕಂಗೆಟ್ಟ ರಾಜರ ಗುಂಪು ದಿಕ್ಕು ಬದಲಾಯಿಸಿ ಓಡತೊಡಗಿತು. ಅದನ್ನು ಉಪಯೋಗಿಸುವ ಪ್ರಸಂಗವು ಬರದೇ ಭೀಮಸೇನ ಅದನ್ನು ಮರಳಿ ಅದು ಇದ್ದ ಜಾಗದಲ್ಲಿಯೇ ಇರಿಸಿದ. ಬ್ರಾಹ್ಮಣರಿಗಂತೂ ಸಂಭ್ರಮವೋ ಸಂಭ್ರಮ. ಕ್ಷತ್ರಿಯರ ಮೇಲೆ ತಾವು ಸಾಧಿಸಿದ ವಿಜಯ ಎಂದು ಭಾವಿಸಿ ಅವರೆಲ್ಲ ಕುಣಿದಾಡಿದರು. ಕೈಲಿದ್ದ ದರ್ಭೆ, ಕೃಷ್ಣಾಜಿನ, ಕಮಂಡಲು ಮೊದಲಾದವುಗಳನ್ನು ರಾಜರ ಮೇಲೆ ಎಸೆಯುತ್ತಾ ಭೀಮಾರ್ಜುನರ ಸಮರಕಾರ್ಯದಲ್ಲಿ ಅವರೂ ಪಾಲ್ಗೊಂಡುಬಿಟ್ಟರು. ಆ ವೇಳೆಗೆ ಧೈರ್ಯದಿಂದ ಮುನ್ನುಗ್ಗಿ ಬಂದವನು ಶಲ್ಯ. ಅವನನ್ನು ಭೀಮಸೇನ ಒಂದೇ ಕೈಯಿಂದ

---

೧ ಪ್ರಣಮ್ಯ ಶಿರಸಾ ದೇವಮೀಶಾನಂ ವರದಂ ಪ್ರಭುಮ್ ।
ಕೃಷ್ಣಂ ಚ ಮನಸಾ ಕೃತ್ವಾ ಜಗೃಹೇ ಚಾರ್ಜುನೋ ಧನುಃ ॥
– ಮಹಾಭಾರತ (ಆದಿಪರ್ವ ೧೮೭/೧೮)

ಮೇಲಕ್ಕೆತ್ತಿ ಗಗನಕ್ಕೆ ತೂರಿದ. ಬಲುದೂರ ಗಗನದಲ್ಲಿ ಸಾಗಿ ಕೆಳಕ್ಕೆ ಬೀಳತೊಡಗಿದ ಅವನನ್ನು ಬಂಧು ಎಂಬ ಕಾರಣದಿಂದ ಕೆಳಕ್ಕೆ ಬೀಳದಂತೆ ತನ್ನ ಕೈಯಲ್ಲಿ ಹಿಡಿದುಕೊಂಡು ನಿಧಾನವಾಗಿ ಕೆಳಕ್ಕೆ ಇಳಿಸಿದ. ಶಲ್ಯನಿಗೆ ಆಗ ಉಂಟಾದ ಆಘಾತಕ್ಕೆ ಮಿತಿಯೇ ಇರಲಿಲ್ಲ. ಬದುಕಿದ್ದೇ ದೊಡ್ಡದೆಂದು ಭಾವಿಸಿ ಕೂಡಲೇ ತನ್ನ ಮದ್ರದೇಶಕ್ಕೆ ಧಾವಿಸಿದ.

ಕರ್ಣನು ಅರ್ಜುನನ ಮೇಲೆ ಬಾಣಗಳ ಮಳೆಗೆರೆಯುತ್ತ ಎದುರಿಸಿದ. ಅವನಿಗೆ ಒಬ್ಬ ಬ್ರಾಹ್ಮಣ ಹಾಗೆ ಮಾಡಿದ್ದು ಚಿಂತೆಗೆ ಕಾರಣವಾಗಿತ್ತು. ಅವನನ್ನು ಸಮೀಪಿಸಿ ಹೋರಾಡಿದ. ಆದರೆ ಈ ಬಾರಿ ಸ್ಪರ್ಧೆಯಿಂದ ಹೋರಾಡಿದ್ದರಿಂದ ಕರ್ಣನಿಗೆ ಗೆಲ್ಲಲು ಸಾಧ್ಯವಾಗದಾಯಿತು. 'ಸ್ಪರ್ಧೆಯಿಂದ ಕಾದಿದಲ್ಲಿ ನಿನಗೆ ಗೆಲುವು ಲಭಿಸದು' ಎಂಬುದಾಗಿ ಪರಶುರಾಮರು ನೀಡಿದ್ದ ಶಾಪ ಅದಕ್ಕೆ ಕಾರಣವಾಯಿತು; ಅವನು ಆಶ್ಚರ್ಯದಿಂದ ಕೇಳಿದ. ''ನೀನಾರು? ತಪಸ್ಸೇ ಮೂರ್ತಿಭವಿಸಿದವನೋ? ಸ್ವತಃ ಪರಶುರಾಮನೋ? ದೇವೇಂದ್ರನೋ? ತಿಳಿಸು'' ಎಂದ. ಅರ್ಜುನ ಹೇಳಿದ ''ಯುದ್ಧಕ್ಕೆ ಬಂದವನು ನೀನು, ಕೈಲಾದರೆ ಹೋರಾಡು ಇಲ್ಲವಾದರೆ ತೆರಳು''. ಕರ್ಣನಿಗೆ ತೆರಳುವುದೇ ಉಚಿತವೆನ್ನಿಸಿ ಅಲ್ಲಿಂದ ಮರಳಿದ.

## ಕುಂತಿಯ ವಿಚಿತ್ರ ಸಂದೇಶ

ಪಾಂಡವರೆಲ್ಲ ದ್ರೌಪದಿಯನ್ನು ತಮ್ಮೊಂದಿಗೆ ಕರೆದುಕೊಂಡು ತಾವು ಇಳಿದುಕೊಂಡಿದ್ದ ಕುಂಬಾರನ ಮನೆಗೆ ತೆರಳಿದರು. ಅಲ್ಲಿ ಕುಂತಿ ಮಕ್ಕಳ ಪ್ರತೀಕ್ಷೆಯಲ್ಲಿದ್ದಳು. ಅಲ್ಲಿಗೆ ಬಂದವರೇ ಪಾಂಡವರು ''ಅಮ್ಮ! ಭಿಕ್ಷೆ ತಂದಿರುವೆವು''[೧] ಎಂದರು. ಪ್ರತಿನಿತ್ಯ ಪಾಂಡವರು ಭಿಕ್ಷೆಯನ್ನು ತಂದು ಹಾಗೆ ಹೇಳುವುದು. ಕುಂತಿ ಆ ಕೂಡಲೆ ಅದನ್ನು ನೀವೆಲ್ಲರು ಸಮನಾಗಿ ಹಂಚಿಕೊಂಡು ಉಣ್ಣಿ ಎನ್ನುವುದು ಪದ್ಧತಿಯಾಗಿತ್ತು. ಅಂದು ಸಹ ಹಾಗೆಯೇ ಹೇಳಿದಳು. ''ನೀವೆಲ್ಲರೂ ಒಟ್ಟಾಗಿ ಭುಂಜಿಸಿ.''[೨] ಮುಂದೆ ನಡೆದದ್ದು ಅಚ್ಚರಿಯ ಸಂಗತಿಯಾಯಿತು. ಅಲ್ಲಿ ಕುಂತಿ ಕಂಡದ್ದು ಭಿಕ್ಷೆಯನ್ನಲ್ಲ, ದ್ರೌಪದಿಯನ್ನು. ಒಂದು ಕ್ಷಣ ಅವಳಿಗೆ ಏನೂ ತೋಚದಾಯಿತು. ಆದರೆ, ತಪ್ಪಿಯೂ ಸಹ ಎಂದೂ ಸುಳ್ಳಾಡದ ಅಪೂರ್ವ ಸಿದ್ಧಿ ಅವಳದ್ದು. ಅದರಿಂದಾಗಿ ತನ್ನ ಮಾತಿನ ಹಿಂದೆ ಏನೋ ರಹಸ್ಯ ಅಡಗಿದೆ ಎಂದಷ್ಟೆ ಭಾವಿಸಿ ಸುಮ್ಮನಾಗಿಬಿಟ್ಟಳು. ಪಾಂಡವರಿಗೂ ಹಾಗೆಯೇ ಎನ್ನಿಸಿತು. ಅವರೆಲ್ಲರಿಗೂ ದ್ರೌಪದಿಯ

---

೧ ತಾಂ ಯಾಜ್ಞಸೇನೀಂ ಪರಮಪ್ರತೀತೌ ಭಿಕ್ಷೇತ್ಯಥಾವೇದಯತಾಂ ನರಾಗ್ರ್ಯೌ ।
- ಮಹಾಭಾರತ (ಆದಿಪರ್ವ ೧೮೯/೧)

೨ ಕುಟೀಗತಾ ಸಾ ತ್ವನವೇಕ್ಷ್ಯ ಪುತ್ರೌ ಪ್ರೋವಾಚ ಭುಂಕ್ತೇತಿ ಸಮೇತ್ಯ ಸರ್ವೇ ।
ಪಶ್ಚಾಚ್ಚ ಕುಂತೀ ಪ್ರಸಮೀಕ್ಷ್ಯ ಕೃಷ್ಣಾಂ ಕಷ್ಟಂ ಮಯಾ ಭಾಷಿತಮಿತ್ಯುವಾಚ ॥
- ಮಹಾಭಾರತ (ಆದಿಪರ್ವ ೧೮೯/೨)

ಮೇಲೆ ಮನಸ್ಸು ಹುಟ್ಟಿತ್ತು[೧]. ಎಲ್ಲರೂ ಸಹ ಅಂದು ನಡೆದ ಸ್ವಯಂವರದ ವಿಚಾರವನ್ನು ಕುಂತಿಗೆ ಒಪ್ಪಿಸುತ್ತಿದ್ದಾಗ ಅಲ್ಲಿಗೆ ಸ್ವತಃ ಭಗವಂತನಾದ ಶ್ರೀಕೃಷ್ಣ ಬಲರಾಮನೊಂದಿಗೆ ಆಗಮಿಸಿದ. ಪಾಂಡವರ ಸಂಭ್ರಮಕ್ಕೆ ಮಿತಿ ಇಲ್ಲದಾಯಿತು. ಅವರ ಕುಶಲ ಪ್ರಶ್ನೆಯನ್ನು ವಿಚಾರಿಸಿದ ಶ್ರೀಕೃಷ್ಣ ಮರಳಿದ. ಈ ಸಮಯದಲ್ಲಿ ಅವರಾರೂ ಆ ಸಮಸ್ಯೆಯನ್ನು ಶ್ರೀಕೃಷ್ಣನ ಮುಂದೆ ಚರ್ಚಿಸಲಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಆದಕ್ಕೆ ಅವರು ಅದನ್ನು ಸಮಸ್ಯೆ ಎಂದು ಭಾವಿಸದೆ, ನಿರ್ಣಯ ಎಂದು ಭಾವಿಸಿದ್ದೇ ಕಾರಣವಾಗಿತ್ತು ಎಂದು ತಿಳಿಯಬಹುದು[೨].

## ದ್ರುಪದನ ಚಿಂತೆ

ಇತ್ತ ದ್ರುಪದನಿಗೆ ಒಂದು ಕಡೆ ತುಂಬಾ ನೆಮ್ಮದಿ ಎನ್ನಿಸಿತ್ತು. ಆದರೆ, ಒಂದು ಸಂಶಯ ಮಾತ್ರ ಹಾಗೆಯೇ ಉಳಿದುಕೊಂಡಿತ್ತು. ತನ್ನ ಆವರೆಗಿನ ಯೋಜನೆಯಂತೆ ಎಲ್ಲವೂ ನಡೆದು ರುದ್ರದೇವರ ವರದಿಂದಾಗಿ ಅರ್ಜುನನಿಗೆ ಮಾತ್ರವೇ ಆ ಧನುಸ್ಸನ್ನು ಎತ್ತಲು ಸಾಧ್ಯ ಎಂದು ನಿರ್ಣಯವಾಗಿದ್ದರಿಂದ ಆ ಮತ್ಸ್ಯಯಂತ್ರವನ್ನು ಭೇದನ ಮಾಡಿದವನು ಅರ್ಜುನನೇ ಎಂದು ಊಹಿಸಿದ. ಆದರೆ, ಹಾಗೆ ಮಾಡಿದ್ದು ಒಬ್ಬ ಬ್ರಾಹ್ಮಣ ಎಂಬ ಕಾರಣದಿಂದ ಅವನ ಸಂಶಯ ಪೂರ್ಣ ನಿವಾರಣೆಯಾಗದಾಯಿತು. ಬ್ರಾಹ್ಮಣರೂಪದಲ್ಲಿ ಅರ್ಜುನ ಇದ್ದದ್ದನ್ನು ಊಹಿಸಲೂ ಅವನಿಗೆ ಸಾಧ್ಯವಾಗದ್ದರಿಂದ ಅದಕ್ಕಾಗಿ ಉಪಾಯವೊಂದನ್ನು ಹೂಡಿದ. ತನ್ನ ಮಗನಾದ ಧೃಷ್ಟದ್ಯುಮ್ನನನ್ನು ಕರೆದು ಅವರ ರಹಸ್ಯವನ್ನು ತಿಳಿದುಬರಲು ಕಳುಹಿಸಿಕೊಟ್ಟ. ಆ ವೇಳೆಗೆ ದ್ರುಪದನ ಆದೇಶದಂತೆ ಧೃಷ್ಟದ್ಯುಮ್ನ ಅಲ್ಲಿಗೆ ಆಗಮಿಸಿ ಮರೆಯಲ್ಲಿ ನಿಂತು ಅವರೆಲ್ಲ ಯಾರು ಎಂಬುದನ್ನು ತಿಳಿಯಲು ಪ್ರಯತ್ನಿಸಿದ. ಅವರೆಲ್ಲ ಅಂದು ನಡೆದ ಯುದ್ಧದ

---

೧ ದೃಷ್ಟ್ವಾ ತೇ ತತ್ರ ಪಶ್ಯಂತೀಂ ಸರ್ವೇ ಕೃಷ್ಣಾಂ ಯಶಸ್ವಿನೀಮ್ ।
ಸಂಪ್ರೇಕ್ಷ್ಯಾನ್ಯೋನ್ಯಮಾಸೀನಾ ಹೃದಯೈಸ್ತಾಮಧಾರಯನ್ ॥
ತೇಷಾಂ ತು ದ್ರೌಪದೀಂ ದೃಷ್ಟ್ವಾ ಸರ್ವೇಷಾಮಮಿತೌಜಸಾಮ್ ।
ಸಂಪ್ರಮಥ್ಯೇಂದ್ರಿಯಗ್ರಾಮಂ ಪ್ರಾದುರಾಸೀನ್ಮನೋಭವಃ ॥
ಕಾಮ್ಯಂ ಹಿ ರೂಪಂ ಪಾಂಚಾಲ್ಯಾ ವಿಧಾತ್ರಾ ವಿಹಿತಂ ಸ್ವಯಮ್ ।
ಬಭೂವಾಧಿಕಮನ್ಯಾಭ್ಯಃ ಸರ್ವಭೂತಮನೋಹರಮ್ ॥
ತೇಷಾಮಾಕಾರಭಾವಜ್ಞಃ ಕುಂತೀಪುತ್ರೋ ಯುಧಿಷ್ಠಿರಃ ।
ದ್ವೈಪಾಯನವಚಃ ಕೃತ್ಸ್ನಂ ಸಸ್ಮಾರ ಮನುಜರ್ಷಭಃ ॥
ಅಬ್ರವೀತ್ ಸಹಿತಾನ್ ಭ್ರಾತೄನ್ ಮಿಥೋಭೇದಭಯಾನ್ನೃಪಃ ।
ಸರ್ವೇಷಾಂ ದ್ರೌಪದೀ ಭಾರ್ಯಾ ಭವಿಷ್ಯತಿ ಹಿ ನಃ ಶುಭಾ ॥
– ಮಹಾಭಾರತ (ಆದಿಪರ್ವ ೧೯೦/೧೨-೧೬)

೨ ಪ್ರಶ್ನದೋಷಾ ಹಿ ಚತ್ವಾರಃ ಸ್ವವ್ಯಾಹತಿರಸಂಗತಿಃ ।
ಸಿದ್ಧಾರ್ಥತಾ ಚ ವೈಫಲ್ಯಂ ನ ತೈಃ ಸ್ಯಾತ್ ತತ್ತ್ವನಿರ್ಣಯಃ ॥ – ಅನುವ್ಯಾಖ್ಯಾನ

ವಾರ್ತೆಯನ್ನು ಸಂಭ್ರಮದಿಂದ ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿಸಿಕೊಂಡು. ಅವರು ಮೂಲತಃ ಕ್ಷತ್ರಿಯರಿರಬೇಕು ಎಂಬ ಭಾವ ಹೆಚ್ಚು ದೃಢವಾಯಿತು. ಆದರೆ, ನಿರ್ಣಯ ಮಾತ್ರ ಆಗಲಿಲ್ಲ.

ಮಾರನೆಯ ದಿನ ದ್ರುಪದ ರಾಜ ಅವರನ್ನು ತನ್ನ ಅರಮನೆಗೆ ಆಹ್ವಾನಿಸಿದ. ಅವರು ನಿಜಕ್ಕೂ ಯಾರು? ಎಂಬುದನ್ನು ಗುರುತಿಸಲು ಸಾಧ್ಯವಾಗಲೆಂದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ಎಂಬ ನಾಲ್ಕು ವರ್ಣದವರಿಗೆ ಅಗತ್ಯವೆನ್ನಿಸುವ ಸಾಮಗ್ರಿಗಳಿಂದ ಕೂಡಿದ ನಾಲ್ಕು ಪ್ರತ್ಯೇಕ ನಿವಾಸಗಳನ್ನು ಸಿದ್ಧಪಡಿಸಿದ. ಅವುಗಳನ್ನು ಅವರಿಗೆ ತೋರಿಸಿ ಅವರಿಗೆ ಅಪೇಕ್ಷಿತವಾದದ್ದನ್ನು ಆರಿಸಿಕೊಳ್ಳಲು ವಿಜ್ಞಾಪಿಸಿದ. ಅವರು ಸಹಜವಾಗಿಯೇ ಕ್ಷತ್ರಿಯರಿಗೆ ಉಚಿತವಾದ ಆಯುಧಾದಿಗಳಿಂದ ತುಂಬಿದ್ದ ಮನೆಯನ್ನೇ ಆರಿಸಿಕೊಂಡರು. ಅವರು ಕ್ಷತ್ರಿಯರಿರಬಹುದು ಎಂಬ ದ್ರುಪದನ ಊಹೆಗೆ ಮತ್ತಷ್ಟು ಪುಷ್ಟಿ ದೊರೆಯಿತು. ಆ ಸಂಭ್ರಮದಲ್ಲಿಯೇ ಧರ್ಮರಾಜನ ಬಳಿಗೆ ಬಂದು ಕೇಳಿಕೊಂಡ. ''ನೀವು ಯಾರು? ದಯವಿಟ್ಟು ತಿಳಿಸಿ?''. ಧರ್ಮರಾಜ ನುಡಿದ ''ವರ್ಣದ ವಿಚಾರವನ್ನು ನೀನು ಆ ಮುನ್ನ ತಿಳಿಸಿರಲಿಲ್ಲ; ಎಂದ ಮೇಲೆ ಅದರ ಪ್ರಸ್ತಾಪ ಈಗೇಕೆ? ನಾವು ಯಾರಾದರೇನಂತೆ, ಮತ್ಸ್ಯಯಂತ್ರ ಭೇದನ ಮಾಡಿದವರಿಗೆ ದ್ರೌಪದಿಯನ್ನು ನೀನು ಘೋಷಣೆ ಮಾಡಿದ್ದೆಯಲ್ಲವೆ? ಅದನ್ನು ನನ್ನ ತಮ್ಮ ಮಾಡಿರುವನು, ನಿನ್ನ ಮಾತನ್ನು ನಡೆಸು.'' ದ್ರುಪದನಿಗೆ ತೋಚದಾಯಿತು. ಕುಂತಿಯನ್ನು ಕೇಳಿದ ''ಅಮ್ಮ! ದಯವಿಟ್ಟು ತಿಳಿಸು, ಇವರು ಯಾರು, ನೀನು ಯಾರು?'' ಕುಂತಿ ಹೇಳಿದಳು ''ನಾನು ಕುಂತಿ, ಇವರೆಲ್ಲ ನನ್ನ ಮಕ್ಕಳಾದ ಪಾಂಡವರು, ಮತ್ಸ್ಯಯಂತ್ರ ಭೇದನ ಮಾಡಿದವನು ಅರ್ಜುನ.'' ದ್ರುಪದನಿಗೆ ಪೂರ್ಣ ನೆಮ್ಮದಿಯಾಯಿತು. ತಾನು ಮಾಡಿದ ಯಾಗ ಸಾರ್ಥಕವಾಯಿತು. ವೇದಮಂತ್ರಗಳ ಪ್ರಾಮಾಣ್ಯ ದೃಢವಾಯಿತು. ತನ್ನ ಸಂಕಲ್ಪದಂತೆ ತನ್ನ ಮಗಳು ಅರ್ಜುನನ ಕೈಹಿಡಿಯುವಂತಾಯಿತು; ಎಂದೆಲ್ಲ ತಿಳಿದು ಸಂಭ್ರಮಿಸಿದ. ಆ ಖುಷಿಯಲ್ಲಿಯೇ ಯುಧಿಷ್ಠಿರನನ್ನು ಕುರಿತು ಹೀಗೆಂದು ಹೇಳಿದ. ''ಧರ್ಮರಾಜ! ನನಗೀಗ ಆಗಿರುವ ಆನಂದ ಹೇಳತೀರದು. ನನಗೇನೋ ಅರ್ಜುನನೇ ಅಳಿಯನಾಗಬೇಕೆಂದು ಬಯಕೆ. ಆದರೆ, ಆ ಬಗ್ಗೆ ಹಠವೇನಿಲ್ಲ. ನಿಮ್ಮ ಐವರಲ್ಲಿ ದ್ರೌಪದಿಯನ್ನು ಯಾರೇ ಮದುವೆಯಾದರು ಅದು ನನಗೆ ಸಮ್ಮತ.''

ಯುಧಿಷ್ಠಿರ ಉತ್ತರಿಸಿದ ''ದ್ರುಪದರಾಜ! ಚಿಂತಿಸಬೇಡ, ಒಬ್ಬರಲ್ಲ ನಾವು ಐವರೂ ದ್ರೌಪದಿಯನ್ನು ವಿವಾಹವಾಗುವೆವು.'' ಆಗಷ್ಟೆ ನಿಶ್ಚಿಂತನಾಗಿದ್ದ ದ್ರುಪದನಿಗೆ ಮತ್ತೆ ಆಘಾತವಾಯಿತು. ''ಧರ್ಮರಾಜ! ಇದೇನು? ಒಬ್ಬ ಹೆಣ್ಣನ್ನು ಐದು ಜನ ವಿವಾಹವಾಗುವುದೆಂತು? ಶಾಸ್ತ್ರವು ಒಪ್ಪದ, ಲೋಕವೂ ಒಪ್ಪದ ಇದು ಹೇಗೆ ತಾನೆ

ಧರ್ಮವೆನ್ನಿಸೀತು? ಧರ್ಮರಾಜನಾದ ನೀನು ಇದನ್ನು ಹೇಗೆ ತಾನೆ ಧರ್ಮವೆನ್ನಲು ಸಾಧ್ಯ?''೧. ಯುಧಿಷ್ಠಿರ ನುಡಿದ: ''ನಿನ್ನ ಪ್ರಶ್ನೆ ಸರಿಯಾದುದು ನಿಜ; ಮೇಲ್ನೋಟಕ್ಕೆ ಇದು ಅಧರ್ಮವೆನ್ನಿಸುವುದು ನಿಜ. ಆದರೆ, ನನ್ನ ಮನಸ್ಸು ಎಂದೂ ಸಹ ಧರ್ಮದ ಹಾದಿಯನ್ನು ತಪ್ಪದು. ನನಗೆ ಇದು ಸರಿ ಎನ್ನಿಸಿರುವುದರಿಂದ ಇದನ್ನು ಧರ್ಮವೆಂದೇ ತಿಳಿಯುವೆ. ನಮ್ಮ ತಾಯಿ ಕುಂತಿಯು ಸಹ ಅಂತಹವಳೆ; ಎಂದೂ ಅವಳ ಬಾಯಿಂದ ಸಲ್ಲದ ಮಾತು ಬರದು. ಅವಳ ಆದೇಶವೂ ಇದೇ ತೆರನಾಗಿದೆ. ಆದ್ದರಿಂದ ನಾವು ಐವರು ಇವಳನ್ನು ವಿವಾಹವಾಗುವೆವು.''೨

ದ್ರುಪದನ ಮನಸ್ಸಿಗೆ ಈ ವಾದ ಹಿಡಿಯದಾಯಿತು. ತನ್ನ ಮಗ ಧೃಷ್ಟದ್ಯುಮ್ನನನ್ನು ಗುರುಹಿರಿಯರನ್ನು ಆ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸಲು ಕೇಳಿಕೊಂಡ. ಅವರೆಲ್ಲರೂ ಒಟ್ಟಾಗಿಯೇ ಹೇಳಿದರು; ''ಇದು ಸರ್ವಥಾ ಅಧರ್ಮ, ಆದ್ದರಿಂದ ಸಾಧ್ಯವಿಲ್ಲ.'' ಅವರು ಒಪ್ಪಲಾರರು, ಇವರು ಬಿಡಲಾರರು. ಗೊಂದಲ ಮುಂದುವರೆಯಿತು. ಪರಿಹಾರ ಹೇಗೆ?

## ಶ್ರೀವೇದವ್ಯಾಸರ ನಿರ್ಣಯ

ಆ ವೇಳೆಗೆ ಅಲ್ಲಿಗೆ ಸಾಕ್ಷಾತ್ ಶ್ರೀವೇದವ್ಯಾಸರು ಆಗಮಿಸಿದರು. ಅವರ ಆಗಮನವೆಂದರೆ ಸಾಕ್ಷಾತ್ ಭಗವಂತನ ಆಗಮನ. ಅವರ ಮಾತು ಎಂದರೆ ವೇದಗಳಿಗಿಂತ ಮಿಗಿಲಾದದ್ದು. ಎಲ್ಲರೂ ಕೂಡಲೇ ಎದ್ದು ನಮಸ್ಕರಿಸಿದರು. ಪಾಂಡವರಂತೂ ಅವರನ್ನು ಪರಿಪರಿಯಾಗಿ ಸ್ತುತಿಸಿದರು. ಸ್ವಯಂ ದ್ರುಪದರಾಜ ಅವರ ಪಾದಕ್ಕೆರಗಿದ. ಶ್ರೀವೇದವ್ಯಾಸರು ಅವರ ಸಮಸ್ಯೆಯನ್ನು ತಿಳಿಸಲು ಆದೇಶಿಸಿದರು. ಸ್ವತಃ ಎಲ್ಲವನ್ನು ಬಲ್ಲ ಅವರು ಸಮಸ್ಯೆಯ ಸ್ವರೂಪವನ್ನು ಅವರ ಬಾಯಿಂದಲೇ ಕೇಳಬಯಸಿದರು. ದ್ರುಪದರಾಜ ವಿಜ್ಞಾಪಿಸಿಕೊಂಡ ''ಒಬ್ಬಳೊಂದಿಗೆ ಐವರ ವಿವಾಹ; ಸಾಧ್ಯವಿಲ್ಲದ ಮಾತು'' ಎಂದು ಬಿನ್ನವಿಸಿಕೊಂಡ.

ಶ್ರೀವೇದವ್ಯಾಸರು ನುಡಿದರು ''ದ್ರುಪದರಾಜ! ಒಂದು ಹೆಣ್ಣಿಗೆ ಒಬ್ಬನೇ ಗಂಡ ಎಂಬುದು ಶಾಸ್ತ್ರದ ನಿಯಮ. ಆದ್ದರಿಂದ ನಿನ್ನ ವಾದ ಸರಿಯಾಗಿದೆ. ಪಾಂಡವರ ವಾದದಲ್ಲೂ ತಪ್ಪಿಲ್ಲ. ಕಾರಣ ಅವರು ಹೇಳಿದಂತೆ ನಡೆದುಕೊಂಡರೆ ನಡೆಯುವುದು ಸಹ ಒಂದು

---

೧ ಏಕಸ್ಯ ಬಹ್ವ್ಯೋ ವಿಹಿತಾ ಮಹಿಷ್ಯಃ ಕುರುನಂದನ।
ನೈಕಸ್ಯಾ ಬಹವಃ ಪುಂಸಃ ಶ್ರೂಯಂತೇ ಪತಯಃ ಕ್ವಚಿತ್ ॥
ಲೋಕವೇದವಿರುದ್ಧಂ ತ್ವಂ ನಾಧರ್ಮಂ ಧರ್ಮವಿಚ್ಛುಚಿಃ।
ಕರ್ತುಮರ್ಹಸಿ ಕೌಂತೇಯ ಕಸ್ಮಾತ್ ತೇ ಬುದ್ಧಿರೀದೃಶೀ ॥
– ಮಹಾಭಾರತ (ಆದಿಪರ್ವ ೧೯೪/೨೭,೨೮)

೨ ನ ಮೇ ವಾಗನೃತಂ ಪ್ರಾಹ ನಾಧರ್ಮೇ ಧೀಯತೇ ಮತಿಃ।
ಏವಂ ಚೈವ ವದತ್ಯಂಬಾ ಮಮ ಚೈತನ್ಮನೋಗತಮ್ ॥ – ಮಹಾಭಾರತ (ಆದಿಪರ್ವ ೧೯೪/೩೦)

ಹೆಣ್ಣಿಗೆ ಒಬ್ಬ ಗಂಡ ಎಂಬ ನಿಯಮಕ್ಕೆ ಅನುಗುಣವಾಗಿಯೇ ಹೊರತು ಬೇರೇನಲ್ಲ.'' ವಿಷಯ ನಿರ್ಣಯವಾದರೂ ಸ್ಪಷ್ಟೀಕರಣ ದೊರೆತಂತಾಗಲಿಲ್ಲ. ಶ್ರೀವೇದವ್ಯಾಸರು ಮುಂದುವರೆಸಿದರು. ''ನಿನ್ನ ಮಗಳು ದ್ರೌಪದೀ ಒಂದು ಹೆಣ್ಣಲ್ಲ. ಅವಳ ದೇಹದಲ್ಲಿ ಇತರ ದೇವತಾಸ್ತ್ರೀಯರು ಸಹ ಇರುವರು. ಮುಖ್ಯವಾಗಿ ಅವಳು ಭಾರತೀ; ಶಚಿ, ಶ್ಯಾಮಲಾ, ಉಷಾ ಇವರು ಆ ದೇಹದಲ್ಲಿರುವರು. ಭಾರತಿಯು ಭೀಮಪತ್ನಿ ಶಚಿ ಇಂದ್ರಾವತಾರನಾದ ಅರ್ಜುನನ ಪತ್ನಿ ಶ್ಯಾಮಲೆ ಯಮಾವತಾರನಾದ ಯುಧಿಷ್ಠಿರನ ಪತ್ನಿ ಉಷೆ ನಕುಲ–ಸಹದೇವರಾದ ಅಶ್ವಿನಿ ದೇವತೆಗಳ ಪತ್ನಿ. ಆದ್ದರಿಂದ ಇಲ್ಲಿ ನಡೆಯುವುದು ಒಂದು ವಿವಾಹವಲ್ಲ ಐದು ವಿವಾಹಗಳು[೧].'' ದ್ರುಪದರಾಜನ ಮನಸ್ಸಿಗೆ ನೆಮ್ಮದಿ ಎನ್ನಿಸಿತು. ಆದರೆ, ಪೂರ್ಣ ಪರಿಹಾರ ಸಿಕ್ಕಂತಾಗಲಿಲ್ಲ. ಅದನ್ನು ನಂಬುವುದು ಹೇಗೆ ಎಂಬ ಗೊಂದಲ ಉಳಿದುಕೊಂಡಿತು. ಅದನ್ನು ಸ್ಪಷ್ಟವಾಗಿ ಶ್ರೀವೇದವ್ಯಾಸರ ಮುಂದೆ ಅರಿಕೆ ಮಾಡಿಕೊಂಡ. ಶ್ರೀವೇದವ್ಯಾಸರು ಅಂತಹವರೇ. ತಮ್ಮ ಮಾತು ಎಂಬ ಕಾರಣದಿಂದ ಇತರರು ಒಪ್ಪಲೇಬೇಕು ಎಂಬುದು ಅವರ ಭಾವವಾಗಿರಲಿಲ್ಲ. ವಿಷಯವನ್ನು ಸಾಧಾರವಾಗಿಯೇ ತಿಳಿಸಿ ಒಪ್ಪಿಸುವುದು ಅವರ ಕ್ರಮ. ಸಕಲವಿವೇಕಿಗಳಿಗೂ ತತ್ತ್ವಚಿಂತನೆಯ ಕ್ರಮವನ್ನು ತೋರಿಸಿಕೊಟ್ಟ ಜಗದ್ಗುರು ಅವರು. ಅವರು ಮಂದಹಾಸದಿಂದಲೇ ನುಡಿದರು. ''ದ್ರುಪದ ! ನಿನ್ನ ಪ್ರಶ್ನೆ ಸರಿಯಾಗಿದೆ, ನಿನಗೆ ಇವರ, ನಿನ್ನ ಮಗಳ ಅವತಾರದ ಹಿನ್ನೆಲೆಯನ್ನು ತಿಳಿಸುವೆ'' ಎಂದು ಹೇಳಿ, ಇತರ ದೇವತೆಗಳಿಗೆ ಒದಗಿದ್ದ ಶಾಪ ಪ್ರಸಂಗ ಮೊದಲಾದವುಗಳನ್ನು ವಿವರಿಸಿದರು. ದ್ರುಪದನ ಮುಖದಲ್ಲಿ ಇನ್ನೂ ಚಿಂತೆ ಮಾಯವಾಗದ್ದನ್ನು ಕಂಡು ಹೇಳಿದರು. ''ದ್ರುಪದ! ಇಗೋ ನೋಡು. ನಿನಗೆ ದಿವ್ಯದೃಷ್ಟಿಯನ್ನು ನೀಡುವೆ[೨], ನಿನ್ನ ಮಗಳನ್ನು ಯಾರು

---

೧ ಮಹಾಭಾರತದಲ್ಲಿ ಶ್ರೀವೇದವ್ಯಾಸರ ನಿರ್ಣಯದ ವಿವರಗಳನ್ನು ದಾಖಲಿಸುವ ಈ ಭಾಗ ಪಂಚೇಂದ್ರೋಪಾಖ್ಯಾನ ಎಂಬುದಾಗಿ ಪ್ರಸಿದ್ಧವಾಗಿದೆ.

೨ ಏವಮೇತೇ ಪಾಂಡವಾಃ ಸಂಬಭೂವುರ್ಯೇ ತೇ ರಾಜನ್ ಪೂರ್ವಮಿಂದ್ರಾ ಬಭೂವುಃ।
ಲಕ್ಷ್ಮೀಶ್ಚೈಷಾಂ ಪೂರ್ವಮೇವೋಪದಿಷ್ಟಾ ಭಾರ್ಯಾ ಯೈಷಾ ದ್ರೌಪದೀ ದಿವ್ಯರೂಪಾ ॥....
ಇದಂ ಚಾನ್ಯತ್ ಪ್ರೀತಿಪೂರ್ವಂ ನರೇಂದ್ರ ದದಾನಿ ತೇ ವರಮತ್ಯದ್ಭುತಂ ಚ।
ದಿವ್ಯಂ ಚಕ್ಷುಃ ಪಶ್ಯ ಕುಂತೀಸುತಾಂಸ್ತ್ವಂ ಪುಣ್ಯೈರ್ದಿವ್ಯೈಃ ಪೂರ್ವದೇಹೈರುಪೇತಾನ್ ॥
ತತೋ ವ್ಯಾಸಃ ಪರಮೋದರಾಕರ್ಮಾ ಶುಚಿರ್ವಿಪ್ರಸ್ತಪಸಾ ತಸ್ಯ ರಾಜ್ಞಃ।
ಚಕ್ಷುರ್ದಿವ್ಯಂ ಪ್ರದದೌ ತಾಂಶ್ಚ ಸರ್ವಾನ್ ರಾಜಾಽಪಶ್ಯತ್ ಪೂರ್ವದೇಹೈರ್ಯಥಾವತ್ ॥
ತತೋ ದಿವ್ಯಾನ್ ಹೇಮಕಿರೀಟಮಾಲಿನಃ ಶಕ್ರಪ್ರಖ್ಯಾನ್ ಪಾವಕಾದಿತ್ಯವರ್ಣಾನ್ ।
ಬದ್ಧಾಪೀಡಾಂಶ್ಚಾರುರೂಪಾಂಶ್ಚ ಯೂನೋ ವ್ಯೂಢೋರಸ್ಕಾಂಸ್ತಾಲಮಾತ್ರಾನ್ ದದರ್ಶ ॥
ದಿವ್ಯೈರ್ವಸ್ತ್ರೈರರಜೋಭಿಃ ಸುಗಂಧೈರ್ಮಾಲ್ಯೈಶ್ಚಾಗ್ರ್ಯೈಃ ಶೋಭಮಾನಾನತೀವ।
ಸಾಕ್ಷಾತ್ ತ್ರ್ಯಕ್ಷಾನ್ ವಾ ವಸೂಂಶ್ಚಾಪಿ ರುದ್ರಾನಾದಿತ್ಯಾನ್ ವಾ ಸರ್ವಗುಣೋಪಪನ್ನಾನ್ ॥
ತಾನ್ ಪೂರ್ವೇಂದ್ರಾನಭಿವೀಕ್ಷ್ಯಾಭಿರೂಪಾನ್ ಶಕ್ರಾತ್ಮಜಂ ಚೇಂದ್ರರೂಪಂ ನಿಶಮ್ಯ।
ಪ್ರೀತೋ ರಾಜಾ ದ್ರುಪದೋ ವಿಸ್ಮಿತಶ್ಚ ದಿವ್ಯಾಂ ಮಾಯಾಂ ತಾಮವೇಕ್ಷ್ಯಾಪ್ರಮೇಯಾಮ್ ॥

ಎಂದು ಸರಿಯಾಗಿ ನೋಡು, ಆದರಂತೆ ಪಾಂಡವರನ್ನೂ ನೋಡು; ಅವರು ಮೂಲತಃ ಯಾರು ಎಂಬುದನ್ನು ತಿಳಿದುಕೋ'' ಎಂದು ತಿಳಿಸಿದರು. ದ್ರುಪದ ಆಗ ಕಂಡದ್ದು ಶ್ರೀವೇದವ್ಯಾಸರು ಹೇಳಿದ್ದನ್ನೇ. ತನ್ನ ಮಗಳಲ್ಲಿ ನೆಲೆಸಿದ್ದ ಶಚೀ, ಶ್ಯಾಮಲಾದಿ ದೇವತೆಗಳನ್ನು ಕಂಡ. ಭೀಮಾದಿಗಳು ವಾಯು ಮೊದಲಾದ ದೇವತೆಗಳೆಂಬುದನ್ನು ಸಹ ಕಂಡ. ಸಂಶಯ ಸಂಪೂರ್ಣವಾಗಿ ಪರಿಹಾರವಾಯಿತು. ಶ್ರೀವೇದವ್ಯಾಸರನ್ನು ಬಗೆಬಗೆಯಾಗಿ ಪ್ರಶ್ನಿಸಿದ ತನ್ನ ರೀತಿಗೆ ಸಂಕೋಚಪಟ್ಟ. ತನ್ನ ಆ ಅಪಚಾರವನ್ನು ಕ್ಷಮಿಸಬೇಕೆಂದು ಪರಿಪರಿಯಾಗಿ ಬೇಡಿಕೊಂಡ. ಶ್ರೀವೇದವ್ಯಾಸರು ಅವನನ್ನು ಪೂರ್ಣವಾಗಿ ಮನ್ನಿಸಿ ಅನುಗ್ರಹಿಸಿದರು. ಮುಂದೆ ಸಂಭ್ರಮದಿಂದ ವಿವಾಹ ಮಹೋತ್ಸವ ನೆರವೇರಿತು.

## ದ್ರೌಪದಿಯ ವಿವಾಹ

ದ್ರೌಪದಿಯ ವಿವಾಹ ಮುಂದಿನ ಘಟ್ಟ. ಜಗತ್ತಿಗೆ ಒಗಟು ಎನ್ನಿಸುವಂತಹ ಅದ್ಭುತ ವಿವಾಹವದು. ಶ್ರೀವೇದವ್ಯಾಸರು ತಿಳಿಸಿದ ದ್ರೌಪದಿಯ ದೇಹದ ರಹಸ್ಯವನ್ನು ಹಾಗೂ ಪಾಂಡವರ ಸ್ವರೂಪವನ್ನು ತಿಳಿದಿದ್ದ ದ್ರುಪದರಾಜ ಶ್ರೀವೇದವ್ಯಾಸರ ನೇತೃತ್ವದಲ್ಲಿಯೇ ವಿವಾಹವನ್ನು ಶಾಸ್ತ್ರೋಕ್ತಕ್ರಮದಲ್ಲಿ ನಡೆಸಿದ. ಮೊದಲಿಗೆ ದ್ರೌಪದಿಯ ದೇಹದಲ್ಲಿದ್ದ ಶ್ಯಾಮಲಾ ದೇವಿಗೂ ಯಮಾವತಾರನಾದ ಯುಧಿಷ್ಠಿರನಿಗೂ ವಿವಾಹ ನಡೆಯಿತು. ಆ ಬಳಿಕ ಕ್ರಮವಾಗಿ ಮುಖ್ಯವಾಗಿ ಭಾರತಿಯೇ ಆದ ದ್ರೌಪದಿಗೆ ಭೀಮಸೇನನೊಂದಿಗೆ ವಿವಾಹ ನಡೆಯಿತು[೧]. ಮುಂದೆ ದ್ರೌಪದೀ ದೇಹದೊಳಗಿನ ಶಚಿ ಹಾಗೂ ಇಂದ್ರಾವತಾರನಾದ ಅರ್ಜುನ ಹಾಗೂ ಆ ಬಳಿಕ ದ್ರೌಪದೀ ದೇಹದೊಳಗಿನ ಉಷಾ ಹಾಗೂ ನಕುಲ-ಸಹದೇವರೊಂದಿಗೆ ವಿವಾಹ ಪೂರೈಸಿತು[೨].

---

ತಾಂ ಚೈವಾಗ್ರ್ಯಾಂ ಸ್ತ್ರಿಯಮತಿರೂಪಯುಕ್ತಾಂ ದಿವ್ಯಾಂ ಸಾಕ್ಷಾತ್ ಸೋಮವಹ್ನಿಪ್ರಕಾಶಾಮ್ ।
ಯೋಗ್ಯಾಂ ತೇಷಾಂ ರೂಪತೇಜೋಯಶೋಭಿಃ ಪತ್ನೀಂ ಮತ್ವಾ ಹೃಷ್ಟವಾನ್ ಪಾರ್ಥಿವೇಂದ್ರಃ ॥
ಸ ತದ್ ದೃಷ್ಟ್ವಾ ಮಹದಾಶ್ಚರ್ಯರೂಪಂ ಜಗ್ರಾಹ ಪಾದೌ ಸತ್ಯವತ್ಯಾಃ ಸುತಸ್ಯ ।
ನೈತಚ್ಚಿತ್ರಂ ಪರಮರ್ಷೇ ತ್ವಯೀತಿ ಪ್ರಸನ್ನಚೇತಾಃ ಸ ಉವಾಚ ಚೈನಮ್ ॥
– ಮಹಾಭಾರತ (ಆದಿಪರ್ವ ೧೯೬/೩೫,೩೭-೪೩)

೧ ಕ್ರಮೇಣ ಚಾನೇನ ನರಾಧಿಪಾತ್ಮಜಾ ವರಸ್ತ್ರಿಯಸ್ತೇ ಜಗೃಹುಸ್ತದಾ ಕರಮ್ ।
ಅಹನ್ಯಹನ್ಯುತ್ತಮರೂಪಧಾರಿಣೋ ಮಹಾರಥಾಃ ಕೌರವವಂಶವರ್ಧನಾಃ ॥
– ಮಹಾಭಾರತ (ಆದಿಪರ್ವ ೧೯೭/೧೩)

೨ ಇಂತಹ ವಿವಾಹವನ್ನು ಇಂದು ಕೆಲವೆಡೆ ರೂಢಿಯಲ್ಲಿರುವ ಬಹುಪತಿತ್ವರೂಪ ವಿವಾಹವೆಂದು ಕರೆಯುವುದುಂಟು. ಅದು ಸರಿಯಲ್ಲ. ಬಹುಪತಿತ್ವ ರೂಪದ ವಿವಾಹದಲ್ಲಿ ಒಂದು ಮನೆಯ ಅಣ್ಣ-ತಮ್ಮಂದಿರೊಂದಿಗೆ ಒಬ್ಬ ಹೆಣ್ಣಿಗೆ ಮದುವೆಯಾಗುವುದುಂಟು. ಆದರೆ, ಆ ಪದ್ಧತಿಯಲ್ಲಿ ಹಿರಿಯನೊಂದಿಗೆ ಮಾತ್ರ ಮದುವೆ ಹೊರತು ಉಳಿದವರೊಂದಿಗಲ್ಲ. ಸಂಸಾರವನ್ನು ಮಾತ್ರ ಎಲ್ಲರೂ ಸೇರಿಯೇ ಮುಂದುವರೆಸಿದರೂ, ಮದುವೆ ನಡೆಯುವುದು ಒಬ್ಬನೊಂದಿಗೆ ಮಾತ್ರ. ದ್ರೌಪದಿಯ

ದ್ರೌಪದೀವಿವಾಹದ ಒಗಟನ್ನು ಜನ ಅರ್ಥಮಾಡಿಕೊಂಡಿದ್ದರು ಎನ್ನಲು ಅನೇಕ

ವಿವಾಹ ಹೀಗೆ ಶಾಸ್ತ್ರೋಕ್ತಕ್ರಮದಲ್ಲಿ ಪ್ರತಿಬಾರಿಯು ಅವರ ದೇಹದೊಳಗಿನ ಸ್ತ್ರೀಗೂ ಅವರ ನಿಯತಪತಿಯೊಂದಿಗೆ ನಡೆದಿದ್ದರಿಂದ ಅದು ಈ ಸಾಲಿಗೆ ಸೇರುವ ವಿವಾಹವೆನ್ನಿಸದು. ಅಲ್ಲದೆ, ಬಹುಪತಿತ್ವ ವಿವಾಹ ಕೇವಲ ಸಾಮಾಜಿಕ ಹಿನ್ನೆಲೆಯದು. ದ್ರೌಪದಿಯ ವಿವಾಹ ಆಧ್ಯಾತ್ಮಿಕ ಹಿನ್ನೆಲೆಯದು. ಅದು ಲೌಕಿಕವಾದರೆ ಇದು ಅಲೌಕಿಕ. ಆದ್ದರಿಂದ ಅಂತಹ ವಿವಾಹಕ್ಕೆ ಇದನ್ನು ಹೋಲಿಸುವುದು ಸರ್ವಥಾ ಸರಿಯಲ್ಲ.

ಟಿಬೆಟ್ ಮೊದಲಾದ ಪ್ರಾಂತಗಳಲ್ಲಿ ಬಹುಪತಿತ್ವರೂಪ ವಿವಾಹವು ಜಾರಿಯಲ್ಲಿದ್ದು ಅಲ್ಲಿಯ ಜನ ತಮ್ಮನ್ನು ದ್ರೌಪದಿಯ ವಂಶದವರು ಎಂದು ಕರೆದುಕೊಳ್ಳುವರು ಎಂದು ಕೆಲವರು ಹೇಳುವುದುಂಟು. ಅದು ಸಹ ಸರಿಯಲ್ಲ. ದ್ರೌಪದಿಯ ವಂಶವೆಂದರೆ ಪಾಂಡವರ ವಂಶವೇ ಸರಿ. ಪಾಂಡವರಿಂದ ದ್ರೌಪದಿಯಲ್ಲಿ ಜನಿಸಿದ ಒಬ್ಬ ಮಗನೂ ಸಹ ಉಳಿಯಲಿಲ್ಲ. ಅವರೆಲ್ಲ ಅಶ್ವತ್ಥಾಮರಿಂದ ಹತರಾಗಿ ವೀರಸ್ವರ್ಗವನ್ನು ಸೇರಿದರು. ಉಳಿದುಕೊಂಡ ಒಬ್ಬನು ಉತ್ತರಾಗರ್ಭಸಂಜಾತನಾದ ಪರೀಕ್ಷಿದ್ರಾಜ ಮಾತ್ರ. ಅವನಂತು ಕ್ಷತ್ರಿಯನೇ. ಅವನ ವಂಶವು ಸಹ ಮುಂದುವರೆದು ಕ್ಷೇಮಕ ಎಂಬುವವನೊಂದಿಗೆ ಮುಕ್ತಾಯಗೊಂಡಿತು. ಕ್ಷೇಮಕನೇ ಆ ವಂಶದ ಕೊನೆಯ ಕುಡಿ ಹಾಗೂ ರಾಜ. ಎಂದ ಮೇಲೆ ಪಾಂಡವರ ಸಂತತಿ ಆ ಬಳಿಕ ಮುಂದುವರೆಯಲೇ ಇಲ್ಲ. ಈ ಎಲ್ಲ ಕಾರಣದಿಂದ ಕೆಲವು ಜನ ಹಾಗೆ ತಮ್ಮನ್ನು ದ್ರೌಪದಿಯ ವಂಶದವರು ಎಂದು ಕರೆದುಕೊಂಡರೆ ಅದು ಕೇವಲ ಭ್ರಮೆ ಎನ್ನಿಸುವುದೇ ಹೊರತು ಸತ್ಯ ಸಂಗತಿ ಎನ್ನಿಸದು.

ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವಿದೆ. ಕೆಲವರು ಕುಂತಿಯು ತನ್ನ ಎಲ್ಲ ಮಕ್ಕಳಿಗೂ ದ್ರೌಪದೀ ಒಬ್ಬಳನ್ನೆ ಪತ್ನಿಯನ್ನಾಗಿಸಲು ಬೇರೊಂದು ಕಾರಣವಿದ್ದಿತು ಎಂದು ವಾದಿಸುವುದುಂಟು. ಅವರು ಹೇಳುವ ಕಾರಣವೆಂದರೆ ತನ್ನ ಐವರು ಮಕ್ಕಳಲ್ಲಿನ ಏಕತೆ ದ್ರೌಪದಿಯ ಕಾರಣದಿಂದಾಗಿ ಒಡೆಯಕೂಡದು ಎಂಬುದು. ಎಂದರೆ, ದ್ರೌಪದಿಯು ಐವರಲ್ಲಿ ಯಾರು ಒಬ್ಬರನ್ನು ಮದುವೆಯಾದರೂ ಉಳಿದ ನಾಲ್ವರಿಗೆ ಬೇಸರವಾಗಿ ಅವರಲ್ಲಿ ಅವರೆಗೆ ಇದ್ದ ಏಕತೆಗೆ ಧಕ್ಕೆ ಒದಗೀತು ಎಂಬುದು ಅವರ ವಾದದ ಭಾವ. ಅದು ಸಹ ಸರ್ವಥಾ ಉಚಿತವೆನ್ನಿಸದು. ಕೆಲ ಶತಮಾನದ ಹಿಂದಿನ ದಿನಗಳಲ್ಲಿ ಸಾಮಾನ್ಯವಾಗಿ ಒಂದು ಕುಟುಂಬದಲ್ಲಿ ಐದಾರು ಗಂಡುಮಕ್ಕಳಿರುವುದು ಅಪರೂಪದ ಸಂಗತಿಯೇನಾಗಿರಲಿಲ್ಲ. ಹಾಗಿದ್ದಲ್ಲಿ ಅವರೆಲ್ಲರೂ ಸಹ ಇದೇ ಕಾರಣವನ್ನು ಮುಂದಿಟ್ಟುಕೊಂಡು ತಮ್ಮ ಎಲ್ಲ ಮಕ್ಕಳಿಗೂ ಒಬ್ಬಳೇ ಕನ್ಯೆಯನ್ನು ತರುವ ಕಾರ್ಯವನ್ನು ಮಾಡಬಹುದಿತ್ತಲ್ಲ? ಎಂದು ಕೇಳಬಹುದಲ್ಲವೇ. ಹಾಗೆ ಮಾಡಿದ ಒಂದು ದಾಖಲೆಯು ಇಲ್ಲದಿರುವಾಗ ಇಂತಹ ಊಹೆಗೆ ಅವಕಾಶವಿಲ್ಲ ಎಂದಾಗುವುದು. ಈ ಕಾಲದಲ್ಲಿ ಇರಲಿ, ಆ ಕಾಲದಲ್ಲೂ ಸಹ ವಿಪುಲ ಸಂತತಿಯನ್ನು ಹೊಂದಿದ ಬೇರೆ ಯಾವ ರಾಜಮನೆತನದಲ್ಲೂ ಸಹ ಹೀಗೆ ಒಬ್ಬಳೇ ಹೆಣ್ಣನ್ನು ಸೊಸೆಯಾಗಿಸಿಕೊಂಡ ಪ್ರಸಂಗ ದಾಖಲಾಗಿಲ್ಲ ಎಂಬುದು ಸಹ ಗಮನಿಸಬೇಕಾದ ಸಂಗತಿ.

ಇನ್ನು ಪಾಂಚಾಲ ಪರಂಪರೆಯಲ್ಲಿ ಆ ರೀತಿ ಒಬ್ಬಳೇ ಹೆಣ್ಣನ್ನು ಅನೇಕ ವರರಿಗೆ ಧಾರೆಯೆರೆ- ಯುವ ಪದ್ಧತಿ ಇದ್ದಿತು ಎಂಬುದು ಇನ್ನೊಂದು ವಾದ. ಅದೂ ಸಹ ಸರಿಯಲ್ಲ. ಮಹಾಭಾರತ ಹಾಗೂ ಪುರಾಣಗಳು ದಾಖಲಿಸಿರುವಂತೆ ಪಾಂಚಾಲ ಪರಂಪರೆಯಲ್ಲಿರಲಿ, ಯಾವುದೇ ರಾಜಮನೆತನದಲ್ಲೂ ಸಹ ಅಂತಹ ಪದ್ಧತಿ ಕಂಡುಬರುವುದಿಲ್ಲ. ದ್ರೌಪದಿಯ ಪಂಚಪತಿತ್ವ ಆ ಕಾಲಕ್ಕೆ ಸಾಮಾಜಿಕ ಮನ್ನಣೆಯನ್ನು ಪಡೆದಿದ್ದರಿಂದ ಅದು ಅಧಾರ್ಮಿಕವೆನ್ನಿಸದು ಎಂಬುದು ಮತ್ತೆ ಕೆಲವರು ವಾದ. ಅದೂ ಸರಿಯಲ್ಲ. ಆ ಕಾಲದಲ್ಲಿ ಬೇರೆ ಯಾರೂ ಸಹ ಅದನ್ನು ಅನುಸರಿಸಿದ ದಾಖಲೆ ಕಂಡುಬರುವುದಿಲ್ಲ. ಕೇವಲ ಸಾಮಾಜಿಕ ಮನ್ನಣೆ ಅದರ ಧಾರ್ಮಿಕತೆಗೆ ಕಾರಣವಾಗಿದ್ದಲ್ಲಿ ಅಂತಹ ಎಷ್ಟೋ ವಿವಾಹಗಳು ಆ

ಕಾರಣಗಳಿವೆ. ಮುಖ್ಯವಾಗಿ ಶ್ರೀವೇದವ್ಯಾಸರ ಆದೇಶ. ಸ್ವತಃ ದ್ರೌಪದಿಯ ತಂದೆಯಾದ ದ್ರುಪದನ ಸಮ್ಮತಿ ಮೊದಲಾದವುಗಳ ಹಿನ್ನೆಲೆಯಲ್ಲಿ ಜನಗಳಿಗೆ ಆ ವಿವಾಹದ ಧಾರ್ಮಿಕತೆಯ ಬಗ್ಗೆ ಯಾವುದೇ ಸಂದೇಹಕ್ಕೂ ಎಡೆ ಇರಲಿಲ್ಲ. ಆದ್ದರಿಂದಲೇ ಆ ಬಗ್ಗೆ ಆ ಕಾಲದ ಯಾರಿಂದಲೂ ಯಾವುದೇ ಬಗೆಯಲ್ಲೂ ಸಹ ಯಾವ ಕಾಲಕ್ಕೂ ಆಕ್ಷೇಪದ ಲೇಶವೂ ಕಂಡುಬರುವುದಿಲ್ಲ. ಅದರಂತೆ ಅದನ್ನು ಅನುಕರಣೆ ಮಾಡಿದ ಒಂದು ನಿದರ್ಶನವೂ ಸಹ ಸಿಕ್ಕುವುದಿಲ್ಲ. ಇದರಿಂದ ಜನ ಅದನ್ನು ಧಾರ್ಮಿಕವೆಂದು ತಿಳಿದದ್ದು. ಆದ್ದರಿಂದಲೇ ಅದನ್ನು ಅತ್ಯಂತ ಗೌರವದಿಂದ ಕಂಡದ್ದು. ಅಂತಹ ಹಿನ್ನೆಲೆ ಇಲ್ಲ ಎಂಬ ಕಾರಣದಿಂದಲೇ ಬೇರೆ ಯಾರೂ ಅನುಸರಿಸದ್ದು ಗಮನಾರ್ಹವಾದ ಸಂಗತಿ ಎನ್ನಿಸುವುದು.

ದುರ್ಯೋಧನಾದಿಗಳಂತೂ ಇಂತಹ ಅವಕಾಶಕ್ಕಾಗಿಯೇ ಕಾದು ಕುಳಿತಿದ್ದ ದುರ್ವಿಚಾರದವರು. ಅವರೂ ಸಹ ಈ ಬಗ್ಗೆ ಆಗ ಚಕಾರವೆತ್ತಲಿಲ್ಲ ಎಂಬುದು ಅತ್ಯಂತ ಮುಖ್ಯವಾದ ಸಂಗತಿ. ದ್ಯೂತದ ಸಂದರ್ಭದಲ್ಲಿ ಅವರು ಈ ಬಗ್ಗೆ ಆಕ್ಷೇಪಿಸಿದರೂ, ಅದು ಕೇವಲ ದುರುದ್ದೇಶದಿಂದಲೇ ಹೊರತು ಸಕಾರಣ ಎಂಬುದರಿಂದಲ್ಲ.

ಇನ್ನು ಮತ್ತೊಂದು ರೀತಿಯಲ್ಲಿ ಯೋಚಿಸಿದಾಗಲೂ ಇದರ ಧಾರ್ಮಿಕತೆ ಸ್ಫುಟ-ಪಡುವುದು. ಆ ವಿವಾಹವು ಇಂದು ನಡೆಯುವ ರೀತಿಯಲ್ಲಿ ಗುಟ್ಟಾಗಿ ಎಲ್ಲೋ, ಯಾರದೋ ಸಮ್ಮುಖದಲ್ಲಿ ನಡೆದ ಧರ್ಮಬಾಹಿರ ವಿವಾಹವಲ್ಲ. ಮೊದಲೇ ಅದು ದ್ರುಪದನಂತಹ ಆ ಕಾಲದ ಒಬ್ಬ ಸುಪ್ರಸಿದ್ಧ ರಾಜನ ಮಗಳ ಮದುವೆ. ಅದರಲ್ಲಿ ಉಪಸ್ಥಿತರಿದ್ದವರಂತೂ ಸಕಲಧರ್ಮಶಾಸ್ತ್ರಗಳಲ್ಲಿ ಅಸಾಮಾನ್ಯಪಾಂಡಿತ್ಯ ಪಡೆದಿದ್ದ ಮಹಾಮಹಿಮರಾದ ಋಷಿಮುನಿಗಳು. ಮುಖ್ಯವಾಗಿ ಭಗವಂತನಾದ ಶ್ರೀಕೃಷ್ಣ ಸ್ವತಃ ಅಲ್ಲಿ ಉಪಸ್ಥಿತನಿದ್ದ. ಶ್ರೀವೇದವ್ಯಾಸರಂತೂ ಸ್ವತಃ ಅದನ್ನು ಸಮರ್ಥಿಸಿ ವಿವಾಹ ಮಾಡಿಸಿದವರು. ದುಷ್ಟ ಕ್ಷತ್ರಿಯರ ಪಾಲಿಗೆ ದುಃಸ್ವಪ್ನವೆನ್ನಿಸಿದ್ದ ಭಗವಂತನ ಮತ್ತೊಂದು

---

ಕಾಲದಲ್ಲಿಯೇ ಹಾಗೆ ನಡೆಯಲು ಸಾಧ್ಯವಿತ್ತು. ಅಲ್ಲವೆ?

ಒಬ್ಬ ಹೆಣ್ಣನ್ನು ಅನೇಕ ಸೋದರರಿಗೆ ಮದುವೆ ಮಾಡಿಕೊಡುವುದರಿಂದ ಅವರಲ್ಲಿ ಐಕಮತ್ಯ ಉಳಿಯುವುದು ಎಂಬ ವಾದವೂ ಸಹ ಶಾಸ್ತ್ರವಾಗಲಿ, ಲೋಕವಾಗಲಿ ಒಪ್ಪುವಂತಹುದಲ್ಲ. ಬದಲಾಗಿ ವಿರೋಧಿಸುವಂತಹುದೇ ಆಗಿದೆ. ಸಾಮಾನ್ಯವಾಗಿ ಅಣ್ಣತಮ್ಮಂದಿರಲ್ಲಿ ಒಂದೇ ಮನೆಯನ್ನು, ಒಂದೇ ವಸ್ತುವನ್ನು ಹಂಚಿಕೊಳ್ಳುವುದನ್ನು ಒಪ್ಪುವ ಮನೋಭಾವ ಇರುವುದಿಲ್ಲ. ಚಿಕ್ಕಮಕ್ಕಳಲ್ಲೂ ಸಹ ಆಟಿಕೆಗಳಲ್ಲೂ ಸಹ ತನ್ನದೊಬ್ಬನದೇ ಆಗಬೇಕು ಎಂಬ ಹಠವಿರುತ್ತದೆ. ಅಂತಹುದರಲ್ಲಿ ಒಬ್ಬಳೇ ಹೆಂಡತಿಯನ್ನು ಅನೇಕರು ಹಂಚಿಕೊಂಡು ಏಕತೆಯನ್ನು ಕಾಪಾಡಿಕೊಳ್ಳುವ ಕಲ್ಪನೆ ಹಾಸ್ಯಾಸ್ಪದವಾದದ್ದು. ಮುಂದೆ ಬರುವ ಸುಂದೋಪಸುಂದರ ಕಥೆ ಇದಕ್ಕೆ ಸಮರ್ಥವಾದ ಉತ್ತರವಾಗಿದೆ. ನಿಜಕ್ಕೂ ಸಹ ಸೋದರರಲ್ಲಿನ ಏಕತೆಗೆ ಧಕ್ಕೆ ಒದಗುವುದು ಅವರೆಲ್ಲರಿಗೂ ಒಬ್ಬಳೇ ಪತ್ನಿಯಿಂದಾದಾಗ ಮಾತ್ರ. ಅದರ ಬದಲಿಗೆ ಅದು ಏಕತೆಗೆ ಕಾರಣವಾಗುತ್ತದೆ ಎಂಬ ವಿಚಾರ ಅತ್ಯಂತ ಅಸ್ವರಸ ಎಂದಷ್ಟೇ ತಿಳಿಯಬೇಕು.

ರೂಪವಾದ ಪರಶುರಾಮರು ಅಲ್ಲಿಯೇ ಇದ್ದರು. ಎಂದರೆ, ಹೀಗೆ ಒಟ್ಟು ಮೂರು ರೂಪದ ಭಗವಂತನ ಉಪಸ್ಥಿತಿಯಲ್ಲಿ, ನೇತೃತ್ವದಲ್ಲಿ ನಡೆದ ವಿವಾಹದ ಧಾರ್ಮಿಕತೆ ಪ್ರಶ್ನಾತೀತವಾದದ್ದು. ಭಗವಂತನ ನಾಮಸ್ಮರಣೆಯೇ ಮಂಗಳಕರ, ವಿವಾಹ ಸಮಯದಲ್ಲಿ ಪಠಿಸುವ ಮಂಗಲಾಷ್ಟಕವೇ ಶುಭದಾಯಕ ಎಂದು ಶಾಸ್ತ್ರಗಳು ಸಾರಿರುವಾಗ, ಭಗವಂತ ಮೂರು ರೂಪಗಳಲ್ಲಿ ಸ್ವತಃ ತನ್ನ ನೇತೃತ್ವದಲ್ಲಿ ತಾನೇ ನಡೆಸಿಕೊಟ್ಟ ಅದರ ಹಿರಿಮೆ ಪರಮ ಮಾನ್ಯವೆನ್ನಿಸುವಲ್ಲಿ ಗೊಂದಲಕ್ಕೆ ಅವಕಾಶವೇ ಇಲ್ಲ.

## ಕುಂತಿಯ ಆಶೀರ್ವಚನ

ವಿವಾಹಿತಳಾದ ದ್ರೌಪದಿ ಅತ್ತೆಯಾದ ಕುಂತಿಗೆ ಅಭಿವಂದಿಸಿದಳು; ಕೈಜೋಡಿಸಿ ನಿಂತ ದ್ರೌಪದಿಗೆ ಕುಂತಿ ಆಶೀರ್ವಚನವನ್ನು ನುಡಿದಳು: 'ಶಚಿಯು ಇಂದ್ರನಿಗೆ, ದಮಯಂತಿ ನಳನಿಗೆ, ಭದ್ರೆಯು ಕುಬೇರನಿಗೆ, ಅರುಂಧತಿಯು ವಿಶಿಷ್ಠರಿಗೆ, ಮಹಾಲಕ್ಷ್ಮೀ ನಾರಾಯಣನಿಗೆ ಹೇಗೋ ಹಾಗೆ ಗಂಡಂದಿರೊಂದಿಗೆ ನಿಷ್ಠಳಾಗಿರು. ಚಿರಕಾಲ ಬಾಳುವ ಮಕ್ಕಳನ್ನು ಪಡೆ; ವೀರರಾದ ಪುತ್ರರನ್ನು ಪಡೆ; ಬಹುವಿಧವಾದ ಸುಖ ಸಂತೋಷವನ್ನು ಹೊಂದು; ಸೌಭಾಗ್ಯವತಿಯಾಗು; ಸಮೃದ್ಧ ಭೋಗವನ್ನು ಹೊಂದು, ಯಜ್ಞಪತ್ನಿಯಾಗು, ಪತಿವ್ರತೆಯಾಗು, ಅತಿಥಿ ಅಭ್ಯಾಗತರನ್ನು ಸಜ್ಜನರನ್ನು ವೃದ್ಧರನ್ನು ಬಾಲರನ್ನು ಹಾಗೆಯೇ ಗುರು-ಹಿರಿಯರನ್ನು ಯಥಾಯೋಗ್ಯವಾಗಿ ಸತ್ಕರಿಸುತ್ತಲೇ ನಿನ್ನ ಸಕಲ ಆಯುಷ್ಯವು ಕಳೆಯಲಿ. ಕುರುಜಾಂಗಲ ಮೊದಲಾದ ರಾಷ್ಟ್ರಗಳಲ್ಲಿ, ಅನೇಕ ನಗರಗಳಲ್ಲಿ ನಿನ್ನ ಪತಿಗಳು ಅಭಿಷಿಕ್ತರಾಗಲಿ. ಮಹಾಬಲಿಷ್ಠರಾದ ನಿನ್ನ ಗಂಡಂದಿರು ತಮ್ಮ ಪರಾಕ್ರಮದಿಂದ ಗಳಿಸುವ ಭೂಮಿಯನ್ನು ಅಶ್ವಮೇಧಮಹಾಯಜ್ಞದಲ್ಲಿ ಬ್ರಹ್ಮಜ್ಞಾನಿಗಳಿಗೆ ಸಮರ್ಪಿಸು. ಭೂಮಿಯಲ್ಲಿ ಉತ್ತಮ ಲಕ್ಷಣಗಳಿಂದ ಕೂಡಿದ ಎಷ್ಟು ರತ್ನಗಳಿವೆಯೋ ಅವೆಲ್ಲವೂ ಸಹ ಗುಣವತಿಯಾದ ನಿನಗೆ ಲಭಿಸುವಂತಾಗಲಿ. ನೂರ್ಕಾಲ ಸುಖಿಯಾಗಿ ಬಾಳು. ಪೀತಾಂಬರಧಾರಿಣಿಯಾದ ನಿನ್ನನ್ನು ಈಗ ಅಭಿನಂದಿಸುತ್ತಿರುವಂತೆಯೇ ಪುತ್ರವತಿಯಾದ ಮೇಲೆಯೂ ಸಹ ಪುನಃ ಅಭಿನಂದಿಸುವೆ.[೧]"

---

೧ ಕೃಷ್ಣಾ ಚ ಕ್ಷೌಮಸಂವೀತಾ ಕೃತಕೌತುಕಮಂಗಲಾ ।
ಕೃತಾಭಿವಾದನಾ ಶ್ವಶ್ರ್ವಾಸ್ತಸ್ಥೌ ಪ್ರಹ್ವಾ ಕೃತಾಂಜಲಿಃ ॥
ರೂಪಲಕ್ಷಣಸಂಪನ್ನಾಂ ಶೀಲಾಚಾರಸಮನ್ವಿತಾಮ್ ।
ದ್ರೌಪದೀಮವದತ್ ಪ್ರೇಮ್ಣಾ ಪೃಥಾಽಽಶೀರ್ವಚನಂ ಸ್ನುಷಾಮ್ ॥
ಯಥೇಂದ್ರಾಣೀ ಹರಿಹಯೇ ಸ್ವಾಹಾ ಚೈವ ವಿಭಾವಸೌ ।
ರೋಹಿಣೀ ಚ ಯಥಾ ಸೋಮೇ ದಮಯಂತೀ ಯಥಾ ನಲೇ ॥
ಯಥಾ ವೈಶ್ರವಣೇ ಭದ್ರಾ ವಸಿಷ್ಠೇ ಚಾಪ್ಯರುಂಧತೀ ।
ಯಥಾ ನಾರಾಯಣೇ ಲಕ್ಷ್ಮೀಸ್ತಥಾ ತ್ವಂ ಭವ ಭರ್ತೃಷು ॥

ಕುಂತಿಯ ಈ ಆಶೀರ್ವಚನ ಒಬ್ಬ ವಧುವಿಗೆ ಅವಳ ಅತ್ತೆ ನೀಡುವ ಆದರ್ಶ ಆಶೀರ್ವಚನವಾಗಿದೆ. ಪತಿಗೆ ನಿಷ್ಠಳಾಗಿರುವುದು, ಯೋಗ್ಯ ಸಂತತಿಯನ್ನು ಪಡೆಯುವುದು, ಯಜಮಾನಿಯಾಗುವುದು, ಅತಿಥಿ ಅಭ್ಯಾಗತರನ್ನು, ಗುರುಹಿರಿಯರನ್ನು, ಕಿರಿಯರನ್ನು ಯಥೋಚಿತವಾಗಿ ಸತ್ಕರಿಸುವುದು, ಯಜ್ಞದಲ್ಲಿ ಸಂಪತ್ತನ್ನು ಸದ್ವಿನಿಯೋಗ ಮಾಡುವುದು ಮೊದಲಾದವುಗಳೆಲ್ಲ ಉತ್ತಮ ಸ್ತ್ರೀಯ ಮುಖ್ಯ ಕರ್ತವ್ಯಗಳು ಎಂಬುದು ಈ ಆಶೀರ್ವಚನದ ಸಾರ. ಕೆಲವರ ಪಾಲಿಗೆ ಕೇವಲ ಆಶೀರ್ವಚನ ಮಾತ್ರವೇ ಆಗುವ ಇದು, ದ್ರೌಪದಿಯ ವಿಷಯದಲ್ಲಿ ಪೂರ್ಣ ಸತ್ಯವಾಯಿತು ಎಂಬುದು ವಿಶೇಷ. ದ್ರೌಪದಿಯಲ್ಲಿ ಅಂತಹ ಲಕ್ಷಣಗಳನ್ನು ಗುರುತಿಸಿಯೇ ಕುಂತಿಯು ಇಂತಹ ಅರ್ಥವತ್ತಾದ ಆಶೀರ್ವಚನವನ್ನು ಮಾಡುವಳು ಎಂಬುದು ಸಹ ಗಮನಿಸಬೇಕಾದ ಸಂಗತಿ. ಪ್ರತಿ ಹಂತದಲ್ಲೂ ದ್ರೌಪದಿಯ ಹಿರಿಮೆ ವ್ಯಕ್ತವಾಗುತ್ತಿದ್ದಿತು ಎಂಬುದು ಇಲ್ಲಿಯ ಒಟ್ಟು ಭಾವ.

## ದ್ರೌಪದಿಯ ದಾಂಪತ್ಯದ ಅಪೂರ್ವತೆ.

ದ್ರೌಪದಿಯ ವಿವಾಹವೇನೋ ಆಯಿತು. ಅದಕ್ಕೆ ಶ್ರೀವೇದವ್ಯಾಸರು ನೀಡಿದ ವಿವರಣೆ ಸ್ವತಃ ದ್ರುಪದನಿಗೂ ಒಪ್ಪಿಗೆ ಆಯಿತು. ಜನತೆ ಆ ಬಗ್ಗೆ ಸಂಶಯಕ್ಕೆ ಒಳಗಾಗಲಿಲ್ಲ. ಆದರೆ, ಒಬ್ಬ ಸ್ತ್ರೀ ಐವರು ಪತಿಯರೊಂದಿಗೆ ಹೇಗೆ ಸಂಸಾರ ಮಾಡಲು ಸಾಧ್ಯ? ಬಹುಪತಿತ್ವದ ದೃಷ್ಟಿಯಲ್ಲಿ ಇದು ವಿಚಾರಮಾಡುವಂತಹ ವಿಷಯವಲ್ಲ. ಬಹುಪತಿತ್ವ ಸಾಮಾಜಿಕವಾದ ವ್ಯವಸ್ಥೆ. ಆದ್ದರಿಂದ ಒಬ್ಬಳೇ ಹೆಣ್ಣು ಆ ರೀತಿ ಅನೇಕರಿಗೆ ಪತ್ನಿಯಾಗಿ ಸಂಸಾರ ಮಾಡಿದಾಗ ಸಮಾಜ ಅದನ್ನು ಒಪ್ಪಿದರೆ ಆಯಿತು. ಆದರೆ, ದ್ರೌಪದಿಯ ಪ್ರಸಂಗ ಕೇವಲ ಸಾಮಾಜಿಕವಾದುದಲ್ಲ. ಅದು ಭಾರತೀಯ ಸಂಸ್ಕೃತಿಯೇ ಆದರಿಸುವ ಅಪೂರ್ವ

---

ಜೀವಸೂರ್ವೀರಸೂರ್ಭದ್ರೇ ಬಹುಸೌಖ್ಯಸಮನ್ವಿತಾ ।
ಸುಭಗಾ ಭೋಗಸಂಪನ್ನಾ ಯಜ್ಞಪತ್ನೀ ಪತಿವ್ರತಾ ॥
ಅತಿಥೀನಾಗತಾನ್ ಸಾಧೂನ್ ವೃದ್ಧಾನ್ ಬಾಲಾಂಸ್ತಥಾ ಗುರೂನ್ ।
ಪೂಜಯಂತ್ಯಾ ಯಥಾನ್ಯಾಯಂ ಶಶ್ವದ್ ಗಚ್ಛಂತು ತೇ ಸಮಾಃ ॥
ಕುರುಜಾಂಗಲಮುಖ್ಯೇಷು ರಾಷ್ಟ್ರೇಷು ನಗರೇಷು ಚ ।
ಅನು ತ್ವಮಭಿಷಿಚ್ಯಸ್ವ ನೃಪತಿಂ ಧರ್ಮವತ್ಸಲಾ ॥
ಪತಿಭಿರ್ನಿರ್ಜಿತಾಮುರ್ವೀಂ ವಿಕ್ರಮೇಣ ಮಹಾಬಲೈಃ ।
ಕುರು ಬ್ರಾಹ್ಮಣಸಾತ್ ಸರ್ವಾಮಶ್ವಮೇಧೇ ಮಹಾಕ್ರತೌ ॥
ಪೃಥಿವ್ಯಾಂ ಯಾನಿ ರತ್ನಾನಿ ಗುಣವಂತಿ ಗುಣಾನ್ವಿತೇ ।
ತಾನ್ಯಾಪ್ನುಹಿ ತ್ವಂ ಕಲ್ಯಾಣಿ ಸುಖಿನೀ ಶರದಾಂ ಶತಮ್ ॥
ಯಥಾ ಚ ತ್ವಾಽಭಿನಂದಾಮಿ ವದ್ವದ್ಯ ಕ್ಷೌಮಸಂವೃತಾಮ್ ।
ತಥಾ ಭೂಯೋಽಭಿನಂದಿಷ್ಯೇ ಜಾತಪುತ್ರಾಂ ಗುಣಾನ್ವಿತಾಮ್ ॥

– ಮಹಾಭಾರತ (ಆದಿಪರ್ವ ೧೯೮/೩-೧೨)

ವಿವಾಹ. ಅದಕ್ಕಿಂತ ಮಿಗಿಲಾಗಿ ಧಾರ್ಮಿಕ ತಳಹದಿಯಲ್ಲಿ ಪರಮಮಾನ್ಯವೆನ್ನಿಸುವ ಅಪೂರ್ವ ಪಾತ್ರಗಳಲ್ಲಿ ಒಂದಾಗಿರುವ ದ್ರೌಪದಿಯು ಎಲ್ಲ ಕಾಲಕ್ಕೂ ಸಲ್ಲುವ ಅಪೂರ್ವ ಪೂಜ್ಯತೆಯ ಗಣಿ. ಅಂತಹ ವ್ಯಕ್ತಿಯ ದಾಂಪತ್ಯವನ್ನು ಒಂದು ಕಾಲಕ್ಕೆ, ಒಂದು ಜನಾಂಗಕ್ಕೆ ಮಾತ್ರ ಸೀಮಿತವಾಗುವ ಒಂದು ವ್ಯವಸ್ಥೆಯ ಹಿನ್ನೆಲೆಯಲ್ಲಿ ಮಾತ್ರ ನೋಡುವುದು ತರವಲ್ಲ. ಹಾಗಿದ್ದರೆ, ದ್ರೌಪದಿಯ ದಾಂಪತ್ಯ ನಡೆದದ್ದು ಹೇಗೆ? ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ತಾತ್ವಿಕವಾಗಿ ಅದರ ಪಾವಿತ್ರ್ಯದ ಸಮರ್ಥನೆ ಹೇಗೆ?

ಮಹಾಭಾರತ, ಭಾಗವತಗಳ ಅನೇಕ ಸಮಸ್ಯೆಗಳಲ್ಲಿ ದಾಂಪತ್ಯಕ್ಕೆ ಸಂಬಂಧಿಸಿದಂತೆ ಬರುವ ಎರಡು ಮುಖ್ಯಸಮಸ್ಯೆಗಳಲ್ಲಿ ಒಂದು ಬಹುಪತ್ನಿಯರೊಂದಿಗೆ ಕೃಷ್ಣನ ದಾಂಪತ್ಯ. ಮತ್ತೊಂದು ಬಹುಪತಿಯರೊಂದಿಗೆ ದ್ರೌಪದಿಯ ದಾಂಪತ್ಯ. ಇಬ್ಬರ ಹೆಸರಿನಲ್ಲೂ ಕೃಷ್ಣ ಎಂದಿದೆ. ಅವನು ಕೃಷ್ಣನಾದರೆ, ಇವಳು ಕೃಷ್ಣೆ. ಕೃಷ್ಣನ ಬಗ್ಗೆಯೂ ಜನಕ್ಕೆ ಗೋಪೀಜನಜಾರ ಎಂಬ ತಪ್ಪು ಕಲ್ಪನೆ ಇದೆ. ಅದಕ್ಕೆ ಭಾಗವತಾದಿ ಮೂಲಗ್ರಂಥಗಳೇ ಉತ್ತರಿಸಿವೆ. ಅವನು ಭಗವಂತ, ಅವನ ಅಂಗಸಂಗಕ್ಕಾಗಿ ಅಪ್ಸರೆಯರ ದಂಡೇ ತಪಸ್ಸು ಗೈದಿತ್ತು. ಅವರ ಬಯಕೆಯನ್ನು ಶ್ರೀಕೃಷ್ಣ ಹಾಗೆ ಪೂರೈಸಿದ. ಭಗವಂತನಾಗಿ ಅದು ಕೃಷ್ಣನಿಗೆ ದೋಷವೆನ್ನಿಸದು. ಅಪ್ಸರೆಯರಾಗಿ ಅವರಿಗೂ ದೋಷವೆನ್ನಿಸದು. ಮುಖ್ಯವಾಗಿ ಅವರಲ್ಲಿ ಆ ಕಾಲಕ್ಕೆ ರಮಾವೇಶವಿದ್ದದ್ದರಿಂದ ಶ್ರೀಕೃಷ್ಣನ ಏಕಪತ್ನಿವ್ರತಕ್ಕೂ ಅದು ಅಡ್ಡಿಯಾಗದು ಎಂಬುದು ಅಲ್ಲಿ ಬಂದಿರುವ ವಿವರಣೆ. ಆ ಸಮಯದಲ್ಲಿ ಶ್ರೀಕೃಷ್ಣನ ವಯಸ್ಸು ೮ರ ಆಸುಪಾಸಿನದು. ಎಂದರೆ, ಒಬ್ಬ ವ್ಯಕ್ತಿಯ ಜಾರತ್ವಕ್ಕೆ ಸರ್ವಥಾ ಸಮರ್ಥನೆ ಎನ್ನಿಸದ ವಯಸ್ಸು ಅದು. ಆದ್ದರಿಂದ ಅದು ಎಂದೂ ಸಹ ಜನರ ಮನಸ್ಸಿನಲ್ಲಿ ಸಂದೇಹಕ್ಕೆ ಕಾರಣವಾಗುವ ಸಂಗತಿ ಎನ್ನಿಸದು. ಶ್ರೀಮದ್ಭಾಗವತವನ್ನು ಶಾಸ್ತ್ರವೆಂದು ಒಪ್ಪುವ ಜನಕ್ಕೆ ಆ ಶಾಸ್ತ್ರವೇ ನೀಡಿದ ಉತ್ತರ ಆಸ್ತಿಕ ಜನತೆಗೆ ಸಾಕು ಎನ್ನಿಸುವುದು.

ಇನ್ನು ಹದಿನಾರುಸಾವಿರದ ನೂರೆಂಟು ಪತ್ನಿಯರೊಂದಿಗೆ ಶ್ರೀಕೃಷ್ಣನ ಸಂಸಾರ. ಅದಕ್ಕೂ ಶ್ರೀಮದ್ಭಾಗತವಾದಿ ಗ್ರಂಥಗಳೇ ಉತ್ತರ ನೀಡಿವೆ. ರಾಜಮಹಾರಾಜರು ಅನೇಕ ಪತ್ನಿಯರನ್ನು ಹೊಂದಿರುವುದು ಇತಿಹಾಸಪುರಾಣಗಳಲ್ಲಿ ತೀರಾ ಸಹಜವೆನ್ನಿಸುವ ವಿಚಾರವೇ ಆಗಿದೆ. ಹದಿನಾರುಸಾವಿರದ ನೂರೆಂಟು ಜನರಲ್ಲಿ ಎಂಟು ಜನರು ಮಾತ್ರವೇ ನಿಜಕ್ಕೂ ಸ್ತ್ರೀಯರು. ಅವರು ಶಾಸ್ತ್ರಗಳೇ ಸಾರಿರುವ ಶ್ರೀಕೃಷ್ಣನ ಅಷ್ಟಮಹಾಮಹಿಷಿಯರು. ಅವರಲ್ಲಿ ರುಗ್ಮಿಣೀ–ಸತ್ಯಭಾಮೆಯರು ಮಹಾಲಕ್ಷ್ಮಿಯ ಶ್ರೀರೂಪ ಹಾಗೂ ಭೂರೂಪಗಳ ಅವತಾರವಾಗಿದ್ದು ಮೂಲತಃ ಮಹಾಲಕ್ಷ್ಮಿಯೇ ಆಗಿರುವರು. ನಾರಾಯಣನಾದ ಶ್ರೀಕೃಷ್ಣನಿಗೆ ಮಹಾಲಕ್ಷ್ಮಿಯು ಹೀಗೆ ಪತ್ನಿ ಎಂಬುದರಲ್ಲಿ ಯಾವ ಗೊಂದಲವು ಇಲ್ಲ. ಇನ್ನು ಜಾಂಬವತೀ, ನೀಲಾ, ಭದ್ರಾ, ಮಿತ್ರವಿಂದಾ, ಲಕ್ಷಣಾ ಹಾಗೂ ಕಾಳಿಂದೀ ಎಂಬ ಆರು ಜನ

ಷಣ್ಮಹಿಷಿಯರು. ಅವರು ಸಹ ರಮಾವೇಶ ಉಳ್ಳವರಾದ್ದರಿಂದ ಶ್ರೀಕೃಷ್ಣನ ಪತ್ನಿಯರು ಎಂಬುದಕ್ಕೆ ವಿರೋಧವೇನಿಲ್ಲ. ಮುಖ್ಯವಾಗಿ ಶ್ರೀಕೃಷ್ಣ ರಮಾಪತಿ ಎಂಬುದು ಇಲ್ಲಿಯ ಒಟ್ಟು ತಾತ್ಪರ್ಯ.

ಇನ್ನು ಹದಿನಾರುಸಾವಿರದ ನೂರುಜನ ಇತರ ಪತ್ನಿಯರು. ಅವರು ಮೂಲತಃ ಸ್ತ್ರೀಯರೇ ಅಲ್ಲ. ಅವರೆಲ್ಲ ಅಗ್ನಿದೇವರ ಪುತ್ರರು. ಶ್ರೀಕೃಷ್ಣನ ಅಂಗಸಂಗದ ಬಯಕೆಯಿಂದಾಗಿ ವಾಯುದೇವರನ್ನು ಕುರಿತು ತಪಸ್ಸನ್ನು ಮಾಡಿ ಸ್ತ್ರೀಯರಾಗಿ ಜನಿಸಿ ಶ್ರೀಕೃಷ್ಣನ ಪತ್ನಿಯರೆನ್ನಿಸಿ ತಮ್ಮ ಬಯಕೆಯನ್ನು ಪೂರೈಸಿಕೊಂಡವರು. ಆದ್ದರಿಂದ ಅವರ ಬಗೆಗೂ ಸಹ ವಿಚಾರ ಅನಗತ್ಯ. ಹೀಗೆ ಶ್ರೀಕೃಷ್ಣನ ಬಹುಪತ್ನಿತ್ವ, ಗೋಪಿಕಾಸ್ತ್ರೀಯರೊಂದಿಗೆ ವಿಹಾರಗಳ ಸಮಸ್ಯೆಯನ್ನು ಮೂಲಗ್ರಂಥಗಳು ಹಾಗೂ ಶ್ರೀಮದ್ಭಾಗವತತಾತ್ಪರ್ಯನಿರ್ಣಯಾದಿ ಸರ್ವಮೂಲ ಗ್ರಂಥಗಳು ಸಹ ಸಮರ್ಪಕವಾಗಿ ಪರಿಹರಿಸಿವೆ.

ಹಾಗಿದ್ದರೆ, ದ್ರೌಪದಿಯ ದಾಂಪತ್ಯದ ವಿಚಾರದ ನಿರ್ಣಯ ಹೇಗೆ? ಅದಕ್ಕೆ ಆಕರ ಗ್ರಂಥವಾದ ಮಹಾಭಾರತವೇ ಉತ್ತರ ನೀಡಿದೆ[೧]. ವಿವಾಹವಾದ ಬಳಿಕ ದ್ರೌಪದಿಯು ಮೊದಲ ಹಂತದಲ್ಲಿ ಪ್ರತಿದಿವಸ ಒಬ್ಬರೊಂದಿಗೆ ಎಂಬಂತೆ ಕ್ರಮವಾಗಿ ಯುಧಿ-ಷ್ಠಿರ ಮೊದಲಾದವರೊಂದಿಗೆ ದಾಂಪತ್ಯವನ್ನು ನಡೆಸಿದ್ದರು. ಅಲ್ಲಿಯೂ ಪ್ರಶ್ನೆ ಹಾಗೆ ಉಳಿದುಕೊಳ್ಳುವುದು. ಅದಕ್ಕೂ ಮಹಾಭಾರತ ಉತ್ತರ ನೀಡಿದೆ. ದ್ರೌಪದಿಯು ಪ್ರತಿನಿತ್ಯವು ಸಹ ಪವಾಡವೆನ್ನಿಸುವ ರೀತಿಯಲ್ಲಿ ಅದ್ಭುತವೆನ್ನಿಸುವ ದೇಹವನ್ನು ತಳೆಯುತ್ತಿದ್ದಳು. ಅದು ಅತಿಮಾನುಷವೆನ್ನಿಸುವ ಶರೀರ. ಯುಧಿಷ್ಠಿರನೊಂದಿಗೆ ದಾಂಪತ್ಯ ನಡೆಸಿದಾಗ ದ್ರೌಪದಿಯ ದೇಹದಲ್ಲಿ ಅವನ ಪತ್ನಿಯಾದ ಶ್ಯಾಮಲೆಯು ಮಾತ್ರವೇ ಅಭಿವ್ಯಕ್ತಳಾಗುತ್ತಿದ್ದಳು. ಹೀಗಾಗಿ ಅಲ್ಲಿ ನಿಯತ ಪತಿ-ಪತ್ನಿಯರಾದ ಯಮ-ಶ್ಯಾಮಲೆಯರ ಸಮಾಗಮ ನಡೆಯುತ್ತಿತ್ತು. ಭೀಮನೊಂದಿಗೆ ದಾಂಪತ್ಯ ನಡೆಸಿದಾಗ ಆ ದೇಹದಲ್ಲಿ ಕೇವಲ ಭಾರತಿಯ ಅಭಿವ್ಯಕ್ತಿ ಮಾತ್ರ. ಭೀಮ ಭಾರತೀರಮಣನಾದ ವಾಯು. ಆದ್ದರಿಂದ ಅದು ವಾಯು-ಭಾರತಿಯರ ಸಮಾಗಮವಾಗುತ್ತಿತ್ತು. ಅರ್ಜುನನೊಂದಿಗೆ ಒಡಗೂಡಿದಾಗ ದ್ರೌಪದಿಯ ಶರೀರದಲ್ಲಿ ಕೇವಲ ಶಚಿ ಮಾತ್ರವೇ ನೆಲೆಸಿರುತ್ತಿದ್ದಳು. ಇಂದ್ರಪತ್ನಿಯಾದ ಅವಳೊಂದಿಗೆ ಅರ್ಜುನ ರೂಪದ ಇಂದ್ರ ಮಾತ್ರವೇ ವಿಹರಿಸುತ್ತಿದ್ದ. ನಕುಲ-ಸಹದೇವರೊಂದಿಗೆ ದ್ರೌಪದಿಯ ದಾಂಪತ್ಯ ನಡೆದಾಗ ಅವಳ ದೇಹದಲ್ಲಿ ಕೇವಲ ಉಷೆಯು ಮಾತ್ರ ವ್ಯಕ್ತವಾಗುತ್ತಿದ್ದಳು. ಅಶ್ವಿನೀದೇವತೆಗಳ ಪತ್ನಿಯಾದ ಉಷೆಯೊಂದಿಗೆ ಅಶ್ವಿನಿದೇವತೆಗಳ ಸಮಾಗಮವೇ

೧ ಇದಂ ಚ ತತ್ರಾದ್ಭುತಮುತ್ತಮಂ ತದಾ ದಧಾರ ಕೃಷ್ಣಾ ವಪುಷಾಽತಿಮಾನುಷಮ್ ।
ಮಹಾನುಭಾವಾ ಕಿಲ ಸಾಧುಮಧ್ಯಮಾ ಬಭೂವ ಕನ್ಯೈವ ಗತೇ ಗತೇಽಹನಿ ॥
- ಮಹಾಭಾರತ (ಆದಿಪರ್ವ/೧೯೭/೧೪))

ಆಗುತ್ತಿತ್ತು. ಹೀಗಾಗಿ ಯಾವುದೇ ವಿಧವಾದ ಸಾಂಕರ್ಯಕ್ಕೂ ಅಲ್ಲಿ ಅವಕಾಶವಿರಲಿಲ್ಲ. ಇದೆಲ್ಲವೂ ಸಹ ಅಷ್ಟು ಸುಲಭಸಾಧ್ಯವೇ? ಎಂಬುದು ಮುಂದಿನ ಪ್ರಶ್ನೆ. ಅದು ನಿಜ. ಆದರೆ, ಇಂತಹ ಪ್ರಸಂಗ ನಡೆದದ್ದು ಇತಿಹಾಸಪುರಾಣ ಪ್ರಪಂಚದ ದಾಖಲೆಗಳಲ್ಲಿ ಒಂದು ಬಾರಿ ಮಾತ್ರ. ಮಾನವ ಚಂದ್ರಲೋಕವನ್ನು ತಲುಪಿ ಬಂದದ್ದು ಈವರೆಗೆ ಎಷ್ಟು ಸಲ? ಕೇವಲ ಒಂದು ಸಲ ಮಾತ್ರ ಅಲ್ಲವೇ? ಅದರಂತೆಯೆ ಈ ಪ್ರಸಂಗ. ಚಂದ್ರಲೋಕದ ಯಾನಕ್ಕೆ ಕೋಟಿಕೋಟಿ ರೂಪಾಯಿಗಳ ವೆಚ್ಚ ನಡೆದದ್ದು ಇತಿಹಾಸವಾಗಿರುವಂತೆ ದ್ರೌಪದಿಯ ಈ ಪ್ರಸಂಗದ ಹಿನ್ನೆಲೆಯಲ್ಲಿ ಯುಗಯುಗಳಲ್ಲಿ ನಡೆದ ತಪಸ್ಸಿನ ಮಹಿಮೆ ಸೇರಿಕೊಂಡಿದೆ. ಭಾರತೀ, ಪಾರ್ವತಿಯರಂತಹ ದೇವತಾಸ್ತ್ರೀಯರು ಸುದೀರ್ಘಕಾಲ ಮಾಡಿದ ತಪಸ್ಸಿನ ಸಿದ್ಧಿ ಇದು. ಆದ್ದರಿಂದ ಇದನ್ನು ಸಾಮಾನ್ಯ ಜನತೆಯ ಲೆಕ್ಕದಲ್ಲಿ ನೋಡಲು ಸಾಧ್ಯವಿಲ್ಲ ಎಂಬುದನ್ನು ಮನಗಾಣಬೇಕು.

ವಿಜ್ಞಾನದ ಸಾಧನೆ ವೈಜ್ಞಾನಿಕ ಹಿನ್ನೆಲೆಯನ್ನು ಹೊಂದಿರುವಂತೆ ದೇವತೆಗಳ ಸಾಧನೆ ತಾತ್ವಿಕ ಹಿನ್ನೆಲೆಯನ್ನು ಹೊಂದಿರುತ್ತದೆ. ಆದ್ದರಿಂದ ಆ ಪ್ರಪಂಚದ ಪರಿಚಯ ಇಲ್ಲದವರು ಇದನ್ನು ಅರ್ಥಮಾಡಿಕೊಳ್ಳಲಾಗದಿದ್ದಲ್ಲಿ ಅವರ ತಪ್ಪೇನಿಲ್ಲ. ಇದು ಸುಲಭ ಸಾಧ್ಯವೆನ್ನಿಸುವ ಕಾರ್ಯವಲ್ಲ ಎಂಬ ಕಾರಣದಿಂದ, ಆಯಾ ದೇವತೆಗಳಿಗೆ ಆಯಾ ದೇವತೆಗಳ ನಿಯತ ಸ್ತ್ರೀಪುರುಷ ಸಂಬಂಧ ನಡೆಯಲು ದ್ರೌಪದಿಯ ದೇಹದಲ್ಲಿ ಸದಾ ಭಾರತಿಯ ಸನ್ನಿಧಾನ ಹಾಗೂ ಸಮಾಗಮ ಹೊಂದುತ್ತಿದ್ದ ಯುಧಿಷ್ಠಿರಾದಿಗಳಲ್ಲಿ ಭಾರತೀರಮಣನಾದ ವಾಯುವಿನ ಸನ್ನಿಧಾನ ಇದ್ದೇ ಇರುತ್ತಿತ್ತು. ಹೀಗಾಗಿ ಅಂತಹ ದಾಂಪತ್ಯದಲ್ಲಿ ಪಾವಿತ್ರ್ಯ ಉಳಿದುಕೊಳ್ಳಲು ಸಾಧ್ಯವಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಇತರ ದೇವತೆಗಳು ಅಲ್ಲಿ ಅಭಿವ್ಯಕ್ತರಾಗುತ್ತಲೇ ಇರಲಿಲ್ಲ. ಆದ್ದರಿಂದ ಸಾಂಕರ್ಯದ ಪ್ರಶ್ನೆ ಉದ್ಭವಿಸುವುದೇ ಇಲ್ಲ.

ಒಂದೇ ದೇಹದಲ್ಲಿ ನಿಯತ ಪತಿ-ಪತ್ನಿಯರಿಗೆ ಮಾತ್ರ ಸಂಪರ್ಕ ಹೇಗೆ ಸಾಧ್ಯ. ದೇಹ ಒಂದು, ಆದರೆ ಅದರಲ್ಲಿ ನೆಲೆಸಿರುವ ದೇವತೆಗಳು ಬೇರೆ ಬೇರೆಯವರು. ಸಮಾಗಮ ಹೊಂದುತ್ತಿದ್ದ ದೇವತೆಗಳು ಬೇರೆಯವರು, ಸಾಂಕರ್ಯ ಮಾತ್ರ ಉಂಟಾಗುತ್ತಿರಲಿಲ್ಲ; ಅದು ಹೇಗೆ? ಎಂಬ ಪ್ರಶ್ನೆಗೆ ಇಲ್ಲಿ ಅವಕಾಶವಿದೆ. ಅದಕ್ಕೂ ಉತ್ತರ ಸುಲಭ. ಶಿರಸ್ಸಿನಲ್ಲಿ ಕಣ್ಣು ಕಿವಿ, ಮೂಗು, ಬಾಯಿ ಹಾಗೂ ಚರ್ಮ ಎಂಬ ಐದು ಜ್ಞಾನೇಂದ್ರಿಯಗಳ ಕೇಂದ್ರವು ನೆಲೆಸಿದೆ. ಕಣ್ಣಿಗೆ ರೂಪಗ್ರಹಣ ಮಾತ್ರ ಸಾಧ್ಯ, ಅದರಂತೆ ಕಿವಿಗೆ ಶಬ್ದ, ಮೂಗಿಗೆ ವಾಸನೆ, ನಾಲಿಗೆಗೆ ರುಚಿ ಹಾಗೂ ಚರ್ಮಕ್ಕೆ ಸ್ಪರ್ಶ ಮಾತ್ರವೇ ಗ್ರಹಿಸಲು ಸಾಧ್ಯ. ಒಂದೇ ಶಿರಸ್ಸಿನಲ್ಲಿ ವಿಭಿನ್ನ ಜ್ಞಾನೇಂದ್ರಿಯಗಳು ನೆಲೆಸಿದ್ದರೂ ಅವುಗಳ ವಿಷಯ ಗ್ರಹಣ ಸಾಮರ್ಥ್ಯದಲ್ಲಿ ಮಾತ್ರ ಸಾಂಕರ್ಯಕ್ಕೆ ಸರ್ವಥಾ ಅವಕಾಶವಿಲ್ಲ. ಎಂದರೆ, ಕಣ್ಣಿಗೆ ತಪ್ಪಿಯೂ ಶಬ್ದಾದಿಗಳ ಗ್ರಹಣ ಸಾಧ್ಯವಿಲ್ಲ. ಅದರಂತೆ ಕಿವಿಗೆ ರೂಪಾದಿಗಳ ಗ್ರಹಣ, ಮೂಗಿಗೆ ಶಬ್ದಾದಿಗಳ ಗ್ರಹಣ,

ನಾಲಿಗೆಗೆ ರೂಪಾದಿಗಳ ಗ್ರಹಣ, ಚರ್ಮಕ್ಕೆ ಶಬ್ದಾದಿಗಳ ಗ್ರಹಣ ಸರ್ವಥಾ ಸಾಧ್ಯವಿಲ್ಲ. ಒಂದೇ ಕೇಂದ್ರದಲ್ಲಿ ನೆಲೆಸಿದ್ದರೂ ಸಹ ಅವುಗಳ ನಿಯತ ವಿಷಯಗಳೊಂದಿಗೆ ಮಾತ್ರವೇ ಜ್ಞಾನೇಂದ್ರಿಯಗಳ ಸಂಪರ್ಕ ಸಾಧ್ಯವಾಗಿರುವುದು ಪ್ರತಿಯೊಬ್ಬರ ದೇಹದೊಳಗೆ ನಡೆಯುವ ಚಮತ್ಕಾರ. ಇದು ಭಗವಂತನ ಅದ್ಭುತ ಸೃಷ್ಟಿವೈಚಿತ್ರ್ಯಕ್ಕೆ ನಿದರ್ಶನ. ಅದರಂತೆ ದ್ರೌಪದಿಯ ದೇಹದಲ್ಲಿ ವಿಭಿನ್ನ ದೇವತೆಗಳು ನೆಲೆಸಿದ್ದರೂ ಅವರಿಗೆ ಅವರ ನಿಯತ ಪತಿಗಳೊಂದಿಗೆ ಮಾತ್ರವೇ ಸಂಪರ್ಕ ಎಂಬಲ್ಲಿ ಅಸಾಧ್ಯವಾದದ್ದು, ನಂಬಲಾಗದ್ದು ಏನು ತಾನೆ ಇದೆ?

ಐತರೇಯೋಪನಿಷತ್ತಿನಲ್ಲಿ ಶ್ರೋತ್ರಾದಿ ಇಂದ್ರಿಯಗಳನ್ನು ಶ್ರೀ ಎಂಬುದಾಗಿ [೧]ಕರೆಯಲಾಗಿದೆ. ಶ್ರೀಶಬ್ದವಾಚ್ಯವಾದ ಶ್ರೋತ್ರಾದಿ ಇಂದ್ರಿಯಗಳಿಗೆ ಶಬ್ದಾದಿ ನಿಯತ ವಿಷಯಗಳೊಂದಿಗೆ ಮಾತ್ರವೇ ಸನ್ನಿಕರ್ಷ. ದ್ರೌಪದಿಯ ಮುಖ್ಯರೂಪವಾದ ಭಾರತಿಗೂ ಶ್ರೀ ಎಂದೇ ಹೆಸರು. ದ್ರೌಪದಿಯ ಪ್ರಾದುರ್ಭಾವ ಕಾಲದಲ್ಲಿ ಹಾಗೆ ಅವತರಿಸಿದ್ದು ಸಾಕ್ಷಾತ್ ಶ್ರೀ ಎಂಬ ಸ್ಪಷ್ಟ ಉಲ್ಲೇಖವೇ ಬಂದಿದೆ. ಆ ಉಲ್ಲೇಖದಲ್ಲಿ ಐತರೇಯೋಪನಿಷತ್ತಿನ ಹಿನ್ನೆಲೆಯಲ್ಲಿ ಶ್ರೀ ಶಬ್ದವಾಚ್ಯವಾದ ಜ್ಞಾನೇಂದ್ರಿಯಗಳು ತಮ್ಮ ನಿಯತ ವಿಷಯಗಳೊಂದಿಗೆ ಮಾತ್ರ ಸಂಪರ್ಕ ಹೊಂದುವ ನಿದರ್ಶನದ ಸೂಚನೆಯನ್ನು ಸಹ ಕಾಣಬಹುದು.

ಇಂದಿನ ದಿನಗಳಲ್ಲಿ ಮನೆಮನೆಯಲ್ಲೂ ಕಾಣಸಿಗುವ ದೂರದರ್ಶನ ವ್ಯವಸ್ಥೆಯ ಹಿನ್ನೆಲೆಯಲ್ಲೂ ದ್ರೌಪದಿಯ ಪಾವಿತ್ರ್ಯವನ್ನು ಸುಸಂಗತವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಿದೆ. ದಿನನಿತ್ಯವೂ ಪ್ರಸಾರಗೊಳ್ಳುತ್ತಿರುವ ನೂರಾರು ಚಾನೆಲ್‌ಗಳನ್ನು ಒಂದೇ ಟಿ.ವಿ. ಯಲ್ಲಿ ವೀಕ್ಷಿಸಲು ಸಾಧ್ಯ. ಆ ಒಂದು ಟಿ.ವಿ.ಯಲ್ಲಿಯೇ ಅಷ್ಟು ಚಾನೆಲ್‌ಗಳು ಪ್ರಸಾರವಾಗುತ್ತಿದ್ದರೂ ಒಂದು ಸಲಕ್ಕೆ ಒಂದು ಚಾನೆಲ್‌ನ್ನು ನೋಡಲು ಮಾತ್ರ ಸಾಧ್ಯ. ಆಗ ಇತರ ಚಾನೆಲ್‌ಗಳ ಸಾಂಕರ್ಯ ಅವುಗಳಲ್ಲಿ ಸರ್ವಥಾ ಸಾಧ್ಯವಿಲ್ಲ ಎಂಬುದು ಎಲ್ಲರೂ ಬಲ್ಲರು. ಒಂದೇ ಟಿ.ವಿ.ಯ ಪರದೆಯ ಮೇಲೆ ನೂರಾರು ಭಿನ್ನ ಚಾನೆಲ್‌ಗಳ ವೀಕ್ಷಣೆ ಯಾವುದೇ ಸಾಂಕರ್ಯವಿಲ್ಲದಂತೆ ಸಾಧ್ಯವಿರುವಾಗ ಒಂದೇ ದೇಹದಲ್ಲಿ ಐವರು ವಿಭಿನ್ನ ದೇವತಾಸ್ತ್ರೀಯರು ನೆಲೆಸಿದ್ದು ತಮ್ಮ ನಿಯತಪತಿಗಳೊಂದಿಗೆ ಮಾತ್ರ ಸಂಪರ್ಕಹೊಂದುತ್ತಿದ್ದರು ಎಂಬಲ್ಲಿ ಯಾವುದೇ ಅಸಂಭಾವ್ಯತೆಗೂ ಅವಕಾಶವಿಲ್ಲ.

ಮುಖ್ಯವಾಗಿ ಇದು ಸಾಮಾನ್ಯರ ಕಥೆಯಲ್ಲ. ಮಹಾಭಾರತ ದೇವತೆಗಳ ಕಥೆ. ದ್ರೌಪದಿಯಂತೂ ಸಾಕ್ಷಾತ್ ವಿದ್ಯೆಯ ಅಧಿದೇವತೆಯಾದ ಭಾರತೀದೇವೀ. ಅವರ

೧ ತತ್ ಶಿರೋಽಶ್ರಯತ ಯಚ್ಛಿರೋಽಶ್ರಯತ ತಚ್ಛಿರೋಽಭವತ್ ತಚ್ಛಿರಸಃ ಶಿರಸ್ತ್ವಂ ತಾ ಏತಾಃ ಶೀರ್ಷಂಚ್ಛ್ರಿಯಃ ಶ್ರಿತಾಶ್ಚಕ್ಷುಃ ಶ್ರೋತ್ರಂ ಮನೋ ವಾಕ್ಪ್ರಾಣಃ ಶ್ರಯಂತೇಽಸ್ಮಿಂಚ್ಛ್ರಿಯೋ ಯ ಏವಮೇತಚ್ಛಿರಸಃ ಶಿರಸ್ತ್ವಂ ವೇದ। – ಐತರೇಯೋಪನಿಷತ್

ದಾಂಪತ್ಯದ ಪಾವಿತ್ರ್ಯ ಅಬಾಧಿತವಾದದ್ದು[೧]. ದೇವತೆಗಳ ಭೋಗದ ರೀತಿಯೇ ಬೇರೆ, ಮನುಷ್ಯರ ಭೋಗದ ರೀತಿಯೇ ಬೇರೆ. ಲೋಕದಲ್ಲೂ ಪ್ರಾಣಿಗಳಲ್ಲಿ, ಸಸ್ಯಗಳಲ್ಲಿ ಸಂತಾನೋತ್ಪಾದನೆಯ ಕ್ರಮ ವಿಭಿನ್ನವಾಗಿಯೇ ಇದೆ. ಎಂದ ಮೇಲೆ, ದೇವತೆಗಳ ವಿಚಾರದಲ್ಲಿ ಸಂಶಯ ಪಡುವುದು ವಿವೇಕವೆನ್ನಿಸದು. ಮನುಷ್ಯನು ಗಾಳಿಯಲ್ಲಿನ ಆಮ್ಲಜನಕದಿಂದ ಉಸಿರಾಡಬಲ್ಲ ಸಾಮರ್ಥ್ಯಹೊಂದಿದ್ದರೆ, ಜಲಚರಗಳು ನೀರಿನಲ್ಲಿನ ಆಮ್ಲಜನಕದಿಂದ ಉಸಿರಾಡಬಲ್ಲವು. ಮನುಷ್ಯನಿಗೆ ಆಗದ್ದನ್ನು ಜಲಚರಗಳು ಮಾಡಿದರೆ, ಜಲಚರಗಳಿಗೆ ಆಗದ್ದನ್ನು ಮನುಷ್ಯ ಮಾಡುವನು. ಇಂತಹ ವ್ಯತ್ಯಾಸಗಳಿಗೆ, ವೈಚಿತ್ರಗಳಿಗೆ ಸೃಷ್ಟಿಯಲ್ಲಿ ಲೆಕ್ಕವೇ ಇಲ್ಲ. ದೇವತೆಗಳ ಭೋಗದ ರೀತಿ ಇವರೆಲ್ಲರಿಗಿಂತಲೂ ಭಿನ್ನವಾದದ್ದು ಎಂಬುದು ಮೇಲ್ನೋಟಕ್ಕೆ ತಿಳಿಯುವ ಸಂಗತಿ. ಆದ್ದರಿಂದ ಈ ಬಗ್ಗೆ ಯಾವುದೇ ರೀತಿಯ ಸಂಶಯ ತಳೆಯುವುದು ಸಹ ಉಚಿತವೆನ್ನಿಸದು.

ದ್ರೌಪದಿಯು ಅಗ್ನಿಕನ್ಯೆ. ಅದರಲ್ಲೂ ಪವಿತ್ರವಾದ ಯಜ್ಞಾಗ್ನಿಯ ಮಧ್ಯದಿಂದ ಅವತರಿಸಿದವರು ಎಂಬ ಮಹಾಭಾರತದ ಮಾಹಿತಿ ಅವರ ಪವಿತ್ರದಾಂಪತ್ಯಕ್ಕೂ ಸಹ ವಿವರಣೆಯಂತಿದೆ ಎಂಬುದನ್ನು ಗಮನಿಸಬೇಕು. ಒಂದು ರೀತಿಯಲ್ಲಿ ಇದು ಹಿಂದೆ ತಿಳಿಸಿರುವಂತೆ ದ್ರೌಪದಿಯ ಪಾವಿತ್ರ್ಯಕ್ಕೆ ಸಾಕ್ಷಿಯಾಗುವ ಅಗ್ನಿದಿವ್ಯ ಎಂದೂ ತಿಳಿಯಬಹುದು.

## ಹಸ್ತಿನಾವತಿಯಲ್ಲಿ ದ್ರೌಪದಿ

ದ್ರೌಪದಿಯ ವಿವಾಹ ಪೂರೈಸಿ ವರ್ಷ ಕಳೆಯಿತು. ಪಾಂಡವರು ಅರಗಿನ ಮನೆಯಲ್ಲಿ ಭಸ್ಮವಾದರೆಂದು ಭಾವಿಸಿದ್ದ ಕೌರವರಿಗೆ ದ್ರೌಪದಿಯ ಸ್ವಯಂವರದಲ್ಲಿ ಅವರಿನ್ನೂ ಜೀವಂತವಿರುವ ವಿಷಯ ತಿಳಿದು ಉಂಟಾದ ದುಃಖ ಅಷ್ಟಿಷ್ಟಲ್ಲ. ಆ ನೋವನ್ನು

---

೧ ಊಷುಸ್ತಥೈವ ಪರಿವತ್ಸರಪಂಚಕಂ ತೇ ಪಾಂಡೋರ್ಗೃಹೇ ಸುಸುಖಿನೋಽಖಿಲಭೋಗಯುಕ್ತಾಃ
ಕೃಷ್ಣಾ ಚ ತೇಷು ಪೃಥಗೇವ ಚತುಷ್ಟರೂಪಾ ರೇಮೇ ತಥೈಕತನುರಪ್ಯಭಿಮಾನಿಭೇದಾತ್ ॥
ಕನ್ಯೈವ ಸಾಽಭವದತಃ ಪ್ರತಿವಾಸರಂ ಚ ಜನ್ಮಾಭವದ್ಧ್ಯಭಿಮತೇಃ ಪೃಥಗೇವ ನಾಶಾತ್ ।
ಪ್ರಾಯೋ ಹಿ ನಾಭಿಮತಿನಾಶಮವಾಪ ವಾಣೀ ತಸ್ಮಾನ್ಮರುಚ್ಚ ಸಕಲೇಷ್ವಭಿವಿಷ್ಟ ಆಸೀತ್ ॥
ಧರ್ಮಾತ್ಮಜಾದಿಷು ಮರುತ್ ಪ್ರತಿವಿಷ್ಟ ಏಷಾಂ ಬುದ್ಧಿಂ ವಿಮೋಹ್ಯ ರಮತೇ ಸತತಂ ತಯಾ ಯತ್ ।
ಶುದ್ಧೈವ ಸಾ ಹಿ ತತ ಏವ ದಿನೇ ದಿನೇ ಚ ಸಂಮೋಹತೋ ಮರಣವದ್ಭವತೀಹ ಕನ್ಯಾ ॥
ನೋ ಸುಪ್ತಿವತ್ ತ್ರಿದಮತೋಽಸ್ಯವಶತ್ವತೋ ಹಿ ದೇಹಸ್ಯ ಸಂಸ್ಕೃತಿತ ಏವ ಹರೇರ್ನ ಮೋಹಃ ।
ನಾವೇಶವಚ್ಚ ತತ ಏವ ಮೃತೇಃ ಸ್ವರೂಪಮೇತತ್ ತ್ವತಃ ಪ್ರತಿದಿನಂ ಜನನಾದ್ಧಿ ಕನ್ಯಾ ॥
ಏವಂ ಸ ವಾಯುರನುವಿಷ್ಟಯುಧಿಷ್ಠಿರಾದಿಭೀಮಾತ್ಮನೈವ ರಮತೇ ಸತತಂ ತಯೈಕಃ ।
ಅನ್ಯಾದೃಶಾ ಹಿ ಸುರಭುಕ್ತಿರತೋಽನ್ಯರೂಪಾ ಮಾನುಷ್ಯಭುಕ್ತಿರಿತಿ ನಾತ್ರ ವಿಚಾರ್ಯಮಸ್ತಿ ॥
-ಮ.ಭಾ.ತಾ.ನಿ.(೧೯/೧೮೩-೧೮೭)

ಸಹಿಸಲಾರದೇ ಮತ್ತೊಮ್ಮೆ ದ್ರುಪದನ ಮೇಲೆ ಯುದ್ಧಕ್ಕೆ ಬಂದು ಪರಾಭವಗೊಂಡು ಮರಳಿದರು. ವಿದುರನಿಂದ ಮೂಲ ವಿಷಯ ತಿಳಿದ ಧೃತರಾಷ್ಟ್ರನು ಸಹ ಮೇಲ್ನೋಟಕ್ಕೆ ಹರ್ಷಿಸಿದಂತೆ ವರ್ತಿಸಿ ಒಳಗೊಳಗೆ ದುಃಖಿಸಿದ. ತನ್ನ ಮಕ್ಕಳಿಗೆ ರಾಜ್ಯ ಲಭಿಸುವುದು ಕನಸು ಎಂದು ತಿಳಿದು ಹಳಹಳಿಸಿದ. ವಿಷಯ ತಿಳಿದು ಒಂದು ವರ್ಷವಾದರೂ ಮೇಲ್ನೋಟಕ್ಕೆ ಹರ್ಷಿಸಿದಂತೆ ನಟಿಸುತ್ತಲೇ ಇದ್ದ; ಪಾಂಡವರನ್ನು ಮರಳಿ ಹಸ್ತಿನಾಪುರಕ್ಕೆ ಕರೆಸುವ ಕಾರ್ಯದಲ್ಲಿ ಮಾತ್ರ ಪ್ರವೃತ್ತನಾಗಲಿಲ್ಲ. ಅದನ್ನು ಗಮನಿಸಿದ ವಿದುರ ಅವನಿಗೆ ತಿಳಿ ಹೇಳಿದ "ಕೂಡಲೇ ಪಾಂಡವರವನ್ನು ದ್ರೌಪದಿಯ ಸಮೇತವಾಗಿ ಹಸ್ತಿನಾವತಿಗೆ ಆಹ್ವಾನಿಸದಿದ್ದಲ್ಲಿ ನಡೆಯುವುದೇ ಬೇರೆ." ದುರ್ಯೋಧನಾದಿಗಳು ಮತ್ತೊಮ್ಮೆ ದ್ರುಪದನ ಮೇಲೆ ಆಕ್ರಮಣ ನಡೆಸುವ ಹಂಚಿಕೆ ತಿಳಿದಿದ್ದ ವಿದುರ ಧೃತರಾಷ್ಟ್ರನಿಗೆ ವಿಷಯ ತಿಳಿಸಿ, ಈ ಬಾರಿ ಅವರು ಸುರಕ್ಷಿತ ಮರಳುವುದು ಅಸಾಧ್ಯ ಎಂದು ಎಚ್ಚರಿಸಿದ. ಭೀಷ್ಮ-ದ್ರೋಣರು ವಿದುರನ ಮಾತನ್ನು ಬೆಂಬಲಿಸಿದರು. ನಿರ್ವಾಹವಿಲ್ಲದೇ ಧೃತರಾಷ್ಟ್ರ ಪಾಂಡವರನ್ನು ಕರೆತರಲು ನಿಶ್ಚಯಿಸಿದ. ಆ ಕಾರ್ಯಕ್ಕೆ ವಿದುರನನ್ನೇ ನೇಮಿಸಿದ. ಕೃಷ್ಣನನ್ನು ಕರೆತರುವ ಕಾರ್ಯಕ್ಕೆ ನಿಯುಕ್ತನಾದ ಅಕ್ರೂರನ ಸಂಭ್ರಮದಂತೆ ವಿದುರನ ಸಂಭ್ರಮವೂ ಆಯಿತು. ವೃಂದಾವನದಿಂದ ಕೃಷ್ಣನನ್ನು ಮಥುರೆಗೆ ಕರೆತರುವ ಯೋಗ ಅಕ್ರೂರನಿಗೆ ಲಭಿಸಿದರೆ, ಪಾಂಚಾಲನಗರದಿಂದ ಹಸ್ತಿನಾಪುರಕ್ಕೆ ಪಾಂಡವರನ್ನು ಕರೆತರುವ ಯೋಗ ವಿದುರನದಾಯಿತು.

ವಿದುರನ ಮೂಲಕ ಆಹ್ವಾನಿಸಲ್ಪಟ್ಟ ಪಾಂಡವರು ಕೃಷ್ಣನ ಅನುಮತಿಯನ್ನು ಪಡೆದುಕೊಂಡು ದ್ರೌಪದೀಸಮೇತರಾಗಿ ಹಸ್ತಿನಾಪುರವನ್ನು ಪ್ರವೇಶಿಸಿದರು. ಹಸ್ತಿನಾಪುರದ ಜನತೆಗಂತೂ ಸಂಭ್ರಮವೋ ಸಂಭ್ರಮ. ಮೃತರಾದರೆಂದು ತಾವು ಭಾವಿಸಿದ್ದ ಪಾಂಡವರು ಜೀವಂತ ಇರುವುದು ಒಂದು ಸಂಭ್ರಮವಾದರೆ, ಅವರು ದ್ರೌಪದೀ ಸ್ವಯಂವರದಲ್ಲಿ ವಿಜೇತರಾಗಿ ಸಪತ್ನೀಕರಾಗಿ ಆಗಮಿಸುತ್ತಿದ್ದುದ್ದು ಇನ್ನೊಂದು ಸಂಭ್ರಮವಾಯಿತು. ಜನರಿಂದ ಪಾಂಡವರಿಗೆ ಲಭಿಸಿದ ಸ್ವಾಗತ ಅನನ್ಯವೆನ್ನಿಸಿತು. ದುರ್ಯೋಧನನ ಪತ್ನಿಯರು ಸಹ ದ್ರೌಪದಿಯನ್ನು ಅನಿವಾರ್ಯವೆಂಬಂತೆ ಸ್ವಾಗತಿಸಿದರು. ಗಾಂಧಾರಿಯ ದರ್ಶನಕ್ಕೆಂದು ಪಾಂಡವರು ಸಕುಟುಂಬರಾಗಿ ತೆರಳಿದರು. ತನ್ನ ಬಳಿಗೆ ಬಂದ ದ್ರೌಪದಿಯನ್ನು ಗಮನಿಸಿ 'ತ್ರಿಲೋಕಸುಂದರಿಯಾದ ಇವಳು; ತನ್ನ ಮಕ್ಕಳ ಪಾಲಿನ ಮೃತ್ಯುದೇವತೆ' ಎಂದು ಗಾಂಧಾರಿ ಆಗಲೇ ಊಹಿಸಿದಳು[೧].

ಗಾಂಧಾರಿ ಕುಂತಿಗೆ ಹೇಳಿಯೇ ಬಿಟ್ಟಳು. "ಅಮ್ಮ ಕುಂತಿ! ನಾವೆಲ್ಲ ಇನ್ನು ಒಂದೆಡೆ ಜೊತೆಯಾಗಿರುವುದು ಬೇಡ. ನಿನ್ನ ಗಂಡ ಪಾಂಡುವಿನ ಮನೆ ತೆರವಾಗಿಯೇ ಇದೆ; ಅಲ್ಲಿ

---

೧ ಪರಿಷ್ವಜ್ಯ ಚ ಗಾಂಧಾರೀ ಕೃಷ್ಣಾಂ ಕಮಲಲೋಚನಾಮ್ ।
ಪುತ್ರಾಣಾಂ ಮಮ ಪಾಂಚಾಲೀ ಮೃತ್ಯುರೇವೇತ್ಯಮನ್ಯತ ॥ -ಮ.ಭಾ.(ಆದಿ/೨೦೬/೨೨)

ನೀವು ಪ್ರತ್ಯೇಕವಾಗಿ ವಾಸಿಸುವುದು ಉಚಿತ. ನನಗಂತೂ ಭೀಮನದೇ ಭಯ. ನನ್ನ ಮಕ್ಕಳು ಇನ್ನಷ್ಟು ದಿನ ಉಳಿಯಬೇಕೆಂದಲ್ಲಿ ನೀವು ದೂರ ಹೋಗುವುದೇ ಲೇಸು.'' ಕುಂತಿಗೂ ವಿಷಯ ಅರ್ಥವಾಗಿತ್ತು. ಮರುನುಡಿಯದೇ ಪಾಂಡುರಾಜನು ವಾಸಿಸುತ್ತಿದ್ದ ಅರಮನೆಗೆ ಅವರೆಲ್ಲ ತೆರಳಿದರು.

ಪಾಂಡವರು ಹಿಡಿಂಬವನ, ಏಕಚಕ್ರಾನಗರದಲ್ಲಿ ನೆಲೆಸಿದ್ದಾಗಲೇ ದುರ್ಯೋಧನ ಕಾಶಿರಾಜನ ಮಗಳ ಸ್ವಯಂವರಕ್ಕೆಂದು ಹೋಗಿ ಅಲ್ಲಿಯ ರಾಜಕುಮಾರಿಯನ್ನು ಬಲಾತ್ಕಾರದಿಂದ ಅಪಹರಿಸಿದ. ಕರ್ಣನ ಸಹಕಾರದಿಂದಾಗಿ ಅವಳನ್ನು ಪಡೆಯುವಲ್ಲಿ ಯಶಸ್ಸನ್ನು ಗಳಿಸಿದ. ಅವಳೊಂದಿಗೆ ಮಾತ್ರವಲ್ಲದೆ ಇನ್ನೂ ಕೆಲವರೊಂದಿಗೆ ಅವನ ವಿವಾಹ ನಡೆಯಿತು. ದುಃಶಾಸನಾದಿಗಳು ಸಹ ತಮಗೆ ಯೋಗ್ಯರೆನ್ನಿಸಿದ ಕನ್ಯೆಯರೊಂದಿಗೆ ವಿವಾಹಿತರಾದರು.

ಪಾಂಡವರು ಹಸ್ತಿನಾಪುರಕ್ಕೆ ಆಗಮಿಸಿದ ಮೇಲೆ ನಡೆದ ಮುಖ್ಯ ಪ್ರಸಂಗಗಳಲ್ಲಿ ಕಳಿಂಗ ದೇಶದ ರಾಜನಾದ ಸುವಜ್ರ ಎಂಬವನ ಮಗಳ ಸ್ವಯಂವರ ಮುಖ್ಯವಾದುದು. ಶಿವನ ವರಬಲದಿಂದ ಕೊಬ್ಬಿದ್ದ ಅವನ ಮಗಳ ಸ್ವಯಂವರಕ್ಕೆಂದು ಜರಾಸಂಧಾದಿ ದುಷ್ಟರ ಕೂಟವೇ ನೆರೆದಿತ್ತು. ಪಾಂಡವರು ಮಾತ್ರ ಆ ದುಷ್ಟಕೂಟದ ಸ್ವಯಂವರದಲ್ಲಿ ಭಾಗವಹಿಸಿರಲಿಲ್ಲ. ದುರ್ಯೋಧನ ತನ್ನ ಎಂದಿನ ದುರ್ಬುದ್ಧಿಯಂತೆ ಅಲ್ಲಿಯೂ ರಾಜಕುಮಾರಿಯನ್ನು ಬಲಾತ್ಕಾರದಿಂದ ಅಪಹರಿಸಲು ಪ್ರಯತ್ನಿಸಿದ. ಆದರೆ, ಅದನ್ನು ಮುಂಚಿತವಾಗಿಯೇ ಊಹಿಸಿದ್ದ ಜರಾಸಂಧ ಸೂಕ್ತ ರೀತಿಯಲ್ಲಿ ಎದುರಿಸಿ ದುರ್ಯೋಧನಾದಿಗಳನ್ನು ಸೋಲಿಸಿ ಬಂಧನದಲ್ಲಿರಿಸಿದ. ಕರ್ಣ ಪಲಾಯನಗೈದ. ತಮ್ಮಂದಿರೊಂದಿಗೆ ಹಾಗೆ ಸೆರೆಸಿಕ್ಕಿದ್ದ ಅವನ ಬಿಡುಗಡೆ ಇತರರಿಂದ ಅಸಾಧ್ಯವೆಂಬುದನ್ನು ತಿಳಿದು ಭೀಷ್ಮರು ಆ ಕಾರ್ಯವನ್ನು ಭೀಮಸೇನನಿಗೆ ವಹಿಸಿದರು. ಭೀಮಸೇನ ಒಂಟಿಯಾಗಿಯೇ ಅಲ್ಲಿಗೆ ತೆರಳಿ ಸುವಜ್ರನನ್ನು ಸಂಹರಿಸಿ ಜರಾಸಂಧಾದಿಗಳನ್ನು ಪರಾಭವಗೊಳಿಸಿ ದುರ್ಯೋಧನಾದಿಗಳನ್ನು ಬಂಧಮುಕ್ತರನ್ನಾಗಿ ಮಾಡಿ ಹಸ್ತಿನಾಪುರಕ್ಕೆ ಕರೆದುತಂದ. ಆಗ ದುರ್ಯೋಧನಾದಿಗಳ ಮುಖದಲ್ಲಿ ತುಂಬಿದ್ದುದು ಪ್ರೇತಕಳೆಯಾಗಿತ್ತು. ಭೀಮನಿಂದ ಹೀಗೆ ಬದುಕು ಕಂಡ ಅವರು ಜೀವನಪೂರ್ತಿ ಅವನಿಗೆ ಚಿರಋಣಿಯಾಗಿರಬೇಕಿತ್ತು. ಪ್ರಾಣದಾನ ಮಾಡಿದ ಭೀಮನಿಗಾಗಿ ಸರ್ವಸ್ವವನ್ನೂ ಅರ್ಪಿಸಬೇಕಿತ್ತು. ಆದರೆ, ದುಷ್ಟರಿಗೆ ಅಂತಹ ಸಂಸ್ಕೃತಿ ಇರುವುದಿಲ್ಲ. ದುರ್ಯೋಧನ ಆ ಪ್ರಸಂಗದ ಬಳಿಕ ಭೀಮಸೇನನ ಮೇಲಿನ ತನ್ನ ದ್ವೇಷವನ್ನು ಮತ್ತಷ್ಟು ಹೆಚ್ಚಿಸಿಕೊಂಡ. ಕೃತಘ್ನತೆ ಎಂದರೆ ಇದೇ. ಈ ಪ್ರಸಂಗದ ಹೊತ್ತಿಗೆ ಪಾಂಡವರು ಹಸ್ತಿನಾಪುರಕ್ಕೆ ಬಂದು ಐದು ವರ್ಷಗಳು ಕಳೆದಿದ್ದವು.

ತನ್ನ ಮಕ್ಕಳಿಗೆ ಭೀಮಾದಿ ಪಾಂಡವರೊಂದಿಗೆ ಸಹಬಾಳ್ವೆ ಸಾಧ್ಯವಿಲ್ಲವೆಂದು ಧೃತರಾಷ್ಟ್ರನಿಗೆ ಮನವರಿಕೆಯಾಯಿತು. ಅದಕ್ಕೆ ಪರಿಹಾರವೆಂದು ಅವನು ಪಾಂಡವರಿಗೆ

ಅರ್ಧರಾಜ್ಯವನ್ನು ನೀಡಿ ಬೇರೆಡೆಗೆ ಸಾಗಿಸಲು ಯೋಜಿಸಿದ. ಇಂದ್ರಪ್ರಸ್ಥ ಒಂದು ಕಾಲಕ್ಕೆ ಇಂದ್ರನಿಗೆ ಪಟ್ಟಾಭಿಷೇಕ ನಡೆದು ಅವನು ರಾಜ್ಯವಾಳಿದ್ದ ಸ್ಥಳ. ಅದನ್ನು ರಾಜಧಾನಿ-ಯನ್ನಾಗಿ ಹೊಂದಿ ರಾಜ್ಯಭಾರ ಮಾಡಲು ತಿಳಿಸಿ ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟು ಧೃತರಾಷ್ಟ್ರ ಅವರನ್ನು ಬೀಳ್ಕೊಟ್ಟ

ಯುಧಿಷ್ಠಿರನನ್ನು ಮಹಾರಾಜ ಎಂದು, ಭೀಮಸೇನನ್ನು ಯುವರಾಜ ಎಂದು ಘೋಷಿಸಿ ಪಟ್ಟಾಭಿಷೇಕ ನಡೆಯಿತು. ಆ ಪಟ್ಟಾಭಿಷೇಕ ಕಾರ್ಯವನ್ನು ನಡೆಸಿದವರು ಮುಖ್ಯವಾಗಿ ಶ್ರೀವೇದವ್ಯಾಸರು, ಆ ಬಳಿಕ ಶ್ರೀಕೃಷ್ಣ ಅನಂತರ ಬಾಹ್ಲೀಕ ಮೊದಲಾದ ಹಿರಿಯರು. ಆ ಸಮಯದಲ್ಲಿ ರಾಜಸೂಯ, ಅಶ್ವಮೇಧ ಮೊದಲಾದ ಯಾಗಗಳನ್ನು ಮಾಡುವ ಚಕ್ರವರ್ತಿಯಾಗು ಎಂದು ಶ್ರೀಕೃಷ್ಣ-ವ್ಯಾಸರು ಮಾಡಿದ ಆಶೀರ್ವಚನ ಸತ್ಯವೇ ಆದದ್ದು ಇತಿಹಾಸ. ದ್ರೌಪದಿಯು ಮಹಾರಾಣಿಯಾಗಿಯು, ಯುವರಾಣಿಯಾಗಿಯು ಘೋಷಿತಳಾದಳು. ಏಕಕಾಲಕ್ಕೆ ಮಹಾರಾಣಿ ಹಾಗೂ ಯುವರಾಣಿಯ ಪದವಿಯಲ್ಲಿ ರಾರಾಜಿಸಿದ ಅನುಪಮ ಹಿರಿಮೆ ದ್ರೌಪದಿಯದಾಯಿತು.

ಹೆಸರಿಗೇನೋ ಇಂದ್ರಪ್ರಸ್ಥ ಒಂದು ಕಾಲಕ್ಕೆ ಅಲ್ಲಿ ಇಂದ್ರ ಆಳಿದ್ದು ಸಹ ನಿಜ. ಆದರೆ, ಪಾಂಡವರು ಅಲ್ಲಿಗೆ ಹೋಗಿ ನೆಲೆಸಿದಾಗ ಅದೊಂದು ಬಂಜರು ಭೂಮಿಯಂತಹ ಸ್ಥಳವಾಗಿತ್ತು. ಕಾಡು-ಮೇಡುಗಳಿಂದ ಕೂಡಿದ ಆ ಸ್ಥಳ ವಾಸಕ್ಕೆ ಯೋಗ್ಯವಾಗಿರಲಿಲ್ಲ. ಧೃತರಾಷ್ಟ್ರ ಇಲ್ಲಿಯೂ ತನ್ನ ಮಲತಾಯಿ ಧೋರಣೆಯನ್ನು ತೋರಿಸಿದ್ದ. ಸುಸಜ್ಜಿತವಾದ, ಸುಸಮೃದ್ಧವಾದ ಹಸ್ತಿನಾಪುರವನ್ನು ತನ್ನ ಮಕ್ಕಳಿಗೆ ಇರಿಸಿಕೊಂಡು, ತನ್ನ ತಮ್ಮ ಪಾಂಡುವಿನ ಮಕ್ಕಳಿಗೆ ಮಾತ್ರ ಇಂತಹ ನಿರುಪಯುಕ್ತವೆನ್ನಿಸುವ ಸ್ಥಳವನ್ನು ನೀಡಿದ್ದ. ಪಾಂಡವರಂತೂ ತುಂಬಾ ಉದಾರಿಗಳು. ಅವನ ಧೋರಣೆಯ ಬಗ್ಗೆ ಸ್ವಲ್ಪವೂ ಬೇಸರಿಸದೇ ಅವನು ನೀಡಿದ್ದನ್ನು ಸ್ವೀಕರಿಸಿದರು. ಪಾಂಡವರು ಹಸ್ತಿನಾಪುರದಿಂದ ಹೊರಟು ನಿಂತಾಗ ಊರಿಗೆ ಊರೇ ಅವರ ಹಿಂದೆ ತೆರಳಲು ನಿಶ್ಚಯಿಸಿತು. ಅಲ್ಲಿಯ ಜನರಾರಿಗೂ ದುರ್ಯೋಧನನ ಆಳ್ವಿಕೆಯಲ್ಲಿ ನೆಲೆಸಲು ಇಷ್ಟವಿರಲಿಲ್ಲ. ಅವನ ದುಷ್ಟತನಕ್ಕೆ ಅವರು ರೋಸಿಹೋಗಿದ್ದರು. ದುರ್ಯೋಧನನಿಗೆ ಆಘಾತವಾಯಿತು. ಜನರಿಲ್ಲದ ರಾಜ್ಯವನ್ನು ಆಳುವುದೆಂತು? ಪಾಂಡವರ ಹಿಂದೆ ತೆರಳುವವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದಾಗಿ ಬೆದರಿಕೆಯನ್ನು ಒಡ್ಡಿದ. ಅವರು ಆ ಬಗ್ಗೆ ಚಿಂತಿಸಲೇ ಇಲ್ಲ. ''ನಿನಗೆ ತೋಚಿದ್ದನ್ನು ಮಾಡಿಕೊ, ನಾವಂತು ಪಾಂಡವರ ಸಹವಾಸವನ್ನೇ ಬಯಸುವವರು'' ಎಂದು ಅವರು ತೆರಳಿಯೇ ಬಿಟ್ಟರು.

ಧರ್ಮರಾಜ ವಿಷಯವನ್ನು ಅರ್ಥಮಾಡಿಕೊಂಡ. ಜನರು ಹಾಗೆ ತಮ್ಮ ಹಿಂದೆ ಬಂದಲ್ಲಿ ಧೃತರಾಷ್ಟ್ರನಿಗೆ ನೋವಾದೀತು ಎಂದು ಯೋಚಿಸಿದ. ಜನರಿಗೆಲ್ಲ ಆದರದಿಂದ ತಿಳಿಸಿದ.

"ನೀವು ಹೀಗೆ ನಮ್ಮೊಂದಿಗೆ ಬರುವುದು ನಮ್ಮ ದೊಡ್ಡಪ್ಪನ ನೋವಿಗೆ ಕಾರಣವಾಗುವುದು, ಅದು ನಮಗೆ ಹಿಡಿಸದು. ದಯವಿಟ್ಟು ನೀವು ನಮಗಾಗಿ ಇಲ್ಲಿಯೇ ಉಳಿಯಬೇಕು. ನಿಮ್ಮ ಪ್ರೀತಿ ನಮಗೆ ಅರ್ಥವಾಗಿದೆ" ಎಂದು ಕೇಳಿಕೊಂಡ. ದುರ್ಯೋಧನನ ಬೆದರಿಕೆಗೆ ಮಣಿಯದಿದ್ದ ಜನ ಧರ್ಮರಾಜನ ಈ ಕೋರಿಕೆಗೆ ಮಣಿದರು; ಹಸ್ತಿನಾವತಿಗೆ ಮರಳಿದರು. ಅವರೆಲ್ಲ ದೇಹದಿಂದ ಹಸ್ತಿನಾಪುರದಲ್ಲಿ ನೆಲೆಸಿದ್ದರೂ, ಅವರ ಮನಸ್ಸು ಮಾತ್ರ ಪಾಂಡವರ ಹಿಂದೆಯೇ ಹೊರಟುಬಿಟ್ಟಿತ್ತು.

ಈ ಬಗ್ಗೆ ದುರ್ಯೋಧನ ಎಚ್ಚೆತ್ತುಕೊಳ್ಳಲಿಲ್ಲ. ತನ್ನ ಬೆದರಿಕೆಗೆ ಮಣಿಯದ ಜನ ಯುಧಿಷ್ಠಿರನ ಕೋರಿಕೆಗೆ ಮಣಿದಿದ್ದರ ಹಿರಿಮೆಯನ್ನು ಅರ್ಥಮಾಡಿಕೊಳ್ಳಲಿಲ್ಲ. ಧೃತರಾಷ್ಟ್ರ ಅವರೆಲ್ಲ ಹಾಗೆ ತೆರಳಿದ ಮೇಲೆ ದುರ್ಯೋಧನನ್ನು ಮಹಾರಾಜನನ್ನಾಗಿಯು, ದುಃಶಾಸನನ್ನು ಯುವರಾಜನನ್ನಾಗಿಯು ಪಟ್ಟಾಭಿಷೇಕ ಮಾಡಿ ನೆಮ್ಮದಿ ಕಂಡುಕೊಳ್ಳುವ ಪ್ರಯತ್ನ ನಡೆಸಿದ.

## ಮಹಾರಾಣಿಯಾಗಿ ದ್ರೌಪದಿ

ಪಾಂಡವರು ಇಂದ್ರಪ್ರಸ್ಥವನ್ನು ತಲುಪಿದರು, ಅವರೊಂದಿಗೆ ಭಗವಂತನಾದ ಶ್ರೀಕೃಷ್ಣನು ಆಗಮಿಸಿದ್ದ. ಅವನ ಭಕ್ತವಾತ್ಸಲ್ಯಕ್ಕೆ ಇದು ಒಂದು ನಿದರ್ಶನ. ಅಲ್ಲಿಯ ಪರಿಸ್ಥಿತಿಯನ್ನು ಬದಲಾಯಿಸಲು ಸಂಕಲ್ಪಿಸಿದ ಶ್ರೀಕೃಷ್ಣ ವಿಶ್ವಕರ್ಮನನ್ನು ಕರೆದ. ಕೂಡಲೇ ಆಗಮಿಸಿದ ವಿಶ್ವಕರ್ಮ ಶ್ರೀಕೃಷ್ಣನ ಆದೇಶದಂತೆ ಇಂದ್ರಪ್ರಸ್ಥವನ್ನು ಪುನರ್ನಿರ್ಮಿಸಿದ. ಅದು ನಿಜಕ್ಕೂ ಇಂದ್ರಪ್ರಸ್ಥವೇ ಆಯಿತು. ಇಂದ್ರನ ರಾಜಧಾನಿಯಾದಂತಹ ಅಮರಾವತಿಯಂತಾಯಿತು. ಅದರ ವೈಭವವನ್ನು ಕೇಳಿದ ಜನ ವಿವಿಧ ದೇಶಗಳಿಂದ ಅಲ್ಲಿಗೆ ವಲಸೆ ಬರತೊಡಗಿದರು. ಕೆಲವೇ ದಿನಗಳಲ್ಲಿ ಜನರಿಂದ ಕಿಕ್ಕಿರಿದ ದಿವ್ಯ ನಗರಿಯಾಗಿ ಅದು ಬದಲಾಯಿತು. ಭಗವಂತನು ಒಲಿದಾಗ ಯಾವುದು ತಾನೆ ಅಸಾಧ್ಯ?

ಪಾಂಡವರ ರಾಜ್ಯಭಾರ ಅಲ್ಲಿ ಪ್ರಾರಂಭವಾಯಿತು. ಯುಧಿಷ್ಠಿರ ಯಜ್ಞ, ದಾನ, ರಾಜಮಹಾರಾಜರಿಂದ ವಂದನೆಸ್ವೀಕಾರ, ಜನರನ್ನು ಪ್ರಶ್ನಿಸುವ ಮಹತ್ತರವಾದ ಕಾರ್ಯ, ಋಷಿಪೂಜೆ ಮೊದಲಾದ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡ. ಧರ್ಮಬೋಧನೆ, ಪರರಾಷ್ಟ್ರಗಳ ಮೇಲೆ ಆಕ್ರಮಣ, ರಾಜ್ಯದ ಸುವ್ಯವಸ್ಥೆ ಭೀಮನ ಕಾರ್ಯವಾಯಿತು. ಭೀಮಸೇನ ಧರ್ಮಸಂರಕ್ಷಣೆಯ ಕಾರ್ಯವನ್ನು ವಹಿಸಿಕೊಂಡ. ಜನರೆಲ್ಲ ಭಗವಂತನ ಪಾರಮ್ಯವನ್ನು ಅರಿತು, ಅವನ ಪೂಜೆಯೆಂದೇ ಭಾವಿಸಿ ಬದುಕುವುದನ್ನು ರೂಢಿಸಿಕೊಂಡರು.

ಸ್ತ್ರೀಯರಿಗೆ ಧರ್ಮಬೋಧನೆ, ಭೃತ್ಯರ ರಕ್ಷಣೆ, ಕೋಶದ ವಿತರಣೆ, ಅಂತಃಪುರದ ಜನರ ಗುಣದೋಷಗಳ ಚಿಂತನೆ ಮೊದಲಾದವುಗಳು ದ್ರೌಪದಿಯ ಕಾರ್ಯವಾಯಿತು[1].

ರಾಜ್ಯದ ಜನರು ಧರ್ಮಮಾರ್ಗದಲ್ಲಿ ನಡೆಯಲು ಅವರಿಗೆ ಸೂಕ್ತವಾದ ಧಾರ್ಮಿಕ ಶಿಕ್ಷಣ ಅತ್ಯಗತ್ಯ. ಸ್ತ್ರೀಜನರ ಸಂರಕ್ಷಣೆಯಂತೂ ಅತ್ಯಂತ ಗುರುತರವಾದ ಕಾರ್ಯ. ಧರ್ಮದ ಅಳಿವು-ಉಳಿವಿನ ಹೆಚ್ಚಿನ ಹೊಣೆ ಸ್ತ್ರೀಯರ ಪಾಲಿಗೆ ಸೇರಿದೆ. ಅವರಿಗೆ ಸೂಕ್ತ ಧಾರ್ಮಿಕಶಿಕ್ಷಣ ದೊರೆಯದ ಹೊರತು ಅವರಿಂದ ಉತ್ತಮ ರೀತಿಯ ಧರ್ಮಸಂರಕ್ಷಣೆಯನ್ನು ನಿರೀಕ್ಷಿಸಲಾಗದು. ಸಾಮಾನ್ಯವಾಗಿ ಜನ ದಾರಿ ತಪ್ಪುವುದು ಇಲ್ಲಿಯೇ. ಸ್ತ್ರೀಯರಿಗೆ ಸೂಕ್ತ ಶಿಕ್ಷಣ ಧರ್ಮಪ್ರಜ್ಞೆಗಳ ವ್ಯವಸ್ಥೆ ದ್ರೌಪದಿಯ ಜವಾಬ್ದಾರಿಯಾಗಿತ್ತು. ಮಹಾರಾಣಿಯಾಗಿ, ಯುವರಾಣಿಯಾಗಿ ದ್ರೌಪದೀದೇವಿ ಅಂತಹ ಕಾರ್ಯವನ್ನು ಅತ್ಯಂತ ಯೋಗ್ಯರೀತಿಯಲ್ಲಿ ನಿರ್ವಹಿಸಿದರು. ಸಮಸ್ತ ಸ್ತ್ರೀಸಂಕುಲ ದ್ರೌಪದಿಯ ಮಾರ್ಗದರ್ಶನದಲ್ಲಿ ಧರ್ಮದ ಬಗ್ಗೆ ನಿಖರವಾದ ಪರಿಜ್ಞಾನವನ್ನು ಹೊಂದುವಂತಾಯಿತು. ಅದರಿಂದಾಗಿ ಇಡೀ ರಾಜ್ಯದಲ್ಲಿ ಪೂರ್ಣಪ್ರಮಾಣದಲ್ಲಿ ಶಾಂತಿ ನೆಲೆಸುವಂತಾಯಿತು.

ಭೃತ್ಯರ ರಕ್ಷಣೆ ಮಹಾರಾಣಿಯ ಮತ್ತೊಂದು ಮುಖ್ಯವಾದ ಕರ್ತವ್ಯ. ಸೂಕ್ತ ರಕ್ಷಣೆ ಒದಗಿದಾಗ ಮಾತ್ರವೇ ಭೃತ್ಯರಿಂದ ಸ್ವಾಮಿನಿಷ್ಠೆ ಹಾಗೂ ನಿರ್ವ್ಯಾಜವಾದ ಕಾರ್ಯಕ್ಷಮತೆಯನ್ನು ನಿರೀಕ್ಷಿಸಲು ಸಾಧ್ಯ. ಕೆಲಸ ಕಾರ್ಯಗಳಲ್ಲಿ ಆಗುವ ಅವ್ಯವಸ್ಥೆಗೆ ಸೇವಕವರ್ಗಕ್ಕೆ ಸೂಕ್ತವಾದ ಯೋಗಕ್ಷೇಮದ ಭರವಸೆ ಲಭಿಸದಿರುವುದೇ ಕಾರಣ. ದ್ರೌಪದಿಯು ಆ ಕಾರ್ಯದಲ್ಲೂ ಸಹ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಒಬ್ಬ ಮಹಾರಾಣಿಯಾಗಿ, ಯುವರಾಣಿಯಾಗಿ ಅವರು ನಿರ್ವಹಿಸಿದ ಆ ಜವಾಬ್ದಾರಿ ದಾಖಲೆಯ ಕಾರ್ಯವಾಗಿತ್ತು. ಅವರ ಬಳಿ ಇದ್ದ ಭೃತ್ಯವರ್ಗ ಸಣ್ಣಪುಟ್ಟದ್ದಾಗಿರಲಿಲ್ಲ. ಪ್ರತಿನಿತ್ಯ ಅವರ ಮನೆಯಲ್ಲಿ ೯೦,೦೦೦ ಮುನಿಗಳು, ೧೦,೦೦೦ ಯತಿಗಳು ಆಹಾರ ಸ್ವೀಕರಿಸುತ್ತಿದ್ದರು. ಅವರಲ್ಲಿ ಪ್ರತಿಯೊಬ್ಬರಿಗೂ ಸಹ ೩೦೦ ಜನರಷ್ಟು ದೊಡ್ಡ ಪರಿವಾರವಿತ್ತು. ಎಂದರೆ ಲಕ್ಷಗಟ್ಟಲೆ ಜನಗಳ ಊಟೋಪಚಾರದ ವ್ಯವಸ್ಥೆ ಪ್ರತಿನಿತ್ಯ ಅಲ್ಲಿ ಆಗಬೇಕಿತ್ತು. ಅದರ ಸಂಪೂರ್ಣ ಹೊಣೆಗಾರಿಕೆಯನ್ನು ಸ್ವತಃ ದ್ರೌಪದಿದೇವಿಯೇ ಹೊತ್ತಿದ್ದರು[2]. ಅಷ್ಟು ಜನರ

---

೧ ಸ್ತ್ರೀಧರ್ಮಸಂಶಾಸನಭೃತ್ಯಕೋಶರಕ್ಷಾವ್ಯಯಾದೌ ಗುಣದೋಷಚಿಂತನೇ।
ಅಂತಃಪುರಸ್ಥಸ್ಯ ಜನಸ್ಯ ಕೃಷ್ಣಾ ಹ್ಯಾಸೀದ್ಧರೇರ್ಧರ್ಮನಿದರ್ಶನೀ ಚ॥

-ಮ.ಭಾ.ತಾ.ನಿ.(೨೦/೨)

೨ ಅಷ್ಟಾವಗ್ರೇ ಬ್ರಾಹ್ಮಣಾನಾಂ ಸಹಸ್ರಾಣಿ ಸ್ಮ ನಿತ್ಯದಾ।
ಭುಂಜತೇ ರುಗ್ಮಪಾತ್ರೀಷು ಯುದಿಷ್ಠಿರನಿವೇಶನೇ॥
ಅಷ್ಟಾಶೀತಿಸಹಸ್ರಾಣಿ ಸ್ನಾತಕಾ ಗೃಹಮೇಧಿನಃ।
ತ್ರಿಂಶದ್ದಾಸೀಕ ಏಕೈಕೋ ಯಾನ್ ಬಿಭರ್ತಿ ಯುಧಿಷ್ಠಿರಃ॥

ಮೇಲ್ವಿಚಾರಣೆಗಾಗಿ ಯೋಜಿತವಾಗಿದ್ದ ಭೃತ್ಯವರ್ಗ ಗಣನೆಗೆ ನಿಲುಕಲಾರದಷ್ಟು ದೊಡ್ಡ ಪ್ರಮಾಣದಲ್ಲಿತ್ತು. ಅವರೆಲ್ಲರಿಗೂ ಯಾವುದೇ ರೀತಿಯ ಕೊರತೆಯಾಗದಂತೆ ಅನ್ನ, ಪಾನ, ವಸ್ತ್ರ ಮೊದಲಾದ ಸಕಲ ಬಗೆಯ ಸೌಲಭ್ಯವು ಒದಗುವಂತೆ ಅವರು ನೋಡಿಕೊಳ್ಳುತ್ತಿದ್ದರು. ಅವರಲ್ಲಿ ಪ್ರತಿಯೊಬ್ಬರ ಮನೆಯ ಆಗು–ಹೋಗುಗಳು ಮೊದಲಾದವುಗಳ ಬಗ್ಗೆಯೂ ಪೂರ್ಣ ಮಾಹಿತಿಯನ್ನು ಹೊಂದಿದ್ದರು. ಅವರಲ್ಲಿ ಪ್ರತಿಯೊಬ್ಬರ ಹೆಸರು ಸಹ ಅವರಿಗೆ ಬಾಯಲ್ಲಿಯೇ ಇತ್ತು. ಮೇಲ್ನೋಟಕ್ಕೆ ಇದು ನಂಬಲು ಅಸಾಧ್ಯವೆಂಬಂತೆ

---

ದಶಾನ್ಯಾನಿ ಸಹಸ್ರಾಣಿ ಯೇಷಾಮನ್ನಂ ಸುಸಂಸ್ಕೃತಮ್ ।
ಹ್ರಿಯತೇ ರುಗ್ಮಪಾತ್ರೀಭಿರ್ಯತೀನಾಮೂರ್ಧ್ವರೇತಸಾಮ್ ॥
ತಾನ್ ಸರ್ವಾನಗ್ರಹಾರೇಣ ಬ್ರಾಹ್ಮಣಾನ್ ವೇದವಾದಿನಃ ।
ಯಥಾರ್ಹಂ ಪೂಜಯಾಮಿ ಸ್ಮ ಪಾನಾಚ್ಛಾದನಭೋಜನೈಃ ॥
ಶತಂ ದಾಸೀಸಹಸ್ರಾಣಿ ಕೌಂತೇಯಸ್ಯ ಮಹಾತ್ಮನಃ ।
ಕಂಬುಕೇಯೂರಧಾರಿಣ್ಯೋ ನಿಷ್ಕಕಂಠ್ಯಃ ಸ್ವಲಂಕೃತಾಃ ॥
ಮಹಾರ್ಹಮಾಲ್ಯಾಭರಣಾಃ ಸುವರ್ಣಾಶ್ಚಂದನೋಕ್ಷಿತಾಃ ।
ಮಣೀನ್ ಹೇಮ ಚ ಬಿಭ್ರತ್ಯೋ ನೃತ್ಯಗೀತವಿಶಾರದಾಃ ॥
ತಾಸಾಂ ನಾಮ ಚ ರೂಪಂ ಚ ಭೋಜನಾಚ್ಛಾದನಾನಿ ಚ ।
ಸರ್ವಾಸಾಮೇವ ವೇದಾಹಂ ಕರ್ಮ ಚೈವ ಕೃತಾಕೃತಮ್ ॥
ಶತಂ ದಾಸೀಸಹಸ್ರಾಣಿ ಕುಂತೀಪುತ್ರಸ್ಯ ಧೀಮತಃ ।
ಪಾತ್ರೀಹಸ್ತಾ ದಿವಾರಾತ್ರಮತಿಥೀನ್ ಭೋಜಯಂತ್ಯುತ ॥
ಶತಮಶ್ವಸಹಸ್ರಾಣಿ ದಶನಾಗಾಯುತಾನಿ ಚ ।
ಯುಧಿಷ್ಠಿರಸ್ಯಾನುಯಾತ್ರಮಿಂದ್ರಪ್ರಸ್ಥನಿವಾಸಿನಃ ॥
ಏತದಾಸೀತ್ ತದಾ ರಾಜ್ಞೋ ಯನ್ಮಹೀಂ ಪರ್ಯಪಾಲಯತ್ ।
ಯೇಷಾಂ ಸಂಖ್ಯಾವಿಧಿಂ ಚೈವ ಪ್ರದಿಶಾಮಿ ಶೃಣೋಮಿ ಚ ॥
ಅಂತಃಪುರಾಣಾಂ ಸರ್ವೇಷಾಂ ಭೃತ್ಯಾನಾಂ ಚೈವ ಸರ್ವಶಃ ।
ಆಗೋಪಾಲಾವಿಪಾಲೇಭ್ಯಃ ಸರ್ವಂ ವೇದ ಕೃತಾಕೃತಮ್ ॥
ಸರ್ವಂ ರಾಜ್ಞಃ ಸಮುದಯಮಾಯಂ ಚ ವ್ಯಯಮೇವ ಚ ।
ಏಕಾಹಂ ವೇದ್ಮಿ ಕಲ್ಯಾಣಿ ಪಾಂಡವಾನಾಂ ಯಶಸ್ವಿನಿ ॥
ಮಯಿ ಸರ್ವಂ ಸಮಾಸಜ್ಯ ಕುಟುಂಬಂ ಭರತರ್ಷಭಾಃ ।
ಉಪಾಸನರತಾಃ ಸರ್ವೇ ಘಟಯಂತಿ ವರಾನನೇ ॥
ತಮಹಂ ಭಾರಮಾಸಕ್ತಮನಾಧೃಷ್ಯಂ ದುರಾತ್ಮಭಿಃ ।
ಸುಖಂ ಸರ್ವಂ ಪರಿತ್ಯಜ್ಯ ರಾತ್ರ್ಯಹಾನಿ ಘಟಾಮಿ ವೈ ॥
ಅಧೃಷ್ಯಂ ವರುಣಸ್ಯೇವ ನಿಧಿಪೂರ್ಣಮಿವೋದಧಿಮ್ ।
ಏಕಾಹಂ ವೇದ್ಮಿ ಕೋಶಂ ವೈ ಪತೀನಾಂ ಧರ್ಮಚಾರಿಣಾಮ್ ॥
ಅನಿಶಾಯಾಂ ನಿಶಾಯಾಂ ಚ ಸಹಾಯಾ ಕ್ಷುತ್ಪಿಪಾಸಯೋಃ ।
ಆರಾಧಯಂತ್ಯಾಃ ಕೌರವ್ಯಾಂಸ್ತುಲ್ಯಾ ರಾತ್ರಿರಹಶ್ಚ ಮೇ ॥

–ಮ.ಭಾ.(ವನಪರ್ವ/೨೩೩/೪೨–೫೭)

ತೋರುವುದಾದರೂ, ಅವರು ವಿದ್ಯಾಭಿಮಾನಿನಿಯಾದ ಭಾವಿಸರಸ್ವತಿಯೇ ಆದವರು ಎಂಬ ಸತ್ಯವನ್ನು ತಿಳಿದವರಿಗೆ ಅದರ ಯಥಾರ್ಥತೆ ಮನಗಾಣುವುದು. ಈ ಬಗೆಯ ಸುವ್ಯವಸ್ಥೆ ದ್ರೌಪದಿಯ ವ್ಯಕ್ತಿತ್ವದ ಒಂದು ಮುಖ್ಯ ಮುಖ. ಇದನ್ನು ಮಹಾಭಾರತವೇ ಹಲವಾರು ಪ್ರಸಂಗಗಳಲ್ಲಿ ಬಹುವಾಗಿ ವರ್ಣಿಸಿದೆ.

ಕೋಶವ್ಯಯ, ಎಂದರೆ ಹಣಕಾಸಿನ ನಿರ್ವಹಣೆ ಹಾಗೂ ಅದರ ಸೂಕ್ತ ವಿತರಣೆ. ಇದು ಸಹ ದ್ರೌಪದಿಯ ಕಾರ್ಯವಾಗಿತ್ತು. ಕುರುವಂಶದ ರಾಜ್ಯವೆಂದರೆ, ದಾಖಲೆಯ ಸಾಮ್ರಾಜ್ಯ. ಅದರಲ್ಲಿನ ಸಂಪತ್ತು ಗಣನೆಗೆ ನಿಲುಕದಂತಹುದು. ಅದರ ಸಮಗ್ರ ನಿರ್ವಹಣೆ ಅತ್ಯಂತ ದಕ್ಷತೆಯ ಕಾರ್ಯ; ವಿತರಣೆಯಂತೂ ಸವಾಲಿನ ಕಾರ್ಯವೇ ಸರಿ. ಅಂತಃಪುರದ ಸಮಸ್ತ ಜನತೆಯ ಯೋಗಕ್ಷೇಮಕ್ಕೆ ಅಗತ್ಯವೆನ್ನಿಸಿದ ಹಣಕಾಸಿನ ಪೂರ್ಣ ನಿರ್ವಹಣೆ ಅವರ ಕೈಯಲ್ಲಿತ್ತು. ಸ್ತ್ರೀಯರಿಗೆ ಹಣಕಾಸಿನ ಹೊಣೆಯನ್ನು ಒಪ್ಪಿಸುವ ಕಾರ್ಯಕ್ಕೆ ದ್ರೌಪದಿಯ ಈ ಪ್ರಸಂಗವೇ ನಾಂದಿ ಎಂದು ಭಾವಿಸಲು ಸಾಧ್ಯವಿದೆ. ಆದರೆ, ಅವರ ನಿರ್ವಹಣೆಯ ಪರಿಪೂರ್ಣತೆ ಮಾತ್ರ ಅವರಿಗೇ ಸಲ್ಲತಕ್ಕದ್ದು.

ಅಂತಃಪುರದ ಜನರ ಗುಣಾವಗುಣಗಳ ಚಿಂತನೆ ಯಜಮಾನಿಯ ಮುಖ್ಯ ಕಾರ್ಯ. ಗುಣಗಳಿಗೆ ಸೂಕ್ತವಾದ ಪುರಸ್ಕಾರ, ದೋಷಗಳಿಗೆ ಉಚಿತವಾದ ದಂಡನೆ ಕಾಲಕಾಲಕ್ಕೆ ನಡೆಯುತ್ತಿದ್ದರೆ ಮಾತ್ರ ನೌಕರ ವರ್ಗ ತಮ್ಮ ಕೆಲಸ-ಕಾರ್ಯಗಳಲ್ಲಿ ಪೂರ್ಣವಾಗಿ ನಿಷ್ಠೆಯಿಂದಿರಲು ಸಾಧ್ಯ. ಗುಣವನ್ನು ಗುರುತಿಸದೇ ಇರುವುದು, ದೋಷವನ್ನು ಉದಾಸೀನ ಮಾಡುವುದು ನೌಕರರ ನೈತಿಕತೆಯನ್ನೇ ಹಾಳುಮಾಡುತ್ತದೆ. ಇಂದಿನ ವ್ಯವಸ್ಥೆಯಲ್ಲಿ ನೌಕರ ವರ್ಗದ ಅಶಿಸ್ತು ಎಲ್ಲರಿಗೂ ತಿಳಿದದ್ದೆ. ಅದಕ್ಕೆ ಕಾರಣ ಅದರ ಅಸಮರ್ಪಕ ನಿರ್ವಹಣೆಯೇ ಆಗಿದೆ. ಆದರೆ, ದ್ರೌಪದಿಯ ಮೇಲ್ವಿಚಾರಣೆಯಲ್ಲಿ ಭೃತ್ಯವರ್ಗದ ಗುಣಾವಗುಣಗಳ ಚಿಂತನೆ ಸೂಕ್ತ ರೀತಿಯಲ್ಲಿ ನಡೆಯುತ್ತಿದ್ದರಿಂದ ಇಡೀ ರಾಜ್ಯವೇ ಸುವ್ಯವಸ್ಥಿತವಾಗಿ ನಡೆಯುತ್ತಿತ್ತು.

## ದ್ರೌಪದೀ - ಕಾಳೀ

ಇತರ ದೇವತೆಗಳಿಂದ ಆವಿಷ್ಟವಾದ ಈ ದ್ರೌಪದಿಯ ರೂಪದಂತೆ ಕೇವಲ ಭಾರತಿಯಾದ ಮತ್ತೊಂದು ರೂಪವು ಸಹ ಆ ಕಾಲದಲ್ಲಿ ಅವತರಿಸಿತ್ತು. ಕಾಳೀ ಎಂದು ಆ ರೂಪದ ಹೆಸರು. ಕಾಶಿರಾಜನ ಮಗಳಾಗಿ ಅವಳ ಅವತಾರ. [೧]ಕಾಳೀ ಎಂಬುದಕ್ಕೆ ಕೃಷ್ಣೆ ಎಂಬ ಅರ್ಥವೂ ಇದೆ.

---

೧ ಕೃಷ್ಣಾ ಎಂಬುದು ಹೇಗೋ ಹಾಗೆ ಕಾಳೀ ಎಂಬುದು ಸಹ ದುರ್ಗೆಯ ನಾಮಗಳಲ್ಲೊಂದು:
ದುರ್ಗೇತಿ ಭದ್ರಕಾಳೀತಿ ವಿಜಯಾ ವೈಷ್ಣವೀತಿ ಚ।
ಕುಮುದಾ ಚಂಡಿಕಾ ಕೃಷ್ಣಾ ಮಾಧವಿ ಕನ್ಯಕೇತಿ ಚ।

ಈ ಎರಡು ರೂಪಗಳು ಸಹ ಕೃಷ್ಣವರ್ಣದ ರೂಪಗಳೇ ಎಂದು ಇದರಿಂದ ತಿಳಿಯುವುದು. ಆದರೆ, ಲಕ್ಷಣಗಳಿಂದಾಗಿ ಅದ್ವಿತೀಯವಾದ ಸೌಂದರ್ಯ ಈ ಎರಡು ರೂಪಗಳಿಗೂ ಸಮನಾಗಿಯೇ ಇದ್ದಿತು. ಸ್ವಯಂವರ ನಡೆದು ಅದಕ್ಕೆ ದುರ್ಯೋಧನ, ಜರಾಸಂಧ ಮೊದಲಾದ ದುಷ್ಟರಿಂದ ಪ್ರಾರಂಭಿಸಿ ಸಮಸ್ತ ರಾಜವೃಂದ ನೆರೆದಿತ್ತು. ಮುಖ್ಯವಾಗಿ ಭೀಮಸೇನ ಆ ಸ್ವಯಂವರಕ್ಕೆ ಆಗಮಿಸಿದ್ದ. ಭಾರತಿಯಾದ ಕಾಳಿಯಂತು ವಾಯುವಾದ ಭೀಮಸೇನನ ನಿಯತ ಪತ್ನಿಯಾದವಳು. ಅದರಿಂದಾಗಿ ಆ ಸ್ವಯಂವರದಲ್ಲಿ ಅವಳು ಭೀಮಸೇನನ ಕೊರಳಿಗೆ ಮಾಲೆ ಹಾಕಿ ಅವನ ಪತ್ನಿಯಾದಳು. ಅದನ್ನು ಸಹಿಸದ ಜರಾಸಂಧಾದಿ ದುಷ್ಟಕೂಟ ಭೀಮಸೇನನ ಮೇಲೆ ಯುದ್ಧವನ್ನು ಸಾರಿತು. ಭೀಮಸೇನ ಒಂಟಿಯಾಗಿಯೇ ಅವರನ್ನು ಎದುರಿಸಿದ; ಮೊದಲಿಗೆ ಅವರನ್ನು ವಾಗ್ಯುದ್ಧದಲ್ಲಿ ಸೋಲಿಸಿ, ಸಮಸ್ತಶಾಸ್ತ್ರಗಳ ಆಧಾರವನ್ನು ಮುಂದಿಟ್ಟು ಶ್ರೀಹರಿಯ ಪಾರಮ್ಯವನ್ನು ಸಮರ್ಥಿಸಿದ. ಅನ್ಯದೇವತೆಗಳ ಪಾರಮ್ಯವನ್ನು ಖಂಡಿಸಿದ. ನಿರುತ್ತರರಾದ ಅವರನ್ನು ಬಾಹುಯುದ್ಧಕ್ಕೆ ಆಹ್ವಾನಿಸಿದ. ವಿಷ್ಣುಭಕ್ತನಾದ ತನ್ನನ್ನು ಗೆಲ್ಲುವುದು ವಿಷ್ಣುಪಾರಮ್ಯಕ್ಕೆ ನಿದರ್ಶನವಾಗುವುದು ಎಂದು ಘೋಷಿಸಿ, ಅವರೊಂದಿಗೆ ಯುದ್ಧಕ್ಕೆ ತೊಡಗಿದ. ತನ್ನೊಂದಿಗೆ ಕಾದಲು ಬಂದ ಶಿವನನ್ನು ಕೇದಾರದಲ್ಲೂ, ಹಸ್ತಿನಾಪುರದಲ್ಲೂ ಪರಾಭವಗೊಳಿಸಿ ಕೇದಾರೇಶ್ವರ, ವ್ಯಾಘ್ರೇಶ್ವರ ಲಿಂಗಗಳಲ್ಲಿ ಶಿವ ಅಡಗಿದ್ದನ್ನು ಅವರಿಗೆ ತಿಳಿಸಿದ. ಕೇದಾರದ ದರ್ಶನ ವೈಷ್ಣವರಿಗೆ ನಿಷಿದ್ಧ ಎಂದು ಶಿವ ಹೇಳಿದ್ದನ್ನು ತಿಳಿಸಿದ. ಯುದ್ಧಕ್ಕೆ ಬಂದ ಜರಾಸಂಧನನ್ನು ಪರಾಭವಗೊಳಿಸಿ ಅವನನ್ನು ಗಂಗೆಯಲ್ಲಿ ಬಿಸಾಡಿದ. ವಿಷ್ಣುಪಾದೋದಕವೆಂಬ ಕಾರಣದಿಂದ ಗಂಗೆಯಲ್ಲಿ ತನ್ನ ಜನ್ಮದಲ್ಲಿ ಸರ್ವಥಾ ಸ್ನಾನ ಮಾಡೆನು ಎಂದು ಜರಾಸಂಧ ಸಂಕಲ್ಪಿಸಿದ್ದ; ಅಂದು ಅವನ ಆ ಸಂಕಲ್ಪವನ್ನು ಭೀಮಸೇನ ಭಗ್ನಗೊಳಿಸಿದ. ಗಂಗೆಯಲ್ಲಿ ಮತ್ತೆ ಮತ್ತೆ ಮುಳುಗಿ ಎದ್ದ ಜರಾಸಂಧ ಲಜ್ಜೆಯಿಂದ ತನ್ನ ಮುಖ ತೋರಿಸಲಾಗದೆ ತನ್ನ ದೇಶಕ್ಕೆ ಹಿಂದಿರುಗಿದ.

ಕಾಳಿಯಲ್ಲಿ ಭೀಮಸೇನನಿಗೆ ಒಬ್ಬ ಪುತ್ರ ಜನಿಸಿದ, ಶರ್ವತ್ರಾತ ಎಂದು ಅವನ ಹೆಸರು.

## ಸುಂದೋಪಸುಂದರ ಕಥೆ

ಪಾಂಡವರ ರಾಜ್ಯಭಾರ ನಡೆದಿತ್ತು; ಆಗೊಮ್ಮೆ ಅಲ್ಲಿಗೆ ನಾರದರು ಆಗಮಿಸಿ ಬ್ರಹ್ಮದೇವರ ಸಂದೇಶವೊಂದನ್ನು ಅವರಿಗೆ ತಿಳಿಸಿದರು. ಸುಂದ, ಉಪಸುಂದ ಎಂಬ ಇಬ್ಬರು ಅಣ್ಣತಮ್ಮಂದಿರಿದ್ದರು. ಅವರ ಅನ್ಯೋನ್ಯತೆ ಮಾತಿಗೆ ನಿಲುಕದಷ್ಟು ಅಪೂರ್ವವಾಗಿತ್ತು. ಅವರು ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿ ಪರಸ್ಪರರ ಹೊರತು ಬೇರಾರಿಂದಲೂ ತಮಗೆ ಸಾವು ಬರದಂತೆ ವರ ಪಡೆದುಕೊಂಡಿದ್ದರು. ಅವರ ಲೋಕನಾಶ ಕಾರ್ಯವಂತೂ

---

ಮಾಯಾ ನಾರಾಯಣೇಶಾನಾ ಶಾರದೇತ್ಯಂಬಿಕೇತಿ ಚ॥ -ಭಾಗವತ (೧೦/೩/೧೨,೧೩)

ದೇವತೆಗಳಿಗೂ ಸಮಸ್ಯೆ ಎನ್ನಿಸುವಂತಿತ್ತು. ಅನ್ಯೋನ್ಯತೆಯಿಂದಾಗಿ ಪರಸ್ಪರ ಘರ್ಷಣೆಗೂ ಅವಕಾಶವಿರಲಿಲ್ಲ. ದೇವತೆಗಳ ಪ್ರಾರ್ಥನೆಯಂತೆ ಬ್ರಹ್ಮದೇವರು ಆಗ ವಿಶ್ವಕರ್ಮನ ಮೂಲಕ ತಿಲೋತ್ತಮೆ ಎಂಬ ಒಬ್ಬ ಅಪ್ಸರೆಯನ್ನು ಸೃಷ್ಟಿಸಿದರು. ಮಹಾವಿಷ್ಣುವಿನ ನಾರಾಯಣರೂಪದಿಂದ ಊರ್ವಶಿಯ ಸೃಷ್ಟಿಯಾದಂತೆ ಬ್ರಹ್ಮದೇವರಿಂದ ತಿಲೋತ್ತಮೆಯ ಸೃಷ್ಟಿಯಾಯಿತು. ಎಲ್ಲ ಉತ್ತಮ ವಸ್ತುಗಳಲ್ಲಿನ ತಿಲದಷ್ಟು ಅಂಶವನ್ನು ಆಯ್ದು ಅದರಿಂದ ನಿರ್ಮಿತಳಾದ ಕಾರಣದಿಂದ ಅವಳಿಗೆ ತಿಲೋತ್ತಮೆ ಎಂದು ಹೆಸರಾಗಿತ್ತು[೧]. ಸುಂದೋಪಸುಂದರ ಮುಂದೆ ಕಾಣಿಸಿಕೊಂಡು ಅವರಲ್ಲಿ ಪರಸ್ಪರ ವೈರ ಬೆಳೆಯುವಂತೆ ಮಾಡಬೇಕೆಂದು ಆದೇಶವಿತ್ತು, ಅವಳನ್ನು ಅವರಿಬ್ಬರ ಬಳಿಗೆ ಕಳುಹಿಸಿಕೊಟ್ಟರು. ಅವಳನ್ನು ಕಾಣುತ್ತಲೆ ಮೋಹಪರವಶರಾದ ಸುಂದೋಪಸುಂದರು ಅವಳು ತನಗೆ, ತನಗೆ ಎಂದು ವಾದಿಸುತ್ತಾ ಕೊನೆಗೆ ಹೋರಾಟಕ್ಕೆ ಇಳಿದರು. ಬ್ರಹ್ಮದೇವರ ವರ ಅವರಿಗೆ ಶಾಪದಂತಾಯಿತು. ಅವರಿಬ್ಬರು ಪರಸ್ಪರರ ಹೊಡೆತಕ್ಕೆ ಸತ್ತುಬಿದ್ದರು. ಲೋಕಕ್ಕೆ ಕ್ಷೇಮ ಉಂಟಾಯಿತು[೨].

ಈ ಕಥೆಯನ್ನು ತಿಳಿಸಿ ನಾರದರು ಹೇಳಿದರು "ಬ್ರಹ್ಮದೇವರು ನಿಮಗೆ ಈ ರೀತಿಯಾಗಿ ಸಂದೇಶ ನೀಡಿರುವರು. ಒಬ್ಬ ದ್ರೌಪದಿಯ ಕಾರಣದಿಂದ ನಿಮ್ಮಲ್ಲಿ ವೈರಭಾವ ಉಂಟಾಗದಿರಲಿ ಎಂಬ ಯೋಚನೆಯಿಂದ ಅವರು ಇನ್ನು ಮುಂದೆ ದ್ರೌಪದಿ, ಯುಧಿಷ್ಠಿರ ಮೊದಲಾದ ಪಾಂಡವರ ಜೊತೆಗೆ ಕ್ರಮವಾಗಿ ಒಂದೊಂದು ವರ್ಷಕಾಲ ದಾಂಪತ್ಯವನ್ನು ಸಾಗಿಸಬೇಕು. ಇನ್ನೊಬ್ಬರೊಡನೆ ದ್ರೌಪದಿ ಇರುವುದನ್ನು ಪಾಂಡವರಲ್ಲಿ ಬೇರೆ ಯಾರೇ ಕಂಡರೂ ಅವರು ಅದಕ್ಕೆ ಪ್ರಾಯಶ್ಚಿತ್ತ ರೂಪವಾಗಿ ಒಂದು ವರ್ಷಕಾಲ ತೀರ್ಥಯಾತ್ರೆಯನ್ನು ಮಾಡಬೇಕು". ಪಾಂಡವರು ಬ್ರಹ್ಮದೇವರ ಆದೇಶವನ್ನು ಮನ್ನಿಸಿದರು.

ಈ ಮೊದಲೆ ತಿಳಿಸಿದಂತೆ ಪಾಂಡವರಲ್ಲಿ ಏಕತೆಯ ರಕ್ಷಣೆಗಾಗಿ ಕುಂತಿಯು ದ್ರೌಪದೀ ಒಬ್ಬಳನ್ನೇ ಅವರು ಐವರಿಗೂ ವಿವಾಹ ಮಾಡಿಸಿದಳು ಎಂಬ ಆಧುನಿಕರ ವಾದಕ್ಕೆ ಈ

---

೧ ತಿಲಂ ತಿಲಂ ಸಮಾನೀಯ ರತ್ನಾನಾಂ ಯದ್ವಿನಿರ್ಮಿತಾ ।
ತಿಲೋತ್ತಮೇತಿ ತತ್ ತಸ್ಯಾ ನಾಮ ಚಕ್ರೇ ಪಿತಾಮಹಃ ॥ -ಮ.ಭಾ. (ಆ.ಪ./೨೧೦/೧೮)

೨ ಸುಂದೋಪಸುಂದೌ ಭ್ರಾತರೌ ಬ್ರಹ್ಮವಾಕ್ಯಾತ್ ಪರಸ್ಪರಾದನ್ಯತೋ ನೈವ ವಧ್ಯೌ ।
ತಿಲೋತ್ತಮಾರ್ಥೇ ನಿಹತೌ ಪರಸ್ಪರಂ ತಯೋರ್ವಧಾರ್ಥೇ ಸೃಷ್ಟಯಾ ತೇನ ದೈತ್ಯೌ ॥
-ಮ.ಭಾ.ತಾ.ನಿ.(೨೦/೧೫೧)

ತ್ರಿಷು ಲೋಕೇಷು ಯದ್ಭೂತಂ ಕಿಂಚಿತ್ ಸ್ಥಾವರಜಂಗಮಮ್ ।
ಸರ್ವಸ್ಮಾನ್ನೋ ಭಯಂ ನ ಸ್ಯಾದೃತೇಽನ್ಯೋನ್ಯಂ ಪಿತಾಮಹ ॥ -ಮ.ಭಾ.(ಆದಿ/೨೦೮/೨೪)
ಅಹಂ ಪೂರ್ವಮಹಂ ಪೂರ್ವಮಿತ್ಯನ್ಯೋನ್ಯಂ ನಿಜಘ್ನತುಃ ।
ತೌ ಗದಾಭಿಹತೌ ಭೀಮೌ ಪೇತತುರ್ಧರಣೀತಲೇ ॥ - ಮ.ಭಾ.(ಆದಿ/೨೧೧/೧೯)

ಪ್ರಸಂಗ ಉತ್ತರವಾಗಿದೆ. ಎಲ್ಲ ರೀತಿಯಲ್ಲೂ ಅನ್ಯೋನ್ಯವಾಗಿದ್ದ ಸುಂದೋಪಸುಂದರು ಒಬ್ಬ ತಿಲೋತ್ತಮೆಯನ್ನು ಬಯಸಿದರು. ಅವಳು ತನ್ನ ಸ್ವತ್ತು ಮಾತ್ರವೇ ಆಗಬೇಕು ಎಂಬ ಅಪೇಕ್ಷೆಯಿಂದಾಗಿ ಅವರು ಪರಸ್ಪರ ಕಾದಾಡಿ ಸತ್ತರು. ಎಂದರೆ, ಇತರ ವಸ್ತು- ಗಳನ್ನು ಕಾರಣಾಂತರದಿಂದ ಹಂಚಿಕೊಳ್ಳಲು ಬಯಸುವ ಆಪ್ತತೆಯ ಸೋದರರು ಸಹ ಹೆಣ್ಣನ್ನು ಮಾತ್ರ ಹಂಚಿಕೊಳ್ಳಲು ಬಯಸುವುದಿಲ್ಲ ಎಂಬ ವಿಶೇಷಾಂಶ ಇದರಿಂದ ತಿಳಿಯುವುದು. ಆದ್ದರಿಂದ, ದ್ರೌಪದಿಯ ವಿವಾಹ ಐವರೊಂದಿಗೆ ನಡೆಯಲು ಮುಖ್ಯ ಕಾರಣ ಹಿಂದೆ ತಿಳಿಸಿದಂತೆ ದೈವಿಕ ಹಿನ್ನೆಲೆಯದಾಗಿತ್ತೇ ಹೊರತು ಲೌಕಿಕ ಹಿನ್ನೆಲೆಯದಾಗಿರಲಿಲ್ಲ ಎಂದು ಸ್ಪಷ್ಟಪಡುವುದು.

ಹಾಗಿದ್ದಾಗ ಒಮ್ಮೆ ಯುಧಿಷ್ಠಿರ-ದ್ರೌಪದಿಯರು ಒಟ್ಟಿಗೆ ಇದ್ದಾಗ ಬ್ರಾಹ್ಮಣನೊಬ್ಬನ ಗೋವುಗಳನ್ನು ಚೋರರಿಂದ ಬಿಡಿಸಿ ತರುವ ಕಾರ್ಯಕ್ಕೆ ತೊಡಗಿದ ಅರ್ಜುನ, ತನ್ನ ಶಸ್ತ್ರವನ್ನು ತೆಗೆದುಕೊಳ್ಳಲು ಆಯುಧಾಗಾರಕ್ಕೆ ತೆರಳಿದ. ಆ ಸಮಯದಲ್ಲಿ ಯುಧಿ-ಷ್ಠಿರ-ದ್ರೌಪದಿಯರು ಇದ್ದದ್ದು ಅಲ್ಲಿಯೇ. ಅದು ಅರ್ಜುನನಿಗೆ ತಿಳಿದಿದ್ದರೂ ಬ್ರಾಹ್ಮಣನ ಹಿತಕ್ಕಾಗಿ ಗೋವುಗಳ ಸಂರಕ್ಷಣೆಯಂತಹ ಮಹತ್ತರ ಕಾರ್ಯದಲ್ಲಿ ತೊಡಗಿದ್ದರಿಂದ ಅಪಚಾರವೆನ್ನಿಸಿದರೂ ಚಿಂತೆಯಿಲ್ಲ ಎಂಬ ಕಾರಣದಿಂದ ಅಲ್ಲಿಗೆ ತೆರಳಿ ಶಸ್ತ್ರವನ್ನು ಕೈಗೆತ್ತಿಕೊಂಡ, ಚೋರರನ್ನು ನಿಗ್ರಹಿಸಿ, ಗೋವುಗಳನ್ನು ಸಂರಕ್ಷಿಸಿ ಬ್ರಾಹ್ಮಣನಿಗೆ ನೀಡಿದ. ಮುಂದೆ ಸಭೆಯಲ್ಲಿ ತನ್ನಿಂದಾದ ಬ್ರಹ್ಮದೇವರ ಆದೇಶದ ಉಲ್ಲಂಘನೆಯನ್ನು ತಿಳಿಸಿ ಅದರಂತೆ ಒಂದು ವರ್ಷ ತೀರ್ಥಯಾತ್ರೆಯನ್ನು ಕೈಗೊಳ್ಳುವುದಾಗಿ ಹೇಳಿದ. ಅವನದು ದುರುದ್ದೇಶವಾಗಿರದೇ ಗೋಬ್ರಾಹ್ಮಣರ ರಕ್ಷಣೆಯ ಕಾರ್ಯಕ್ಕೆ ಮಾಡಿದ ಉಲ್ಲಂಘನೆಯಾದ್ದರಿಂದ, ಅದು ಅಪರಾಧವೇನಲ್ಲ ಎಂದು ಯುಧಿಷ್ಠಿರ ತಿಳಿಸಿದರೂ, ಅರ್ಜುನ ಅದಕ್ಕೆ ಒಪ್ಪದೇ, ಸೂಕ್ತ ಪ್ರಾಯಶ್ಚಿತ್ತವಾಗಿ ತೀರ್ಥಯಾತ್ರೆಗೆ ತೆರಳಿಯೇ ಬಿಟ್ಟ. ಇದು ಅರ್ಜುನನಿಗೆ ಇದ್ದ ಧರ್ಮದ ಬಗೆಗಿನ ಬದ್ಧತೆಗೆ ಉತ್ತಮ ನಿದರ್ಶನ.

ಹಾಗೆ ಹೊರಟ ಅರ್ಜುನ ಒಂದು ವರ್ಷದ ಬಳಿಕ ಮರಳಿದ. ಆ ವೇಳೆಗೆ ಅವನು ಉಲೂಪಿ ಎಂಬವಳಿಗೆ ಇರಾವಾನ್ ಎಂಬ ಪುತ್ರನನ್ನು ನಿಯೋಗ ಪದ್ಧತಿಯಿಂದ ನೀಡಿದ್ದ. ಚಿತ್ರಾಂಗದೆ ಎಂಬ ಪಾಂಡ್ಯ ದೇಶದ ದೊರೆಯ ಮಗಳನ್ನು ವಿವಾಹವಾಗಿ ಪುತ್ರಿಕಾ ಧರ್ಮದಿಂದ ಬಬ್ರುವಾಹನ ಎಂಬ ಮಗನನ್ನು ಪಡೆದು ಆ ರಾಜನಿಗೆ ನೀಡಿದ್ದ. ಕನ್ಯಾತೀರ್ಥದಲ್ಲಿದ್ದ ವರ್ಗಾ ಮೊದಲಾದ ಐದು ಜನ ಅಪ್ಸರೆಯರನ್ನು ಮೊಸಳೆಯ ಜನ್ಮದಿಂದ ಉದ್ಧರಿಸಿದ್ದ. ಮುಖ್ಯವಾಗಿ ಶ್ರೀಕೃಷ್ಣನ ಅನುಗ್ರಹದಿಂದ ಸುಭದ್ರೆಯನ್ನು ವಿವಾಹವಾಗಿ ತನ್ನ ಜೊತೆಗೆ ಕರೆದುತಂದಿದ್ದ.

ದ್ರೌಪದಿಗೆ ಆ ವೇಳೆಗೆ ಯುಧಿಷ್ಠಿರ ಹಾಗೂ ಭೀಮಸೇನನಿಂದ ಇಬ್ಬರು ಪುತ್ರರು ಜನಿಸಿದ್ದರು. ಬಳಿಕ ಅರ್ಜುನ, ನಕುಲ ಮತ್ತು ಸಹದೇವರಿಂದಲೂ ಪುತ್ರರು ಜನಿಸಿದರು. ಹೀಗೆ ಐವರು ಪುತ್ರರ ತಾಯಿಯಾದಳು ದ್ರೌಪದಿ; ಆ ಐವರು ಉಪಪಾಂಡವರು ಎನ್ನಿಸಿದರು.

## ಯಜ್ಞಪತ್ನಿಯಾಗಿ ದ್ರೌಪದಿ

ದ್ರೌಪದಿಯನ್ನು ವಿವಾಹವಾದ ಬಳಿಕ ಯುಧಿಷ್ಠಿರ ಮೊದಲಾದ ಪಾಂಡವರು ಬೇರೆ ರಾಜಕನ್ಯೆಯರನ್ನು ಸಹ ವಿವಾಹವಾದರು. ಧರ್ಮರಾಜ ಶಿಶುಪಾಲನ ಮಗಳಾದ ದೇವಕಿ ಎಂಬುವಳನ್ನು ಮದುವೆಯಾದ. ಅವಳಲ್ಲಿ ಅವನಿಗೆ ಸುಹೋತ್ರ ಎಂಬ ಪುತ್ರ ಜನಿಸಿದ. ಭೀಮಸೇನ ಕಾಳಿಯನ್ನು ಮದುವೆಯಾದ ಪ್ರಸಂಗ ಈಗಾಗಲೇ ಬಂದಿದೆ. ಅರ್ಜುನ ಸುಭದ್ರೆಯನ್ನು ಮದುವೆಯಾದ, ನಕುಲ ಶಲ್ಯರಾಜನ ಪುತ್ರಿಯನ್ನು ವಿವಾಹವಾದರೆ, ಸಹದೇವ ಜರಾಸಂಧನ ಮಗಳನ್ನು ಮದುವೆಯಾದ.

ಇಲ್ಲಿ ಒಂದು ಗಮನಿಸಬೇಕಾದ ಅಂಶವಿದೆ. ಕುಂತಿಯು ದ್ರೌಪದಿಯನ್ನು ತನ್ನ ಮಕ್ಕಳ ಒಗ್ಗಟ್ಟನ್ನು ಕಾಯ್ದುಕೊಳ್ಳಲು ಎಲ್ಲರಿಗೂ ಮದುವೆ ಮಾಡಿಸಿದಳು ಎಂಬ ಕೆಲವರ ವಾದಕ್ಕೆ ಈ ಮದುವೆಗಳು ಉತ್ತರವಾಗಿವೆ. ಹಿಂದೆ ಕುಂತಿಯು ಅದೇ ತೆರನಾಗಿ ಆಲೋಚಿಸಿದಲ್ಲಿ ಅನಂತರ ಪಾಂಡವರು ಬೇರೆ ವಿವಾಹವನ್ನು ಆಗಲೇಕೂಡದಿತ್ತು. ಅಥವಾ ಹಾಗೆ ಆದರೂ ಅವರೆಲ್ಲರೂ ಸಹ ದ್ರೌಪದಿಯಂತೆ ಆ ಐವರ ಪತ್ನಿಯರು ಆಗಬೇಕಿತ್ತು. ಹಾಗಾಗದೇ ಪ್ರತ್ಯೇಕ ಪ್ರತ್ಯೇಕವಾಗಿ ಅವರು ಐವರ ಪತ್ನಿಯರಾಗಲು ಬೇರೆ ಕಾರಣವಿರಲಿಲ್ಲ. ಹಾಗೆ ಹೊಂದಿಲ್ಲವೆಂದರೆ, ಕುಂತಿಗೆ ದ್ರೌಪದಿಯನ್ನು ಐವರಿಗೂ ವಿವಾಹ ಮಾಡಿಸುವಲ್ಲಿ ಅಂತಹ ಆಲೋಚನೆ ಇರಲಿಲ್ಲ ಎಂಬ ಅಂಶವೇ ದೃಢಪಡುವುದು. ಈ ಮೊದಲೇ ಹೇಳಿದಂತೆ ಐವರು ಪಾಂಡವರೊಂದಿಗಿನ ದ್ರೌಪದಿವಿವಾಹಕ್ಕೆ ದೈವಿಕವಾದ ಕಾರಣ ಎಂದರೆ ದ್ರೌಪದಿಯ ದೇಹದಲ್ಲಿ ಇತರ ಪಾಂಡವರ ನಿಯತಪತ್ನಿಯರ ಆವೇಶವಿದ್ದುದೇ ಮುಖ್ಯ ಕಾರಣ ಎಂದು ದೃಢಪಡುವುದು.

ಹೀಗೆ ಇತರಪತ್ನಿಯರನ್ನು ಹೊಂದಿದ್ದರೂ ದ್ರೌಪದಿಯ ಸ್ಥಾನ ಮಾತ್ರ ಉಳಿದೆಲ್ಲರಿಗಿಂತಲೂ ಮಿಗಿಲೇ ಆಗಿದ್ದಿತು. ಅದಕ್ಕೆ ರಾಜಸೂಯಯಾಗದ ಪ್ರಸಂಗ ಅತ್ಯುತ್ತಮ ನಿದರ್ಶನ. ರಾಜಸೂಯಯಾಗದ ಸಂದರ್ಭದಲ್ಲಿ ಯಜ್ಞಪತ್ನಿಯಾಗಿ ಪಟ್ಟಮಹಿಷಿಯ ಸ್ಥಾನದಲ್ಲಿ ಕುಳಿತದ್ದು ದ್ರೌಪದಿಯೇ ಹೊರತು ಇತರ ಯಾರೂ ಅಲ್ಲ. ಇದರಿಂದ ದ್ರೌಪದಿಯ ಸ್ಥಾನಮಾನ ಪಟ್ಟಮಹಿಷಿಯ ಸ್ಥಾನವಾಗಿತ್ತು ಎಂಬ ಅಂಶ ಸ್ಫುಟಪಡುವುದು.

## ಮಯಸಭೆಯಲ್ಲಿ ಕೌರವರು

ಪಾಂಡವರ ರಾಜಸೂಯಯಾಗ ದಾಖಲೆಯ ಯಾಗವಾಗಿ ಪ್ರಸಿದ್ಧವಾಯಿತು. ಹಿಂದೆ ಇಂದ್ರ, ವರುಣ, ಹರಿಶ್ಚಂದ್ರ ಮೊದಲಾದವರು ಅದನ್ನು ಮಾಡಿದ್ದರೂ, ಅವರೆಲ್ಲರ ಯಾಗಕ್ಕಿಂತ ಪಾಂಡವರ ರಾಜಸೂಯಯಾಗ ಉತ್ತಮವೆನ್ನಿಸಿತ್ತು. ಅದಕ್ಕೆ ಅನೇಕ ಕಾರಣಗಳು. ಮೊದಲನೆಯದಾಗಿ ಪಾಂಡವರ ರಾಜಸೂಯಯಾಗದ ಸಂದರ್ಭದಲ್ಲಿ ಜರಾಸಂಧ ಮೊದಲಾದಂತಹ ಶಿವಾದಿ ಅನೇಕ ದೇವತೆಗಳ ವರ ಪಡೆದಿದ್ದ ಅಸಂಖ್ಯ ರಾಜರುಗಳಿದ್ದರು. ಹರಿಶ್ಚಂದ್ರಾದಿಗಳು ಮಾಡಿದಾಗ ಅಂತಹ ಪ್ರಬಲ ಪ್ರತಿಸ್ಪರ್ಧಿ- ಗಳು ಇರಲಿಲ್ಲ. ಪಾಂಡವರ ದಿಗ್ವಿಜಯ ಕೇವಲ ಭರತಖಂಡಕ್ಕೆ ಸೀಮಿತವಾಗಿದೇ ಇಡೀ ಜಗತ್ತನ್ನೇ ಗೆದ್ದ ದಾಖಲೆ ಹೊಂದಿತ್ತು. ಆದರೆ, ಹರಿಶ್ಚಂದ್ರಾದಿಗಳದು ಸೀಮಿತ ದಿಗ್ವಿಜಯವಾಗಿತ್ತು. ಪಾಂಡವರ ರಾಜಸೂಯಯಾಗದಲ್ಲಿ ಶ್ರೀವೇದವ್ಯಾಸರ ನೇತೃತ್ವದಲ್ಲಿ ವಿಶ್ವದಾಖಲೆಯ ತತ್ತ್ವನಿರ್ಣಯದ ಕಥೆಗಳು ನಡೆದು ಜಗತ್ತಿನ ಯೋಗ್ಯ ಜನರಿಗೆಲ್ಲ ತತ್ತ್ವಜ್ಞಾನ ದೃಢವಾಯಿತು. ಆ ಸ್ವತಃ ರಾಜಸೂಯಯಾಗದಲ್ಲಿ ಬ್ರಹ್ಮಾದಿ ಸಕಲ ದೇವತೆಗಳೂ ಆಗಮಿಸಿದ್ದರು; ಅದರಂತೆ ಸಕಲ ಅಸುರರೂ ಸಹ. ಯಾಗ ಕಂಡು ನಲಿಯುವ ಗುರಿ ಬ್ರಹ್ಮಾದಿಗಳದಾಗಿದ್ದರೆ, ಅದನ್ನು ಕಂಡು ಈರ್ಷ್ಯೆಯಿಂದ ಕುದಿಯುವ ಗುರಿ ಅಸುರರದಾಗಿತ್ತು. ಆ ಮುನ್ನ ನಡೆದ ಹರಿಶ್ಚಂದ್ರಾದಿಗಳ ರಾಜಸೂಯಯಾಗದಲ್ಲಿ ಈ ರೀತಿ ಬ್ರಹ್ಮಾದಿಗಳು ಆಗಮಿಸಿದ್ದ ವಿವರ ಕಂಡುಬರುವುದಿಲ್ಲ; ಅವುಗಳಲ್ಲಿ ಈ ಮಟ್ಟದ ಜ್ಞಾನಕಾರ್ಯವೂ ನಡೆದಿರಲಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಪಾಂಡವರ ರಾಜಸೂಯಯಾಗದಲ್ಲಿ ಶ್ರೀವೇದವ್ಯಾಸ, ಶ್ರೀಕೃಷ್ಣ ಹಾಗೂ ಶ್ರೀಪರುಶರಾಮ ಎಂಬ ಮೂರು ರೂಪಗಳಿಂದ ಭಗವಂತನೇ ಉಪಸ್ಥಿತನಿದ್ದು ಅನುಗ್ರಹಿಸಿದ. ಶ್ರೀಕೃಷ್ಣನಿಗೆ ಅಗ್ರಪೂಜೆ ನಡೆದು ಅವನ ಪಾರಮ್ಯ ನಿರೂಪಿತವಾಗಿತ್ತು. ಪ್ರತಿ ಲಕ್ಷಜನರ ಭೋಜನ ಪೂರೈಸಿದಾಗ ಶಂಖಾನಾದ, ಘಂಟಾನಾದ ಮೊಳಗಿ ಆ ಸಂಖ್ಯೆಯನ್ನು ಸೂಚಿಸುತ್ತಿತ್ತು. ಅಂತಹ ಘಂಟಾನಾದ ಎಡೆಬಿಡದೆ ನಡೆದು ಅಲ್ಲಿ ನಡೆದ ಭೋಜನದ ಅಪಾರತೆಯನ್ನು ಸೂಚಿಸುತ್ತಿತ್ತು.

ಇಂತಹ ರಾಜಸೂಯಯಾಗದ ಯಜ್ಞಪತ್ನಿಯಾಗಿ ಕುಳಿತ ಮಹಾಭಾಗ್ಯವತಿ ದ್ರೌಪದೀ.

ಯಾಗ ಪೂರೈಸಿತು. ಅಗ್ರಪೂಜೆಗೆ ಆಕ್ಷೇಪಿಸಿ ಶ್ರೀಕೃಷ್ಣನನ್ನು ನಿಂದಿಸಿದ ಶಿಶುಪಾಲ ಶ್ರೀಕೃಷ್ಣನಿಂದ ಹತನಾದ. ಅವಭೃಥ ಸ್ನಾನವು ಸಹ ಪೂರೈಸಿ ಬಂದವರೆಲ್ಲ ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದರು.

## ಮಾತ್ಸರ್ಯದಿಂದ ಕುದಿದ ದುರ್ಯೋಧನ

ದುರ್ಯೋಧನ, ಅವನ ತಮ್ಮಂದಿರು, ಶಕುನಿ ಹಾಗೂ ಕರ್ಣ ಇವರೆಲ್ಲ ಇನ್ನೂ ಇಂದ್ರಪ್ರಸ್ಥದಲ್ಲಿಯೇ ಉಳಿದುಕೊಂಡಿದ್ದರು. ಆ ಯಾಗದ ವೈಭವವನ್ನು ಕಂಡ ಅವರಿಗೆ ಅದನ್ನು ಸಹಿಸದೆ ಏನಾದರೂ ದೋಷವನ್ನು ಹುಡುಕುವ ಉದ್ದೇಶ ಅದಕ್ಕೆ ಕಾರಣವಾಗಿತ್ತು. ಅದರಂತೆ ಅಲ್ಲಿ ನಿರ್ಮಿತವಾಗಿದ್ದ ಮಯಸಭೆಯ ವೈಖರಿ ಇನ್ನೊಂದು ಕಾರಣವಾಗಿತ್ತು. ಪಾಂಡವರ ಆ ಯಾಗದಲ್ಲಿ ಕಾಣಿಕೆಯಾಗಿ ಬಂದ ಬಗೆಬಗೆಯ ವಸ್ತುಗಳನ್ನು ಸ್ವೀಕರಿಸುವ ಕಾರ್ಯವನ್ನು ಶ್ರೀಕೃಷ್ಣನು ದುರ್ಯೋಧನನಿಗೆ ವಹಿಸಿದ್ದ. ಎರಡು ಕೈಗಳಿಂದ ಸಹ ಎಡಬಿಡದೆ ಸ್ವೀಕರಿಸುತ್ತಿದ್ದರೂ, ರಾಜಮಹಾರಾಜರು ನೀಡುತ್ತಿದ್ದ ಕಾಣಿಕೆಗಳನ್ನು ಸ್ವೀಕರಿಸಲು ದುರ್ಯೋಧನನಿಗೆ ಸಾಧ್ಯವಾಗುತ್ತಿರಲಿಲ್ಲ. ಅವರೆಲ್ಲ ಸಾಲುಸಾಲಾಗಿ ಬಂದು ಅನರ್ಘ್ಯವಾದ ಪದಾರ್ಥಗಳನ್ನು ನೀಡುತ್ತಿದ್ದುದನ್ನು ನೋಡಿದ ದುರ್ಯೋಧನ ಮಾತ್ಸರ್ಯದಿಂದ ಉರಿದು ಹೋಗಿದ್ದ. ಶ್ರೀಕೃಷ್ಣ ಅವನನ್ನು ಆ ಕಾರ್ಯಕ್ಕೆ ನಿಯೋಜಿಸಿದ್ದು ಅದಕ್ಕಾಗಿಯೇ. ಆ ಸಂಪತ್ತಿನ ರಾಶಿಯನ್ನು ಹಾಗೂ ಮಯ ನಿರ್ಮಿಸಿದ ಸಭೆಯ ವೈಭವವನ್ನು ಇನ್ನಷ್ಟು ನೋಡಲೆಂದು ಅವರೆಲ್ಲ ಹಾಗೆ ಅಲ್ಲಿಯೇ ಉಳಿದುಕೊಂಡಿದ್ದರು.

## ದುರ್ಯೋಧನನ ಅವಿವೇಕ

ಆಗೊಮ್ಮೆ ಸಭೆಯಲ್ಲಿ ಉನ್ನತವಾದ ಪೀಠದಲ್ಲಿ ಶ್ರೀಕೃಷ್ಣ ಮಂಡಿಸಿದ್ದ. ಅವನೊಂದಿಗೆ ಪಾಂಡವರು ಕುಳಿತಿದ್ದರು. ಭೀಮನ ಪಕ್ಕದಲ್ಲಿ ದ್ರೌಪದಿ ಮಂಡಿಸಿದ್ದಳು. ದುರ್ಯೋಧನ ತನ್ನ ಸೋದರರು ಮೊದಲಾದವರೊಂದಿಗೆ ಸಭೆಗೆ ಆಗಮಿಸಿದ. ಆ ಸಭಾಮಂದಿರದ ಗೋಡೆಗಳು ಸ್ಫಟಿಕದಿಂದ ನಿರ್ಮಿತವಾಗಿದ್ದವು. ಬಾಗಿಲು ಇಂದ್ರನೀಲಮಣಿಯದಾಗಿತ್ತು. ನೋಡುವವರಿಗೆ ಗೋಡೆಯು ಬಾಗಿಲಿನಂತೆ, ಬಾಗಿಲು ಗೋಡೆಯಂತೆ ಕಾಣುತ್ತಿತ್ತು. ದುರ್ಯೋಧನನು ಹಾಗೆಯೇ ಭ್ರಮಿಸಿ ಗೋಡೆಯನ್ನು ಬಾಗಿಲೆಂದು ತಿಳಿದು ಮುಖವನ್ನು ಅಪ್ಪಳಿಸಿಕೊಂಡ. ಅವನ ಅಂಧಾನುಯಾಯಿಗಳಾದ ಅವನ ಸೋದರರಿಗೂ ಅದೇ ಗತಿಯಾಯಿತು. ಸಭೆಯಲ್ಲಿದ್ದವರಿಗೆಲ್ಲ ಆ ದೃಶ್ಯ ಸ್ಪಷ್ಟವಾಗಿ ಗೋಚರಿಸಿತು. ಯುಧಿಷ್ಠಿರ ಆ ಕೂಡಲೇ [೧]ನಕುಲ-ಸಹದೇವರನ್ನು ಕಳುಹಿಸಿ ಅವರನ್ನು ಸರಿಯಾದ ದ್ವಾರದಿಂದ ಒಳಗೆ ಬರಮಾಡಿಕೊಂಡ. ಸೂಕ್ತವಾದ ಆಸನವನ್ನು ಅವರಿಗೆ ಒದಗಿಸಿದ. ಅಲ್ಲಿಯ ವೈಭವವನ್ನು ನೋಡಿ ದುರ್ಯೋಧನನಿಗೆ ಸಹಿಲಾಗಲಿಲ್ಲ. ಸ್ವಲ್ಪ ಹೊತ್ತು ಕುಳಿತಿದ್ದ ಅವನು ಅಲ್ಲಿಂದ ಎದ್ದು ಸಭೆಯನ್ನು ನೋಡುವ ನೆಪದಲ್ಲಿ ತೆರಳಿದ; ಅವನ ತಮ್ಮಂದಿರು ಅವನನ್ನು

೧ ತತ್ರ ಮಾಂ ಯಮಜೌ ದೂರಾದಾಲೋಕ್ಯಾಭಿಹತಂ ತದಾ।
ಬಾಹುಭಿಃ ಪರಿಗೃಹ್ಣೀತಾಂ ಶೋಚಂತೌ ಸಹಿತಾವುಭೌ॥ – ಮಹಾಭಾರತ (ಸಭಾ-೫೦/೩೩)

ಹಿಂಬಾಲಿಸಿದರು. ಅವರಿಗೆ ಅಲ್ಲೊಂದು ವಿಚಿತ್ರದೃಶ್ಯ ಕಾಣಿಸಿತು. ಅದ್ಭುತವಾದ ಸರೋವರ, ಅದರ ತುಂಬಾ ಅರಳಿ ನಿಂತ ಕಮಲಗಳು; ಆದರೆ ಅದು ನಿಜವಾದ ಸರೋವರವಾಗಿರಲಿಲ್ಲ, ಇಂದ್ರನೀಲಮಣಿಯ ನೆಲದ ಹಾಸಾಗಿತ್ತು; ಕಮಲಗಳು ಸಹ ರತ್ನಗಳಿಂದ ಕೆತ್ತಲ್ಪಟ್ಟಿದ್ದವು. ಅದನ್ನು ನಿಜವಾದ ಕಮಲಪುಷ್ಪಗಳ ಸರೋವರ ಎಂದೇ ಭ್ರಮಿಸಿದ ದುರ್ಯೋಧನ ತನ್ನ ವಸ್ತ್ರವನ್ನು ಮೇಲೆತ್ತಿಕೊಂಡು ಅದರ ಮೇಲೆ ನಿಧಾನವಾಗಿ ಸಾಗಿದ. ಆಗಲೇ ಅವನಿಗೆ ತಿಳಿದದ್ದು, ಅದು ಜಲವಲ್ಲ ನೆಲ ಎಂದು.

ತನ್ನ ಅವಿವೇಕಕ್ಕೆ ನಾಚಿ ಮುಂದೆ ಸಾಗಿದ. ಮುಂದೆ ಒಂದೆಡೆಯಲ್ಲಿ ನಿಜವಾದ ಕಮಲಪುಷ್ಪಗಳ ಸರೋವರವೇ ಇತ್ತು. ಹಿಂದಿನ ಅನುಭವವನ್ನು ಆಧರಿಸಿ ದುರ್ಯೋಧನ, ಅದು ಜಲವಲ್ಲ ನೆಲವೆಂದು ತೀರ್ಮಾನ ಮಾಡಿಕೊಂಡು ಸರಸರನೆ ನಡೆದ, ಕೂಡಲೇ ಆ ನೀರಲ್ಲಿ ಬಿದ್ದ. ಅವನ ತಮ್ಮಂದಿರ ಸ್ಥಿತಿಯೂ ಅದೇ ಆಯಿತು. 'ಅಂಧೇನೈವ ನೀಯಮಾನಾ ಯಥಾಽಂಧಾಃ' ಎಂಬ ಉಪನಿಷದ್ವಾಣಿ ಅವರ ವಿಷಯದಲ್ಲಿ ಪೂರ್ಣ ಸತ್ಯವಾಗಿತ್ತು. ಅವನ ಆ ಸ್ಥಿತಿ ಸಭೆಯಲ್ಲಿದ್ದವರಿಗೆಲ್ಲ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಮಯ ಸಭೆಯ ರಚನಾವಿಧಾನವೇ ಹಾಗಿತ್ತು. ಇಂದಿನ ಸಿ.ಸಿ.ಟಿ.ವಿ ಕ್ಯಾಮರಾದ ಪರಿಕಲ್ಪನೆ ಇರುವವರಿಗೆ ಇದು ಅರ್ಥವಾಗುವ ವಿಷಯ. ದುರ್ಯೋಧನ ಆ ಮುನ್ನ ಎರಡು ಬಾರಿ ಭ್ರಮಿಸಿದಾಗಲು ಅದಕ್ಕೆ ಪ್ರತಿಕ್ರಿಯಿಸದೇ ಇದ್ದ ಭೀಮಾದಿಗಳು ಈಗ ಅವನ ಪಡಿಪಾಟಲನ್ನು ಕಂಡು ಗಹಗಹಿಸಿ ನಕ್ಕರು. ಶ್ರೀಕೃಷ್ಣ ನೀಡಿದ ಸೂಚನೆಯು ಭೀಮನ ಆ ವರ್ತನೆಗೆ ಕಾರಣವಾಗಿತ್ತು[೧]. ಆ ಪ್ರಸಂಗವನ್ನು ಭೂಭಾರಹರಣಕ್ಕೆ ನಾಂದಿ ಮಾಡುವ ಸಂಕಲ್ಪದಿಂದಾಗಿ ಶ್ರೀಕೃಷ್ಣ ಹಾಗೆ ಸೂಚನೆ [೨]ನೀಡಿದ್ದ. ಭೀಮನ ಸಿಂಹಗರ್ಜನೆಯಂತಹ ನಗುವಿಗೆ ದ್ರೌಪದಿಯ ನಗುವೂ ಸೇರಿಕೊಂಡಿತು[೩]. ಕೃಷ್ಣಪತ್ನಿಯರು ಸಹ ಜೋರಾಗಿ ನಕ್ಕುಬಿಟ್ಟರು. ಅದೆಲ್ಲ ದುರ್ಯೋಧನನ ಕಿವಿಗೆ ಬಿದ್ದಿತು. ಅವನಿಗೆ ಬಿದ್ದ ಪೆಟ್ಟಿನ ನೋವು ಒಂದೆಡೆಯಾದರೆ, ಅದನ್ನು ಇತರರು ನೋಡಿದರು ಎಂಬ ನೋವು ಇನ್ನೊಂದಾಯಿತು. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಪರಮವೈರಿಗಳೆನ್ನಿಸಿದ ಭೀಮ-ದ್ರೌಪದಿಯರು ನಕ್ಕಿದ್ದಂತು ಅವನಿಗೆ ನುಂಗಲಾರದ ತುತ್ತಾಯಿತು. ಅವನು ಕೋಪದಿಂದ ಕೆರಳಿ ಅಲ್ಲಿಂದ ಹೊರಕ್ಕೆ ನಡೆದ. ಆ

---

೧ ವಸ್ತ್ರಮುತ್ಕರ್ಷತಿ ಮಯಿ ಪ್ರಾಹಸತ್ ಸ ವೃಕೋದರಃ। - ಮಹಾಭಾರತ (ಸಭಾ-೫೦/೨೬)

೨ ಜಹಾಸ ಭೀಮಸ್ತಂ ದೃಷ್ಟ್ವಾ ಸ್ತ್ರಿಯೋ ಭೂಪಾಶ್ಚ ಕೇಚನ।
ನಿವಾರ್ಯಮಾಣಾ ಅಪ್ಯಂಗ ರಾಜ್ಞಾ ಕೃಷ್ಣಾನುಮೋದಿತಾಃ॥ -ಶ್ರೀಮದ್ಭಾಗವತ (೧೦/೮೪/೪)
ತಂ ಪ್ರಾಹಸದ್ಭಗವತಾ ಕ್ಷಿತಿಭಾರನಾಶಹೇತೋಃ ಸುಸೂಚಿತ ಉರುಸ್ವರತೋಽತ್ರ ಭೀಮಃ।
ಪಾಂಚಾಲರಾಜಸುತಯಾ ಚ ಸಮಂ ತಥಾಽನ್ಯೈಃ ಸ್ತ್ರೀಯೈಸ್ತಥಾಽನು ಜಹಸುರ್ಭಗವನ್ಮಹಿಷ್ಯಃ ॥
-ಮ.ಭಾ.ತಾ.ನಿ.(೨೧/೧೮೧)

೩. ತತ್ರ ಮಾಂ ಪ್ರಾಹಸತ್ ಕೃಷ್ಣಃ ಪಾರ್ಥೇನ ಸಹ ಸುಸ್ವರಮ್।
ದ್ರೌಪದೀ ಚ ಸಹ ಸ್ತ್ರೀಭಿರ್ವ್ಯಥಯಂತೀ ಮನೋ ಮಮ॥ - ಮಹಾಭಾರತ (ಸಭಾ-೫೦/೩೦)

ವೇಳೆಗೆ ಯುಧಿಷ್ಠಿರ ಅವರೆಲ್ಲರಿಗಾಗಿ ಹೊಸ ವಸ್ತ್ರಗಳನ್ನು ಕಳುಹಿಸಿಕೊಟ್ಟು ಸಾಂತ್ವನಗೈಯುವ ಪ್ರಯತ್ನ ನಡೆಸಿದ[೧]. ದುರ್ಯೋಧನ ಅವನ್ನೆಲ್ಲ ಧಿಕ್ಕರಿಸಿ ಹಸ್ತಿನಾಪುರದತ್ತ ತೆರಳಿಬಿಟ್ಟ.

ಈ ಪ್ರಸಂಗವನ್ನು ಆಧುನಿಕರು ತಪ್ಪಾಗಿ ವಿಮರ್ಶಿಸುತ್ತಾ ಹೀಗೆನ್ನುವರು. ಭೀಮನ ನಗು ಅದರಲ್ಲಿಯೂ ದ್ರೌಪದಿಯ ನಗು ಇಲ್ಲಿ ಅಪ್ರಸ್ತುತವಾಗಿತ್ತು. ಅದರಿಂದ ಕೆರಳಿದ ದುರ್ಯೋಧನ ಸೇಡು ತೀರಿಸಿಕೊಳ್ಳಲೆಂದು ದ್ಯೂತದ ಸಭೆಯಲ್ಲಿ ಪಾಂಡವರನ್ನು ಅವಮಾನಿಸಿದ, ದ್ರೌಪದಿಯ ವಸ್ತ್ರಾಪಹರಣಕ್ಕೂ ಪ್ರಯತ್ನಿಸಿದ ಎಂಬುದು ಅವರ ವಾದ. ಅದು ಸರಿಯಲ್ಲ.

ಈ ಮೊದಲೇ ತಿಳಿಸಿದಂತೆ ದುರ್ಯೋಧನ ಮೂರನೇ ಬಾರಿಗೆ ತೋರಿದ ಅವಿವೇಕದ ಪ್ರಸಂಗ ಅದಾಗಿತ್ತು. ಹಾಗೆ ಪುನಃ ಪುನಃ ನಗೆಪಾಟಲಿಗೆ ಗುರಿಯಾಗುತ್ತಿದ್ದ ಅವನ ಬಗ್ಗೆ ನಗುವುದರಲ್ಲಿ ಯಾವ ಅಪಚಾರವೂ ಇಲ್ಲ. ಒಬ್ಬ ಕುರುಡ ದಾರಿ ಕಾಣದೆ ಬಿದ್ದಾಗ ನಗುವುದು ಸಭ್ಯತೆ ಎನ್ನಿಸದು. ಆದರೆ, ಎರಡೂ ಕಣ್ಣುಗಳು ಸ್ಪಷ್ಟವಾಗಿ ಕಾಣುವ ದೃಢಕಾಯದ ಯುವಕನೊಬ್ಬ ಎತ್ತಲೋ ಗಮನಹರಿಸಿ ಬಿದ್ದರೆ ಅದು ಹಾಸ್ಯಾಸ್ಪದ ವಿಷಯವೇ ಆಗುವುದು. ದುರ್ಯೋಧನನ ರೀತಿ ಈ ತೆರನಾಗಿತ್ತು. ಯುಧಿಷ್ಠಿರ ಎಚ್ಚರಿಸಿದ್ದರೂ ಅದನ್ನು ತಿರಸ್ಕರಿಸಿ ತನ್ನ ಅವಿವೇಕವನ್ನು ತೋರಿಸಿ ನಗೆಪಾಟಲಿಗೆ ಗುರಿಯಾಗಿದ್ದು ಅವನ ತಪ್ಪೇ ಹೊರತು ಅದರ ಬಗ್ಗೆ ನಕ್ಕ ಭೀಮ-ದ್ರೌಪದಿಯರದಲ್ಲ. ನಗಕೂಡದ್ದಕ್ಕೆ ನಗುವುದು ಹೇಗೆ ಅನುಚಿತವೋ, ನಗಬೇಕಾದ್ದಕ್ಕೆ ನಗದೇ ಇರುವುದು ಸಹ ಅನುಚಿತವೇ ಸರಿ. ನಿಜಕ್ಕೂ ಇಲ್ಲಿ ತಪ್ಪಿತಸ್ಥನಾದವನು ತನ್ನ ಮೂರ್ಖತನವನ್ನು ಪುನರಾವರ್ತಿಸುತ್ತಾ ನಡೆದ ದುರ್ಯೋಧನನೇ ಹೊರತು ನಕ್ಕ ಭೀಮ-ದ್ರೌಪದಿಯರಲ್ಲ. ಸಕಾರಣವಾಗಿ ನಕ್ಕಾಗಲೂ ಅದನ್ನು ಅಪಾರ್ಥ ಮಾಡಿಕೊಂಡು ಸೇಡು ತೀರಿಸಿಕೊಳ್ಳಲು ಹೊರಟ ದುರ್ಯೋಧನನ ರೀತಿ ಮಾತ್ರ ಸರ್ವಥಾ ಪ್ರಶಸ್ತವಾದುದಲ್ಲ. ಅದರ ಫಲವಾಗಿಯೇ ಮುಂದೆ ಅವನು ಸರ್ವನಾಶಕ್ಕೆ ಗುರಿಯಾದ.

## ದ್ಯೂತಸಭೆಯಲ್ಲಿ ದ್ರೌಪದಿ

ಭೀಮ-ದ್ರೌಪದಿಯರ ಮೇಲಿನ ಸೇಡಿಗೆಂದು ದುರ್ಯೋಧನ ಯೋಜಿಸಿದ್ದು ದ್ಯೂತವನ್ನು. ಕಲಿಯಾದ ಅವನಿಗೆ ದ್ಯೂತವೇ ಮೊದಲ [೨]ನೆಲೆ. ಶಕುನಿ ಆ ಯೋಜನೆಯ

---

೧ ಕ್ಲಿನ್ನ ವಸ್ತ್ರಸು ತು ಜಲೇ ಕಿಂಕರಾ ರಾಜನೋದಿತಾಃ।
ದದುರ್ವಾಸಾಂಸಿ ಮೇऽನ್ಯಾನಿ ತಚ್ಚ ದುಃಖಂ ಪರಂ ಮಮ ॥– ಮಹಾಭಾರತ (ಸಭಾ–೫೦/೩೧)

೨ ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ।
ಪುನಶ್ಚ ಯಾಚಮಾನಾಯ ಜಾತರೂಪಮದಾತ್ ಪ್ರಭುಃ॥
ತತೋऽನೃತಂ ಮದಃ ಕಾಮೋ ರಜೋ ವೈರಂ ಚ ಪಂಚಮಮ್।
ಅಮೂನಿ ಪಂಚಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ॥ – ಭಾಗವತ (೧/೧೭/೩೮,೩೯)

ಹಿಂಬಾಲಿಸಿದರು. ಅವರಿಗೆ ಅಲ್ಲೊಂದು ವಿಚಿತ್ರದೃಶ್ಯ ಕಾಣಿಸಿತು. ಅದ್ಭುತವಾದ ಸರೋವರ, ಅದರ ತುಂಬಾ ಅರಳಿ ನಿಂತ ಕಮಲಗಳು; ಆದರೆ ಅದು ನಿಜವಾದ ಸರೋವರವಾಗಿರಲಿಲ್ಲ, ಇಂದ್ರನೀಲಮಣಿಯ ನೆಲದ ಹಾಸಾಗಿತ್ತು; ಕಮಲಗಳು ಸಹ ರತ್ನಗಳಿಂದ ಕೆತ್ತಲ್ಪಟ್ಟಿದ್ದವು. ಅದನ್ನು ನಿಜವಾದ ಕಮಲಪುಷ್ಪಗಳ ಸರೋವರ ಎಂದೇ ಭ್ರಮಿಸಿದ ದುರ್ಯೋಧನ ತನ್ನ ವಸ್ತ್ರವನ್ನು ಮೇಲೆತ್ತಿಕೊಂಡು ಅದರ ಮೇಲೆ ನಿಧಾನವಾಗಿ ಸಾಗಿದ. ಆಗಲೇ ಅವನಿಗೆ ತಿಳಿದದ್ದು ಅದು ಜಲವಲ್ಲ ನೆಲ ಎಂದು.

ತನ್ನ ಅವಿವೇಕಕ್ಕೆ ನಾಚಿ ಮುಂದೆ ಸಾಗಿದ. ಮುಂದೆ ಒಂದೆಡೆಯಲ್ಲಿ ನಿಜವಾದ ಕಮಲಪುಷ್ಪಗಳ ಸರೋವರವೇ ಇತ್ತು. ಹಿಂದಿನ ಅನುಭವವನ್ನು ಆಧರಿಸಿ ದುರ್ಯೋಧನ, ಅದು ಜಲವಲ್ಲ ನೆಲವೆಂದು ತೀರ್ಮಾನ ಮಾಡಿಕೊಂಡು ಸರಸರನೆ ನಡೆದ, ಕೂಡಲೇ ಆ ನೀರಲ್ಲಿ ಬಿದ್ದ. ಅವನ ತಮ್ಮಂದಿರ ಸ್ಥಿತಿಯೂ ಅದೇ ಆಯಿತು. 'ಅಂಧೇನೈವ ನೀಯಮಾನಾ ಯಥಾಽಂಧಾಃ' ಎಂಬ ಉಪನಿಷದ್ವಾಣಿ ಅವರ ವಿಷಯದಲ್ಲಿ ಪೂರ್ಣ ಸತ್ಯವಾಗಿತ್ತು. ಅವನ ಆ ಸ್ಥಿತಿ ಸಭೆಯಲ್ಲಿದ್ದವರಿಗೆಲ್ಲ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಮಯ ಸಭೆಯ ರಚನಾವಿಧಾನವೇ ಹಾಗಿತ್ತು. ಇಂದಿನ ಸಿ.ಸಿ.ಟಿ.ವಿ ಕ್ಯಾಮರಾದ ಪರಿಕಲ್ಪನೆ ಇರುವವರಿಗೆ ಇದು ಅರ್ಥವಾಗುವ ವಿಷಯ. ದುರ್ಯೋಧನ ಆ ಮುನ್ನ ಎರಡು ಬಾರಿ ಭ್ರಮಿಸಿದಾಗಲು ಅದಕ್ಕೆ ಪ್ರತಿಕ್ರಿಯಿಸದೇ ಇದ್ದ ಭೀಮಾದಿಗಳು ಈಗ ಅವನ ಪಡಿಪಾಟಲನ್ನು ಕಂಡು ಗಹಗಹಿಸಿ ನಕ್ಕರು. ಶ್ರೀಕೃಷ್ಣ ನೀಡಿದ ಸೂಚನೆಯು ಭೀಮನ ಆ ವರ್ತನೆಗೆ ಕಾರಣವಾಗಿತ್ತು[೧]. ಆ ಪ್ರಸಂಗವನ್ನು ಭೂಭಾರಹರಣಕ್ಕೆ ನಾಂದಿ ಮಾಡುವ ಸಂಕಲ್ಪದಿಂದಾಗಿ ಶ್ರೀಕೃಷ್ಣ ಹಾಗೆ ಸೂಚನೆ [೨]ನೀಡಿದ್ದ. ಭೀಮನ ಸಿಂಹಗರ್ಜನೆಯಂತಹ ನಗುವಿಗೆ ದ್ರೌಪದಿಯ ನಗುವೂ ಸೇರಿಕೊಂಡಿತು[೩]. ಕೃಷ್ಣಪತ್ನಿಯರು ಸಹ ಜೋರಾಗಿ ನಕ್ಕುಬಿಟ್ಟರು. ಅದೆಲ್ಲ ದುರ್ಯೋಧನನ ಕಿವಿಗೆ ಬಿದ್ದಿತು. ಅವನಿಗೆ ಬಿದ್ದ ಪೆಟ್ಟಿನ ನೋವು ಒಂದೆಡೆಯಾದರೆ, ಅದನ್ನು ಇತರರು ನೋಡಿದರು ಎಂಬ ನೋವು ಇನ್ನೊಂದಾಯಿತು. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಪರಮವೈರಿಗಳೆನ್ನಿಸಿದ ಭೀಮ-ದ್ರೌಪದಿಯರು ನಕ್ಕಿದ್ದಂತು ಅವನಿಗೆ ನುಂಗಲಾರದ ತುತ್ತಾಯಿತು. ಅವನು ಕೋಪದಿಂದ ಕೆರಳಿ ಅಲ್ಲಿಂದ ಹೊರಕ್ಕೆ ನಡೆದ. ಆ

---

೧ ವಸ್ತ್ರಮುತ್ಕರ್ಷತಿ ಮಯಿ ಪ್ರಾಹಸತ್ ಸ ವೃಕೋದರಃ। – ಮಹಾಭಾರತ (ಸಭಾ-೫೦/೨೬)

೨ ಜಹಾಸ ಭೀಮಸ್ತಂ ದೃಷ್ಟ್ವಾ ಸ್ತ್ರಿಯೋ ಭೂಪಾಶ್ಚ ಕೇಚನ।
ನಿವಾರ್ಯಮಾಣಾ ಅಪ್ಯಂಗ ರಾಜ್ಞಾ ಕೃಷ್ಣಾನುಮೋದಿತಾಃ॥ –ಶ್ರೀಮದ್ಭಾಗವತ (೧೦/೮೪/೪)
ತಂ ಪ್ರಾಹಸದ್ಭಗವತಾ ಕ್ಷಿತಿಭಾರನಾಶಹೇತೋಃ ಸುಸೂಚಿತ ಉರುಸ್ವರತೋಽತ್ರ ಭೀಮಃ।
ಪಾಂಚಾಲರಾಜಸುತಯಾ ಚ ಸಮಂ ತಥಾಽನ್ಯೈಃ ಸ್ತ್ರೀಯೈಸ್ತಥಾಽನು ಜಹಸುರ್ಭಗವನ್ಮಹಿಷ್ಯಃ ॥
–ಮ.ಭಾ.ತಾ.ನಿ.(೨೧/೧೮೧)

೩. ತತ್ರ ಮಾಂ ಪ್ರಾಹಸತ್ ಕೃಷ್ಣಃ ಪಾರ್ಥೇನ ಸಹ ಸುಸ್ವರಮ್।
ದ್ರೌಪದೀ ಚ ಸಹ ಸ್ತ್ರೀಭಿರ್ವ್ಯಥಯಂತೀ ಮನೋ ಮಮ॥ – ಮಹಾಭಾರತ (ಸಭಾ-೫೦/೩೦)

ವೇಳೆಗೆ ಯುಧಿಷ್ಠಿರ ಅವರೆಲ್ಲರಿಗಾಗಿ ಹೊಸ ವಸ್ತ್ರಗಳನ್ನು ಕಳುಹಿಸಿಕೊಟ್ಟು ಸಾಂತ್ವನಗೈಯುವ ಪ್ರಯತ್ನ ನಡೆಸಿದ[೧]. ದುರ್ಯೋಧನ ಅವನ್ನೆಲ್ಲ ಧಿಕ್ಕರಿಸಿ ಹಸ್ತಿನಾಪುರದತ್ತ ತೆರಳಿಬಿಟ್ಟ.

ಈ ಪ್ರಸಂಗವನ್ನು ಆಧುನಿಕರು ತಪ್ಪಾಗಿ ವಿಮರ್ಶಿಸುತ್ತಾ ಹೀಗೆನ್ನುವರು. ಭೀಮನ ನಗು ಅದರಲ್ಲಿಯೂ ದ್ರೌಪದಿಯ ನಗು ಇಲ್ಲಿ ಅಪ್ರಸ್ತುತವಾಗಿತ್ತು. ಆದರಿಂದ ಕೆರಳಿದ ದುರ್ಯೋಧನ ಸೇಡು ತೀರಿಸಿಕೊಳ್ಳಲೆಂದು ದ್ಯೂತದ ಸಭೆಯಲ್ಲಿ ಪಾಂಡವರನ್ನು ಅವಮಾನಿಸಿದ, ದ್ರೌಪದಿಯ ವಸ್ತ್ರಾಪಹರಣಕ್ಕೂ ಪ್ರಯತ್ನಿಸಿದ ಎಂಬುದು ಅವರ ವಾದ. ಅದು ಸರಿಯಲ್ಲ.

ಈ ಮೊದಲೇ ತಿಳಿಸಿದಂತೆ ದುರ್ಯೋಧನ ಮೂರನೇ ಬಾರಿಗೆ ತೋರಿದ ಅವಿವೇಕದ ಪ್ರಸಂಗ ಅದಾಗಿತ್ತು. ಹಾಗೆ ಪುನಃ ಪುನಃ ನಗೆಪಾಟಲಿಗೆ ಗುರಿಯಾಗುತ್ತಿದ್ದ ಅವನ ಬಗ್ಗೆ ನಗುವುದರಲ್ಲಿ ಯಾವ ಅಪಚಾರವೂ ಇಲ್ಲ. ಒಬ್ಬ ಕುರುಡ ದಾರಿ ಕಾಣದೆ ಬಿದ್ದಾಗ ನಗುವುದು ಸಭ್ಯತೆ ಎನ್ನಿಸದು. ಆದರೆ, ಎರಡೂ ಕಣ್ಣುಗಳು ಸ್ಪಷ್ಟವಾಗಿ ಕಾಣುವ ದೃಢಕಾಯದ ಯುವಕನೊಬ್ಬ ಎತ್ತಲೋ ಗಮನಹರಿಸಿ ಬಿದ್ದರೆ ಅದು ಹಾಸ್ಯಾಸ್ಪದ ವಿಷಯವೇ ಆಗುವುದು. ದುರ್ಯೋಧನನ ರೀತಿ ಈ ತೆರನಾಗಿತ್ತು. ಯುಧಿಷ್ಠಿರ ಎಚ್ಚರಿಸಿದ್ದರೂ ಅದನ್ನು ತಿರಸ್ಕರಿಸಿ ತನ್ನ ಅವಿವೇಕವನ್ನು ತೋರಿಸಿ ನಗೆಪಾಟಲಿಗೆ ಗುರಿಯಾಗಿದ್ದು ಅವನ ತಪ್ಪೇ ಹೊರತು ಅದರ ಬಗ್ಗೆ ನಕ್ಕ ಭೀಮ-ದ್ರೌಪದಿಯರದಲ್ಲ. ನಗಕೂಡದ್ದಕ್ಕೆ ನಗುವುದು ಹೇಗೆ ಅನುಚಿತವೋ, ನಗಬೇಕಾದ್ದಕ್ಕೆ ನಗದೇ ಇರುವುದು ಸಹ ಅನುಚಿತವೇ ಸರಿ. ನಿಜಕ್ಕೂ ಇಲ್ಲಿ ತಪ್ಪಿತಸ್ಥನಾದವನು ತನ್ನ ಮೂರ್ಖತನವನ್ನು ಪುನರಾವರ್ತಿಸುತ್ತಾ ನಡೆದ ದುರ್ಯೋಧನನೇ ಹೊರತು ನಕ್ಕ ಭೀಮ-ದ್ರೌಪದಿಯರಲ್ಲ. ಸಕಾರಣವಾಗಿ ನಕ್ಕಾಗಲೂ ಅದನ್ನು ಅಪಾರ್ಥ ಮಾಡಿಕೊಂಡು ಸೇಡು ತೀರಿಸಿಕೊಳ್ಳಲು ಹೊರಟ ದುರ್ಯೋಧನನ ರೀತಿ ಮಾತ್ರ ಸರ್ವಥಾ ಪ್ರಶಸ್ತವಾದುದಲ್ಲ. ಆದರ ಫಲವಾಗಿಯೇ ಮುಂದೆ ಅವನು ಸರ್ವನಾಶಕ್ಕೆ ಗುರಿಯಾದ.

## ದ್ಯೂತಸಭೆಯಲ್ಲಿ ದ್ರೌಪದಿ

ಭೀಮ-ದ್ರೌಪದಿಯರ ಮೇಲಿನ ಸೇಡಿಗೆಂದು ದುರ್ಯೋಧನ ಯೋಜಿಸಿದ್ದು ದ್ಯೂತವನ್ನು. ಕಲಿಯಾದ ಅವನಿಗೆ ದ್ಯೂತವೇ ಮೊದಲ [೨]ನೆಲೆ. ಶಕುನಿ ಆ ಯೋಜನೆಯ

---

೧ ಕ್ಲಿನ್ನ ವಸ್ತ್ರಸು ತು ಜಲೇ ಕಿಂಕರಾ ರಾಜನೋದಿತಾಃ।
ದದುರ್ವಾಸಾಂಸಿ ಮೇಽನ್ಯಾನಿ ತಚ್ಚ ದುಃಖಂ ಪರಂ ಮಮ ॥- ಮಹಾಭಾರತ (ಸಭಾ-೫೦/೩೧)

೨ ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ।
ಪುನಶ್ಚ ಯಾಚಮಾನಾಯ ಜಾತರೂಪಮದಾತ್ ಪ್ರಭುಃ ॥
ತತೋಽನೃತಂ ಮದಃ ಕಾಮೋ ರಜೋ ವೈರಂ ಚ ಪಂಚಮಮ್।
ಅಮೂನಿ ಪಂಚಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ ॥ - ಭಾಗವತ (೧/೧೭/೩೭,೩೮)

ಸೂತ್ರಧಾರ. ಆದ್ದರಿಂದ ಅದು ಬರಿ ದ್ಯೂತವಾಗದೇ ದುರ್ದ್ಯೂತವಾಯಿತು. ಪುತ್ರವ್ಯಾಮೋಹದಿಂದಾಗಿ ದುರ್ಯೋಧನನ ಯೋಜನೆಯನ್ನು ಧೃತರಾಷ್ಟ್ರ ಒಪ್ಪಿದ; ವಿದುರ ತಡೆದರೂ ಕೇಳದೆ ಅವನ ಮೂಲಕವೇ ಯುಧಿಷ್ಠಿರನನ್ನು ದ್ಯೂತಕ್ಕೆ ಆಹ್ವಾನಿಸಿದ. ಭೀಮ, ದ್ರೌಪದೀ ಮೊದಲಾದ ಯಾರ ಮಾತನ್ನು ಕೇಳದೆ ಯುಧಿಷ್ಠಿರ ಆಹ್ವಾನವನ್ನು ಒಪ್ಪಿಕೊಂಡ. ಅದಕ್ಕೆ ತಾನು ಮಾಡಿದ್ದ ಪ್ರತಿಜ್ಞೆಯೊಂದರ ಕಾರಣವನ್ನು ಮುಂದಿಟ್ಟ. ಮಹಾರಾಣಿಯಾಗಿ ದ್ರೌಪದೀ ಸೂಕ್ತಸಲಹೆಯನ್ನು ನೀಡುವ ಮೂಲಕ ಅವನನ್ನು ತಡೆದಳು. ಆದರೆ, ಕಲ್ಯಾವೇಶಕ್ಕೆ ಒಳಗಾಗಿದ್ದ ಯುಧಿಷ್ಠಿರ ತನ್ನ ಹಠವನ್ನು ಬಿಡದಾದ.

ಕೊನೆಗೂ ದ್ಯೂತ ನಡೆದು ಯುಧಿಷ್ಠಿರ ರಾಜ್ಯ, ಕೋಶ ಕೊನೆಗೆ ತಮ್ಮಂದಿರು[೧]ಹಾಗೂ ದ್ರೌಪದೀ[೨] ಮತ್ತು ತನ್ನನ್ನು ಸಹ ಪಣವಾಗಿಟ್ಟು ಸರ್ವಸ್ವವನ್ನೂ ಸೋತ.

ದುರ್ಯೋಧನನ ಆಸುರೀಪ್ರವೃತ್ತಿ ಹುಚ್ಚೆದ್ದು ಕುಣಿಯಿತು. ದ್ರೌಪದಿಯನ್ನು ಸಭೆಗೆ ಕರೆಸಿ ಅವಮಾನಿಸುವ ಹುಂಬತನಕ್ಕೆ ಕೈಹಾಕಿದ. ಮೊದಲು ಪ್ರಾತಿಕಾಮಿಯ ಮೂಲಕ ದ್ರೌಪದಿಯನ್ನು ಸಭೆಗೆ ಆಹ್ವಾನಿಸಿದ. ಆದರೆ ದ್ರೌಪದೀ ಕೇಳಿದ ಧಾರ್ಮಿಕ ಪ್ರಶ್ನೆಗೆ ಉತ್ತರ ನೀಡಲಾಗದೆ ಪ್ರಾತಿಕಾಮಿ ಹಿಂದಿರುಗಿದ. ಬಳಿಕ ಅವನು ದುಃಶಾಸನನ್ನು ಕಳುಹಿಸಿದ. ದ್ರೌಪದಿಯು ತಾನು ರಜಸ್ವಲೆ, ಏಕವಸ್ತ್ರಧಾರಿಣೀ, ಗುರುಹಿರಿಯರ ಉಪಸ್ಥಿತಿ ಇರುವ

೧ ಭೀಮಾದಿಭಿಃ ಸ ವಿದುರೇಣ ಚ ವಾರ್ಯಮಾಣೋ
ದ್ಯೂತೇ ನಿಧಾಯ ಪಣಮಪ್ಯಖಿಲಂ ಸ್ವವಿತ್ತಮ್ ।
ಗಾಂಧಾರಕೇಣ ವಿದಿತಾಕ್ಷಹೃದಾ ಜಿತೋ ದ್ರಾಕ್
ಪಾಂಡೋಃ ಸುತೋಽಥ ನಕುಲಂ ನ್ಯದಧಾತ್ ಪಣಾಯ ॥
ತಸ್ಮಿನ್ ಜಿತೇಽಥ ಸಹದೇವಮಥಾರ್ಜುನಂ ಚ
ಭೀಮಂ ಚ ಸೋಮಕಸುತಾಂ ಸ್ವಮಪಿ ಕ್ರಮೇಣ ।
ರಾಜಾ ನಿಧಾಯ ವಿಜಿತೋಽಥ ಸುಯೋಧನಃ ಸ್ವಂ
ಸೂತಂ ದಿದೇಶ ಪೃಷತಾತ್ಮಜಪುತ್ರಿಕಾಯಾಃ ॥ -ಮ.ಭಾ.ತಾ.ನಿ.(೨೧/೩೯,೩೨೦)

೨ ಪಾಂಡವರಿಗೆ ಇತರ ಪತ್ನಿಯರು ಇದ್ದರು. ಸ್ವತಃ ಯುಧಿಷ್ಠಿರನಿಗೂ ದೇವಕೀ ಎಂಬ ಮತ್ತೊಬ್ಬ ಪತ್ನಿಯೂ ಇದ್ದಳು. ಹಾಗಿದ್ದರೂ ದ್ರೌಪದಿಯನ್ನು ಮಾತ್ರ ಪಣಕ್ಕಿಡಲು ಕಾರಣವೇನು? ಎಂಬ ಪ್ರಶ್ನೆಗೆ ಇಲ್ಲಿ ಅವಕಾಶವಿದೆ. ಇದಕ್ಕೆ ಆಧುನಿಕರು ದ್ರೌಪದಿಯ ಬಗ್ಗೆ ಯುಧಿಷ್ಠಿರನಿಗಿದ್ದ ಅಸಡ್ಡೆಯೇ ಕಾರಣ ಎಂಬ ಉತ್ತರ ನೀಡುತ್ತಾರೆ. ಅದು ಸರಿಯಲ್ಲ. ಹಾಗೆ ಇತರ ಪತ್ನಿಯರು ಇದ್ದರು ಸಹ ದ್ರೌಪದಿಯು ಸಾಮಾನ್ಯಸ್ತ್ರೀಯಾಗಿರದೇ, ಯುಧಿಷ್ಠಿರನ ಪಟ್ಟಮಹಿಷಿಯಾಗಿದ್ದಳು. ಭೀಮಪತ್ನಿಯಾಗಿ ಯುವ-ರಾಣಿಯೂ ಆಗಿದ್ದಳು; ರಾಜಸೂಯಯಾಗದಲ್ಲಿ ಯಜ್ಞಪತ್ನಿಯೂ ಆಗಿದ್ದಳು. ಎಂದರೆ, ಪಾಂಡವರ ಪತ್ನಿಯರಲ್ಲಿ ದ್ರೌಪದಿಯದೇ ಅಗ್ರಸ್ಥಾನ. ಆದ್ದರಿಂದ ಅವಳೊಬ್ಬಳನ್ನು ಪಣಕ್ಕಿರಿಸಿದರೆ ಇಡೀ ಪಾಂಡವಪತ್ನೀವೃಂದಕ್ಕೆ ಆಗುವ ಪರಾಭವ ಎಂದು ಭಾವಿಸಿ ದ್ರೌಪದಿಯನ್ನೇ ಪಣಕ್ಕಿಡುವ ಸಲಹೆಯನ್ನು ಶಕುನಿ ನೀಡಿದ. ಯುಧಿಷ್ಠಿರ ಅದನ್ನು ಪಾಲಿಸಿದ ಎಂದು ತಿಳಿಯಬೇಕು.

ಸಭೆಗೆ ತಾನು ಬರುವುದು ತರವಲ್ಲ ಎಂದು ಬಗೆಬಗೆಯಾಗಿ ತಿಳಿಸಿದರೂ ಸಹ ಆ ಪಾಪಿಯು ಕೇಳದೆ ಅವಳ ಮುಡಿಯನ್ನು ಹಿಡಿದು ಸಭೆಗೆ ಎಳೆದು ತಂದ.

ಈ ಪ್ರಸಂಗದಲ್ಲಿ ನಡೆದ ದ್ರೌಪದಿಯ ಪರಿಭವ ಮೊದಲಾದವುಗಳೆಲ್ಲ ಅವಳ ದೇಹದಲ್ಲಿದ್ದ ಶಚೀ ಮೊದಲಾದ ಇತರ ದೇವತಾ ಸ್ತ್ರೀಯರಿಗೆ ಎಂದು ತಿಳಿಯಬೇಕು. ಅದು ಬ್ರಹ್ಮದೇವರಿಂದ ಅವರಿಗೆ ಬಂದಿದ್ದ ಪರಪುರುಷನ ವಶವಾಗಬೇಕು ಎಂಬ ಶಾಪದ ಫಲ ಎಂದು ತಿಳಿಯಬೇಕು.

ಮುಖ್ಯವಾಗಿ ಕಲ್ಯಾವೇಶರಹಿತರಾದ ವಾಯುದೇವರ ಪತ್ನಿಯಾದ ಭಾರತೀದೇವಿಗೆ ಕಲಿ ಮೊದಲಾದ ಯಾವುದೇ ದೈತ್ಯರಿಂದಲೂ, ಯಾವುದೇ ಬಗೆಯ ಪರಿಭವಕ್ಕೂ ಸ್ವಲ್ಪಮಾತ್ರವೂ ಅವಕಾಶ ಸರ್ವಥಾ ಇಲ್ಲ ಎಂಬುದು ಮುಖ್ಯತತ್ತ್ವ. ವಾಯುದೇವರು ಆಖಣಾಶ್ಮಸಮರಾಗಿರುವಂತೆ ಭಾರತೀ ಮೊದಲಾದ ಸಮಸ್ತ ಸ್ತ್ರೀಋಜುಗಳು ಸಹ ಆಖಣಾಶ್ಮಸಮರೇ ಆಗಿರುವರು ಎಂಬುದನ್ನು ಮರೆಯಕೂಡದು.

## ದ್ರೌಪದಿಯ ಮಾರ್ಮಿಕ ಪ್ರಶ್ನೆ

ದ್ರೌಪದಿಯು ಸಭೆಯಲ್ಲಿ ಭೀಷ್ಮ-ದ್ರೋಣಾದಿ ಹಿರಿಯರನ್ನು ಕುರಿತು ಕೇಳಿದ ಪ್ರಶ್ನೆ ಹೀಗಿದೆ. ಯುಧಿಷ್ಠಿರ ತನ್ನನ್ನು ಮೊದಲು ಸೋತು ಆ ಬಳಿಕ ನನ್ನನ್ನು ಸೋತನೋ, ಅಥವಾ ನನ್ನನ್ನು ಮೊದಲಿಗೆ ಸೋತು ಆ ಬಳಿಕ ತನ್ನನ್ನು ಪಣಕ್ಕಿಟ್ಟು ಸೋತನೋ?[೧]

ಮೇಲ್ನೋಟಕ್ಕೆ ಈ ಪ್ರಶ್ನೆಯ ಆಂತರ್ಯ ತಿಳಿಯುವಂತಿಲ್ಲ. ಇದರ ಬಗ್ಗೆ ವಿಮರ್ಶೆ ಮಾಡಿರುವ ಇರಾವತೀ ಕರ್ವೆ(ಯುಗಾಂತ) ಮೊದಲಾದವರು ಇದೊಂದು ಅರ್ಥ-ಹೀನವಾದ ಪ್ರಶ್ನೆ; ಬೇರೇನೂ ಮಾತನಾಡಲು ತೋಚದ ದ್ರೌಪದಿ ಇಂತಹ ಅವಿವೇಕದ ಪ್ರಶ್ನೆಯನ್ನು ಮುಂದಿಟ್ಟಳು ಎಂದು ಆಕ್ಷೇಪಿಸಿರುವರು.

ಆದರೆ, ಅದು ಎಷ್ಟು ಅರ್ಥವತ್ತಾದ ಸಾರ್ಥಕ ಪ್ರಶ್ನೆ ಎಂಬುದನ್ನು ಶ್ರೀಮನ್ಮಧ್ವಾ-ಚಾರ್ಯರು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸಮರ್ಥಿಸಿರುವರು.

ಒಬ್ಬ ಸ್ತ್ರೀ ವಿವಾಹದ ಬಳಿಕ ತನ್ನ ಪತಿಯ ಆಧೀನ್ಯಕ್ಕೆ ಒಳಪಡುವಳು. ಆದರೆ, ಎಂತಹ ಸಂದರ್ಭದಲ್ಲೂ ಸಹ ಅವಳ ಪತಿಗೆ ಅವಳನ್ನು ಪರಭಾರೆ ಮಾಡುವ ಹಕ್ಕು ಸರ್ವಥಾ ಇರುವುದಿಲ್ಲ. ವಿವಾಹದ ಮಂತ್ರಗಳಲ್ಲಿ 'ನಾತಿಚರಾಮಿ' ಎಂಬ ವಾಗ್ದಾನವನ್ನು ಪಡೆದೇ ಕನ್ಯಾಪಿತೃ ವರನಿಗೆ ಅವಳನ್ನು ಧಾರೆಯೆರೆಯುತ್ತಾನೆ. ಧರ್ಮಶಾಸ್ತ್ರಗಳಂತೆ ಸ್ತ್ರೀ ಯಾವುದೇ ಕಾರಣಕ್ಕೂ ಎಂತಹ ಸಂದರ್ಭದಲ್ಲಿಯೂ ಸಹ ಪರಪುರುಷನ ಆಧೀನ್ಯಕ್ಕೆ ಒಳಪಡುವಂತೆಯೇ

---

೧ ಕಿಂ ನು ಪೂರ್ವಂ ಪರಾಜೈಷೀರಾತ್ಮಾನಮಥವಾ ನು ಮಾಮ್ । -ಮ.ಭಾ.(ಸಭಾಪರ್ವ/೬೭/೮)

ಇಲ್ಲ. ಆದ್ದರಿಂದ ಯುಧಿಷ್ಠಿರ ತನಗೆ ಮಾತ್ರ ಅಧೀನಳಾದ ತನ್ನ ಪತ್ನಿಯನ್ನು ದ್ಯೂತದಲ್ಲಿ ಪಣಕ್ಕಿಡುವ ಅಧಿಕಾರ ಹೊಂದಿಲ್ಲ. ಆದ್ದರಿಂದ, ಅವನು ಹಾಗೆ ಮಾಡಿದ್ದಲ್ಲಿ ಅದು ಅನೂರ್ಜಿತ ಎನ್ನಿಸುವುದು. ಇನ್ನು ತಾನು ತನ್ನನ್ನು ಪಣವಾಗಿಟ್ಟು ಸೋತಮೇಲೆ ತನ್ನ ಪತ್ನಿಯನ್ನು ಪಣಕ್ಕಿಡುವಂತಿಲ್ಲ. ತನ್ನ ಅಧೀನಳಾದ ಪತ್ನಿಯೊಂದಿಗೆ ತನ್ನನ್ನು ಸಹ ಪಣಕ್ಕಿಟ್ಟುಕೊಂಡಂತೆ ಆಗುವುದರಿಂದ ಅರ್ಧಾಂಗಿಯಾದ ಅವಳನ್ನು ಪ್ರತ್ಯೇಕವಾಗಿ ಪಣಕ್ಕಿಡುವ ಅಧಿಕಾರ ಅವನಿಗೆ [1]ಇಲ್ಲ. ಅಲ್ಲದೇ, ಆ ಸಂದರ್ಭದಲ್ಲೂ ಪತಿಯ ಹೊರತು ಇತರರಿಗೆ ಎಂದೂ ಆ ಸ್ತ್ರೀಯ ಮೇಲೆ ಅಧಿಕಾರ ಬರುವುದು ಸಾಧ್ಯವೇ ಇಲ್ಲ.

ಶ್ರೀಮದಾಚಾರ್ಯರ ವಿಶ್ಲೇಷಣೆ ಸ್ತ್ರೀಕುಲಕ್ಕೆ ಸಂದಿರುವ ಒಂದು ವಿಶಿಷ್ಟಗೌರವ. ಯಾವ ಹಂತದಲ್ಲಿಯೂ ಸಹ ಸ್ತ್ರೀಗೆ ಪರಪುರುಷನ ಆಧೀನ್ಯ ಅಸಂಭಾವಿತ ಎಂಬಲ್ಲಿ ಸ್ತ್ರೀಯರ ಹಕ್ಕುಬಾಧ್ಯತೆಗಳ ಬಗ್ಗೆ ಹೊಸಬೆಳಕನ್ನೇ ಕಾಣಬಹುದು. ಈ ಧರ್ಮಸೂಕ್ಷ್ಮವನ್ನು ಅರಿಯದ ಇರಾವತೀ ಕರ್ವೆಯಂತಹವರು ದ್ರೌಪದಿಯ ಆ ಮಾತನ್ನು ತಾವು ಸ್ವತಃ ಸ್ತ್ರೀಯೇ ಆಗಿದ್ದೂ ಲೇವಡಿ ಮಾಡಿರುವುದು ಎಂತಹ ವಿಪರ್ಯಾಸ!

ದ್ರೌಪದಿಯ ಪ್ರಶ್ನೆಯಲ್ಲಿನ ಈ ಧಾರ್ಮಿಕತೆಯನ್ನು ಅರ್ಥಮಾಡಿಕೊಂಡ ಭೀಷ್ಮ-ದ್ರೋಣರು ತಾವು ಏನೇ ಉತ್ತರಿಸಿದರೂ ದ್ರೌಪದಿಯ ಮುಂದೆ ನಿರುತ್ತರರಾಗುವುದು ಅನಿವಾರ್ಯ ಎಂದು ತಿಳಿದರು; ಅದಕ್ಕೆ ಸೂಕ್ತ ಉತ್ತರ ನೀಡಿ ತಮ್ಮ ಹಿರಿಮೆಯನ್ನು ಮೆರೆಯುವ ಬದಲು ಈ ಬಗ್ಗೆ ಯುಧಿಷ್ಠಿರನನ್ನೇ ಕೇಳಿಕೋ ಎಂದು ಜಾರಿಕೊಂಡು ಬಿಟ್ಟರು; ತಮ್ಮ ಕರ್ತವ್ಯವನ್ನು ನಿರ್ವಹಿಸುವಲ್ಲಿ ಎಡವಿದರು.

ವಿದುರನು ಮಾತ್ರ ಇದನ್ನು ಸರಿಯಾಗಿ ಅರ್ಥಮಾಡಿಕೊಂಡ; ಕೂಡಲೇ ಎರಡೂ ತೋಳುಗಳನ್ನು ಎತ್ತಿ ಘೋಷಿಸಿದ ದ್ರೌಪದಿಯನ್ನು ಪಣದಲ್ಲಿ ಸೋತಿರುವುದು ಪರಮ ಅನ್ಯಾಯ. ಅದು ಎಂದೂ ಸಹ ಊರ್ಜಿತವಾಗದು. ತನಗೆ ಇದರ ಬಗ್ಗೆ ಸ್ಪಷ್ಟ ಅರಿವಿದೆ. ಆದರೆ, ಆ ಸಭೆಯಲ್ಲಿನ ಹಿರಿಯರೆಲ್ಲ ಎಚ್ಚರ ತಪ್ಪಿ ಮೌನ ವಹಿಸಿರುವರು. ತನ್ನ ಒಬ್ಬನ ಪ್ರತಿಭಟನೆ ನಡೆಯದು ಎಂಬ ಅರಿವು ತನಗಿದೆ. ಆದರೆ, ಅದನ್ನು ತಡೆಯುವ ಶಕ್ತಿ ತನಗಿಲ್ಲ ಎಂದು ತನ್ನ ಅಸಹಾಯಕತೆಯನ್ನು ತೋಡಿಕೊಂಡ.

ದ್ರೌಪದಿಯ ಈ ಧರ್ಮವಿವೇಚನೆ ಭೀಷ್ಮ ದ್ರೋಣಾದಿಗಳನ್ನು ದಂಗುಬಡಿಸಿತು. ಇದರಿಂದ ತಿಳಿಯುವಂತೆ ದ್ರೌಪದಿಯು ಕೇವಲ ಒಬ್ಬ ಕ್ಷಾತ್ರ ತೇಜಸ್ಸಿನ ಸ್ತ್ರೀಯಾಗಿರದೇ

---

೧ ಕಥಂ ದ್ಯೂತೇ ಜಿತಾ ಚಾಹಮಜಿತೇ ಸ್ವಪತೌ ಸ್ಥಿತೇ।
ಸಮಾನಧರ್ಮಿಣೀಮಾಹುರ್ಭಾರ್ಯಾಂ ಯಸ್ಮಾದ್ವಿಪಶ್ಚಿತಃ॥
ಸಹೈವ ಕರ್ಮ ಕರ್ತವ್ಯಂ ಪತೌ ದಾಸೇ ಹಿ ಭಾರ್ಯಯಾ।
ದಾಸಿತ್ವಂ ನ ಪೃಥಜ್ ಮೇ ಸ್ಯಾತ್ ಜಿತೇಽಪಿ ಹಿ ಪತೌ ತತಃ॥ -ಮ.ಭಾ.ತಾ.ನಿ (೨೧/೩೨೬,೩೨೭)

ಧರ್ಮಸೂಕ್ಷ್ಮಗಳನ್ನು ಅರಿತಿದ್ದ ಬ್ರಹ್ಮವಾದಿನಿಯಾಗಿದ್ದಳು ಎಂದಾಗುವುದು. ಶ್ರೀಮದಾಚಾರ್ಯರು ದ್ರೌಪದಿಯು ವೇದಾಧಿಕಾರವಿದ್ದ ಮಹಿಳೆ ಎಂದು ಸಾರಿರುವರು[೧]. ಅವರು ಮೂಲತಃ ನಿಗಮಪ್ರತತಿಗಳಿಗೆ ಅಭಿಮಾನಿಯಾದ ಭಾರತೀಯೇ ಎಂಬುದನ್ನು ಸಹ ಅವರು ಸಾಧಾರವಾಗಿಯೇ ತಿಳಿಸಿರುವರು.

## ಭೀಮಸೇನನ ಧರ್ಮಪ್ರಜ್ಞೆ

ವಿದುರನು ಕೌರವಪಕ್ಷದಲ್ಲಿದ್ದು ಧರ್ಮ ಬಲ್ಲ ವಿವೇಕಿಯಾದರೆ, ಪಾಂಡವರಲ್ಲಿ ಒಬ್ಬನಾಗಿ ಧರ್ಮವಿವೇಚನೆಯಲ್ಲಿ ಪಾರಂಗತನಾಗಿದ್ದ ಮಹಾಪುರುಷನೆಂದರೆ ಭೀಮಸೇನ. ವಿದುರನಿಗೆ ಧರ್ಮದ ಪರಿಜ್ಞಾನಮಾತ್ರವಿದ್ದರೆ, ಭೀಮಸೇನನಿಗೆ ಅಂತಹ ಧರ್ಮಜ್ಞಾನದೊಂದಿಗೆ ಅದನ್ನು ಕಾರ್ಯರೂಪಕ್ಕೆ ತರಬಲ್ಲಂತಹ ಪರಿಪೂರ್ಣ ಬಾಹುಬಲವೂ ಸಹ ಇದ್ದಿತು ಎಂಬುದು ಮಾತ್ರ ವಿಶೇಷ.

ಆ ಸಮಯದಲ್ಲಿ ಯುಧಿಷ್ಠಿರನದು ತಪ್ಪೆಂದು ಭೀಮಸೇನ ಘೋಷಿಸಿದ. ಧರ್ಮರಾಜ ಮಾಡಿದ್ದು ಕೈಸುಡಿಸಿಕೊಳ್ಳುವಂತಹ ತಪ್ಪು ಎಂದು ಸಹ ತಿಳಿಸಿದ. ಆ ಪ್ರಸಂಗದ ದುರ್ಲಾಭವನ್ನು ಪಡೆಯ ಬಯಸಿದ ದುರ್ಯೋಧನನಿಗೆ ಭೀಮಸೇನನು ಬಲಜ್ಯೇಷ್ಠನಾದ ತಾನು ಕ್ಷತ್ರಿಯರಲ್ಲೆಲ್ಲ ಉತ್ತಮ, ಅದನ್ನು ತಾನು ಆ ಕೂಡಲೇ ನಿರೂಪಿಸಬಲ್ಲ ಸಮರ್ಥ; ಆದ್ದರಿಂದ ತನಗೆ ಪೂಜ್ಯನಾದ ಯುಧಿಷ್ಠಿರ ಇತರ ಸಕಲರಿಂದಲೂ ಪೂಜ್ಯ ಎಂದು ತಿಳಿಸಿದ. ಆಗಲೆ ಅವರೆಲ್ಲ ಒಟ್ಟಾಗಿಯೇ ತನ್ನ ಮೇಲೆ ಹೋರಾಟಕ್ಕೆ ಬಂದರೂ ಅವರನ್ನೆಲ್ಲ ಕೇವಲ ತನ್ನ ಅಂಗಾಲಿನಿಂದಲೇ ಹೊಸಕಿ ಹಾಕಬಲ್ಲ ಮಹಾಸಮರ್ಥ ಎಂದು ನುಡಿದು, ಅವರನ್ನು ಯುದ್ಧಕ್ಕೆ ಆಹ್ವಾನಿಸಿದ. ಅವನ ಮಾತಿನಲ್ಲಿದ್ದ ಯಥಾರ್ಥತೆಯನ್ನು ಗುರುತಿಸಿದ ಭೀಷ್ಮ ದ್ರೋಣರು ಕೂಡಲೆ ಅವನತ್ತ ಧಾವಿಸಿಬಂದು ಅವನು ದುರ್ಯೋಧನಾದಿಗಳನ್ನು ಸದೆಬಡಿಯುವ ಕಾರ್ಯದಲ್ಲಿ ಪ್ರವೃತ್ತನಾಗುವುದನ್ನು ನಿಲ್ಲಿಸಿದರು[೨].

---

೧ ವೇದಾ ಅಪ್ಯುತ್ತಮಸ್ತ್ರೀಭಿಃ ಕೃಷ್ಣಾದ್ಯಾಭಿರಿವಾಖಿಲಾಃ।
ದೇವ್ಯೋ ಮುನಿಸ್ತ್ರಿಯಶ್ಚೈವ ನರಾದಿಕುಲಜಾ ಅಪಿ ॥
ಉತ್ತಮಾ ಇತಿ ವಿಜ್ಞೇಯಾಃ ......................... ॥ -ಮ.ಭಾ.ತಾ.ನಿ.(೨೯/೩೬,೩೭)
ಮಹಾಭಾರತದ ವಿರಾಟಪರ್ವದ ಪ್ರಾರಂಭದಲ್ಲಿ ದ್ರೌಪದಿಯನ್ನು 'ಬ್ರಹ್ಮವಾದಿನೀ' ಎಂದು ಸ್ಪಷ್ಟವಾಗಿಯೇ ಕರೆಯಲಾಗಿದೆ:
ಪತಿವ್ರತಾ ಮಹಾಭಾಗಾ ಸತತಂ ಬ್ರಹ್ಮವಾದಿನೀ।
ದ್ರೌಪದೀ ಚ ಕಥಂ ಬ್ರಹ್ಮನ್ನವಜ್ಞಾತಾ ದುಃಖಿತಾಽವಸತ್ ॥ -ಮ.ಭಾ.(ವಿರಾಟಪರ್ವ/೧/೩)

೨ ತಮುವಾಚ ತದಾ ಭೀಷ್ಮೋ ದ್ರೋಣೋ ವಿದುರ ಏವ ಚ।
ಕ್ಷಮ್ಯತಾಮಿದಮಿತ್ಯೇವಂ ಸರ್ವಂ ಸಂಭಾವ್ಯತೇ ತ್ವಯಿ ॥ - ಮಹಾಭಾರತ (ಸಭಾ-೭೦/೧೮)

ದುರ್ಯೋಧನ ಅದರಿಂದ ಎಚ್ಚೆತ್ತುಕೊಳ್ಳುವ ಬದಲು ಮತ್ತಷ್ಟು ಮೈಮರೆತ. ತಾನು ಅಂದು ಎಷ್ಟೇ ಕೆಟ್ಟದಾಗಿ ನಡೆದುಕೊಂಡರೂ ಅದಕ್ಕೆ ಭೀಷ್ಮಾದಿ ಹಿರಿಯರ ಶ್ರೀರಕ್ಷೆ ಇರುವುದು ನಿಶ್ಚಯ ಎಂದು ತಿಳಿದು ಅವನು ಮತ್ತಷ್ಟು ದೌರ್ಜನ್ಯ ಮೆರೆಯತೊಡಗಿದ. ತುಂಬಿದ ಸಭೆಯಲ್ಲಿಯೇ ದ್ರೌಪದಿಗೆ ತನ್ನ ತೊಡೆಯನ್ನು ತೋರಿಸಿ ಅದನ್ನು ತಟ್ಟಿಕೊಂಡು ಗಹಗಹಿಸಿದ. ಕೂಡಲೇ ಭೀಮಸೇನ ಅವನ ಆ ತೊಡೆಯನ್ನು ಗದೆಯಿಂದ ಅಪ್ಪಳಿಸಿ ಮುರಿದುಹಾಕುವ ಶಪಥವನ್ನು ಮಾಡಿದ. ಪಣವಿಡಲು ಶ್ರೀಕೃಷ್ಣನೂ ಇರುವನಲ್ಲ ಅವನನ್ನು ಸಹ ಇಟ್ಟುಬಿಡು ಎಂಬುದಾಗಿ ಯುಧಿಷ್ಠಿರನ ಮುಂದೆ ವ್ಯಂಗ್ಯವಾಡಿದ. ಕೂಡಲೇ ಭೀಮಸೇನ ಅವನನ್ನು ಹೊಡೆದು ಬೀಳಿಸಿ ತಲೆ ತುಳಿಯುವುದಾಗಿ ಮತ್ತೊಂದು ಶಪಥವನ್ನು ಮಾಡಿದ. ಏನಿದ್ದರೂ ಅದೆಲ್ಲ ಮುಂದೆ ನಡೆಯುವ ಯುದ್ಧದಲ್ಲಿ ಮಾತ್ರ, ಈಗಂತೂ ಅಲ್ಲ ಎಂಬ ಕೆಟ್ಟ ಧೈರ್ಯದಿಂದ ದುರ್ಯೋಧನ ಪಾಂಡವರ ವಸ್ತ್ರಗಳನ್ನು ಸೆಳೆಯಲು ದುಃಶಾಸನನಿಗೆ ಅಪ್ಪಣೆ ಮಾಡಿದ. ಆ ದುಷ್ಟನು ಅದನ್ನೂ ಮಾಡಿಯಾನು ಎಂದು ಭಾವಿಸಿ ಪಾಂಡವರೆಲ್ಲ ತಮ್ಮ ಕಿರೀಟ, ದುಕೂಲಗಳನ್ನು ಕಳಚಿಟ್ಟು ವಲ್ಕಲಗಳನ್ನು ಧರಿಸಿ ಬರೀ ನೆಲದ ಮೇಲೆಯೇ ಕುಳಿತುಬಿಟ್ಟರು.

ದುರ್ಯೋಧನನ ಪೈಶಾಚಿಕ ಪ್ರವೃತ್ತಿ ಮುಂದುವರೆಯಿತು. ಜಗತ್ತಿನ ಇತಿಹಾಸದಲ್ಲೇ ರಾಜಸಭೆಯೊಂದರಲ್ಲಿ ಹಿಂದೆಂದೂ ನಡೆಯದಿದ್ದಂತಹ ಹೀನ ಕಾರ್ಯಕ್ಕೆ ದುರ್ಯೋಧನ ಕೈಹಾಕಿದ. ದುಃಶಾಸನನ್ನು ಕರೆದು ದ್ರೌಪದಿಯ ವಸ್ತ್ರವನ್ನು ಸಹ ಅಪಹರಿಸಲು ಆದೇಶವಿತ್ತ. ನಿರ್ಲಜ್ಜನಾದ ಆ ಪಾಪಿ ಹಾಗೆ ಮಾಡಲು ಧಾವಿಸಿಯೂ ಬಿಟ್ಟ. ಯುಧಿ- ಷ್ಠಿರಾದಿ ಪಾಂಡವರದು ಆಗಲೂ ಮೌನವೇ ಆಗಿತ್ತು. ಆಗಲೂ ಉಗ್ರ ಶಪಥದ ಮೂಲಕ ಅದನ್ನು ಪ್ರತಿಭಟಿಸಿದ ವಿವೇಕ ಭೀಮಸೇನನದಾಗಿತ್ತು. ಆ ಪಾಪಿದುಃಶಾಸನನ ಎದೆ ಬಗೆದು ರಕ್ತವನ್ನು ಹೀರುವ ಶಪಥವನ್ನು ಅವನು ಮಾಡಿದ. ದುರ್ಯೋಧನಾದಿಗಳ ವಿನಾಶವನ್ನು ಮುಂದೆ ನಡೆಯುವ ಕುರುಕ್ಷೇತ್ರ ಯುದ್ಧದಲ್ಲಿಯೇ ಮಾಡುವುದು ಎಂಬ ಶ್ರೀಕೃಷ್ಣನ ಸಂಕಲ್ಪಕ್ಕೆ ತಲೆಬಾಗಿ, ಆಗಲೇ ದುರ್ಯೋಧನಾದಿಗಳನ್ನೆಲ್ಲ ನಾಶಮಾಡುವ ಕಾರ್ಯಕ್ಕೆ ಭೀಮ ಕೈಹಾಕಲಿಲ್ಲ. ಇದು ಭೀಮಸೇನನ ಅಪಾರ ಧರ್ಮನಿಷ್ಠೆಗೆ ಹಿಡಿದ ಕನ್ನಡಿಯಂತಿದೆ. ಭೀಮಸೇನನಿಗೆ ಪತ್ನಿಯ ಮೇಲೆ ಅಪಾರ ಪ್ರೀತಿ ಇದ್ದಿದ್ದು ನಿಜ. ಆದರೆ, ಅದಕ್ಕಿಂತ ಮಿಗಿಲಾದ ಪರಮಭಕ್ತಿ ಶ್ರೀಕೃಷ್ಣನಲ್ಲಿತ್ತು. ಅದರಿಂದಾಗಿಯೇ ಶ್ರೀಕೃಷ್ಣನ ಸಂಕಲ್ಪಕ್ಕೆ ಹೆಚ್ಚು ಬೆಲೆ ಇತ್ತು ಆಗಲೇ ಶತ್ರುಗಳನ್ನು ಸದೆಬಡಿಯುವ ಕಾರ್ಯಕ್ಕೆ ತೊಡಗಲಿಲ್ಲ ಎಂದು ತಿಳಿಯಬೇಕು; ಪರಿಶುದ್ಧ ಭಗವನ್ನಿಷ್ಠೆ ಎಂದರೆ ಇದೇ.

## ದ್ರೌಪದಿಗೆ ಅಕ್ಷಯಾಂಬರ

ದುಃಶಾಸನನು ವಸ್ತ್ರಾಪಹರಣಕ್ಕೆ ತೊಡಗಿಯೇ ಬಿಟ್ಟ. ದ್ರೌಪದಿಯು ಆಗ ತನ್ನ ಕ್ಷಾತ್ರತೇಜಸ್ಸನ್ನು ಮೆರೆಯುತ್ತಾ ಭೀಷ್ಮ ದ್ರೋಣ, ಧೃತರಾಷ್ಟ್ರಾದಿಗಳ ಮುಂದೆ ಅವರ

ಕರ್ತವ್ಯದ ಬಗ್ಗೆ ಎಚ್ಚರ ನೀಡಿದಳು. ಆದರೆ, ದುರ್ಯೋಧನನ ಹಂಗಿಗೆ ಒಳಗಾಗಿದ್ದ ಅವರಾರೂ ಅದನ್ನು ತಡೆಯಲು ಮುಂದಾಗಲಿಲ್ಲ. ಅವರ ಕಡೆಯ ವಿದುರನಿಂದ ಆ ಕಾರ್ಯ ಸಾಧ್ಯವಾಗಲಿಲ್ಲ. ಹಿಂದಿನಂತೆ ಪ್ರತಿಭಟನೆಯನ್ನು ಮಾತ್ರ ವಿದುರ ಆಗಲೂ ತಪ್ಪದೆ ಮಾಡಿದ.

ದ್ರೌಪದಿಯು ಕೊನೆಯ ಹಂತದಲ್ಲಿ ಶ್ರೀಕೃಷ್ಣನ ಸ್ತೋತ್ರಕ್ಕೆ ತೊಡಗಿದಳು. ಬಗೆಬಗೆಯಾಗಿ ಶ್ರೀಕೃಷ್ಣನನ್ನು ಸ್ತುತಿಸಿದಳು. ಅವಳು ತೊಟ್ಟ ವಸ್ತ್ರ ಅಕ್ಷಯವಾಗತೊಡಗಿತು. ಒಂದಾದ ಮೇಲೊಂದರಂತೆ ಪೀತಾಂಬರಗಳ ರಾಶಿಯೇ ಬರತೊಡಗಿತು. ಶ್ರೀಕೃಷ್ಣನ ಅನುಗ್ರಹದಿಂದಾಗಿ ದುರ್ಯೋಧನಾದಿಗಳ ಪ್ರಯತ್ನ ಸಂಪೂರ್ಣ ವ್ಯರ್ಥವಾಯಿತು.

ಈ ಪ್ರಸಂಗದಲ್ಲಿ ವಿಮರ್ಶೆಗೆ ತುಂಬಾ ಅವಕಾಶವಿದೆ.

ದ್ರೌಪದಿಯು ಭಾರತಿಯ ಅವತಾರ, ಫಲಾಪೇಕ್ಷೆಯಿಂದ ಭಗವಂತನನ್ನು ಸ್ತುತಿಸುವುದು ಧರ್ಮವಲ್ಲ ಎಂಬ ಮಾತು ಗೀತೆ ಮೊದಲಾಗಿ ಸಕಲ ಶಾಸ್ತ್ರಗಳಲ್ಲೂ ಬಂದಿದೆ ಎಂದ ಮೇಲೆ ದ್ರೌಪದಿಯು ಹಾಗೆ ಪ್ರಾರ್ಥಿಸಿದ್ದು ಉಚಿತವೇ? ಎಂಬುದು ಮೊದಲ ಪ್ರಶ್ನೆ.

ಅದಕ್ಕೆ ಉತ್ತರ ಹೀಗಿದೆ: ದ್ರೌಪದಿಯು ಶ್ರೀಕೃಷ್ಣನನ್ನು ಸ್ತುತಿಸಿದ್ದು ನಿಜ. ಆದರೆ, ವಸ್ತ್ರವನ್ನು ನೀಡು ಎಂದು ಸ್ತುತಿಸಿದಳು ಎಂಬುದು ಮಾತ್ರ ಸರಿಯಲ್ಲ. ಶ್ರೀಕೃಷ್ಣನನ್ನು ಸದಾ ಸ್ತುತಿಸುವುದು ಏಕಾಂತಭಕ್ತರ ಲಕ್ಷಣ. ದ್ರೌಪದಿಯಂತು ಜೀವಕೋಟಿಯಲ್ಲಿಯೇ ಸರ್ವೋತ್ತಮಳೆನ್ನಿಸುವ ಮಹಾಮಹಿಳೆ. ಆದ್ದರಿಂದ ಆಗ ಅವಳು ಶ್ರೀಕೃಷ್ಣನನ್ನು ಅಂತಹ ವಿಷಮ ಪ್ರಸಂಗದಲ್ಲೂ ಪರಿಪರಿಯಾಗಿ ಸ್ತುತಿಸಿದ್ದು ಸಹಜ. ಅದು ಹಿರಿಮೆಯ ಸಂಕೇತವೇ ಹೊರತು ಪ್ರತ್ಯವಾಯಕ್ಕೆ ಕಾರಣವಾಗುವಂತಹುದಲ್ಲ.

ದ್ರೌಪದಿಗೆ ಕೃಷ್ಣೆ ಎಂದು ಹೆಸರು. ಅದಕ್ಕೆ ಸದಾ ಉತ್ಕೃಷ್ಟವಾದ ಆನಂದದಿಂದ ಕೂಡಿದವಳು [೧]ಎಂದರ್ಥ. ದೇಹಕ್ಕೆ ವಿಹಿತವಾದ ದ್ವಾತ್ರಿಂಶಲ್ಲಕ್ಷಣಗಳನ್ನು ದ್ರೌಪದೀ ಹೊಂದಿದ್ದಳು. ದುಃಖವು ದುರ್ಲಕ್ಷಣಗಳ ಫಲ. ಒಂದೂ ದುರ್ಲಕ್ಷಣವಿಲ್ಲದ ದ್ರೌಪದಿಗೆ ದುಃಖವಾಗುವ ಸಂಭವವೇ ಇಲ್ಲ[೨]. ಹಾಗಿದ್ದರೆ ದ್ರೌಪದಿಯು ಹಾಹಾಕಾರ ಮಾಡಿದ್ದು ಉಚಿತವೇ ಎಂಬುದು ಇನ್ನೊಂದು ಪ್ರಶ್ನೆ. ಅದು ನಿಜ, ದ್ರೌಪದಿಗೆ ದುಃಖವೇ ಇಲ್ಲ. ಋಜುಗಳಿಗೆ ಯಾವ ಕಾಲಕ್ಕೂ ದುಃಖದ ಸ್ಪರ್ಶವೇ ಇಲ್ಲ. ಹಾಗಿದ್ದರೆ ಹಾಹಾಕಾರವೇಕೆ? ಎಂದರೆ ಅದು ವಿಡಂಬನೆ ಹಾಗೂ ಅಸುರಮೋಹನಕ್ಕಾಗಿ ಮಾತ್ರ ಎಂದು ತಿಳಿಯಬೇಕು. ಅಲ್ಲದೆ ದುರ್ಯೋಧನಾದಿಗಳ ಆ ಕಾರ್ಯ ನಿಜಕ್ಕೂ ಒಬ್ಬ ಸ್ತ್ರೀಯ ಪರಿಪರಿಯ

---

೧ ಉತ್ಕೃಷ್ಟಾನಂದಿನೀ ಯತಃ। -ಮ.ಭಾ.ತಾ.ನಿ (೧೮/೧೦೧)

೨ ಪೂರ್ಣಚಿತ್ಸುಖಶಕ್ತ್ಯಾದೇರ್ಯೋಗ್ಯೌ ಕೃಷ್ಣಾ ಚ ಮಾರುತಿಃ। -ಮ.ಭಾ.ತಾ.ನಿ.(೩೦/೧೨೭)

ದುಃಖಕ್ಕೆ ಕಾರಣವಾಗುವಂತಹ ಅತ್ಯಂತ ಹೇಯವಾದ ಕಾರ್ಯ ಎಂದಷ್ಟೇ ಅದರ ಭಾವ. ಆದ್ದರಿಂದ, ದ್ರೌಪದಿಗೆ ದುಃಖವಿಲ್ಲ ಎಂಬುದೇ ಸಿದ್ಧಾಂತ. ಶ್ರೀರಾಮನು ಸೀತಾವಿಯೋಗ ಹೊಂದಿದಂತೆ ನಟಿಸಿ ಪರಿಪರಿಯಾಗಿ ರೋದಿಸಿದಂತೆ ವರ್ತಿಸಿದ ರೀತಿಯನ್ನು ಇದು ಹೋಲುವುದು.

ದ್ರೌಪದಿಯು ವಸ್ತ್ರಕ್ಕಾಗಿ ಪ್ರಾರ್ಥಿಸಿಯೂ ಇಲ್ಲ, ಆವಳಿಗೆ ದುಃಖವೂ ಇಲ್ಲ ಎಂದ ಮೇಲೆ ಶ್ರೀಕೃಷ್ಣ ಅಕ್ಷಯವಸ್ತ್ರ ನೀಡಿದ್ದು ಏಕೆ? ಎಂಬುದು ಇನ್ನೊಂದು ಪ್ರಶ್ನೆ.

ಶ್ರೀಕೃಷ್ಣ ಭಕ್ತವತ್ಸಲ. ಭಕ್ತರು ಕೇಳದಿದ್ದರೂ ಅವರ ಅಗತ್ಯವನ್ನು ಪೂರೈಸುವ ಪರಮ ಕರುಣಾಳು ಅವನು. ಆದ್ದರಿಂದ, ಆ ಪ್ರಸಂಗಕ್ಕೆ ಅಗತ್ಯವೆನ್ನಿಸಿದ ರಕ್ಷಣೆಯಾಗಿ ಅವನು ತಾನಾಗಿಯೇ ದ್ರೌಪದಿಗೆ ಅಕ್ಷಯವಸ್ತ್ರವನ್ನು ನೀಡಿದ. ಕೇಳಿ ತೆಗೆದುಕೊಳ್ಳುವುದು ನಿಷಿದ್ಧ ಎಂಬುದು ಭಕ್ತರ ವ್ರತವಾದರೆ, ಭಕ್ತರಿಗೆ ಕೇಳಿಸಿಕೊಳ್ಳದೇ ಕೊಡುವ[1] ವ್ರತ ತನ್ನದು ಎಂಬುದು ಭಗವಂತನ ಹಿರಿಮೆ. ಆದ್ದರಿಂದ, ದ್ರೌಪದಿಯು ಕೇಳದಿದ್ದರೂ ಶ್ರೀಕೃಷ್ಣ ಅಕ್ಷಯವಸ್ತ್ರ ನೀಡಿದ್ದು ಉಚಿತವೇ ಆಗಿದೆ.

ಇಲ್ಲಿ ತಿಳಿಯಬೇಕಾದ ಮತ್ತೊಂದು ಸೂಕ್ಷ್ಮವಾದ ಅಂಶವಿದೆ. ದ್ರೌಪದಿಯ ದೇಹದಲ್ಲಿ ಈಗಾಗಲೇ ತಿಳಿಸಿರುವಂತೆ ಪಾರ್ವತೀ ಮೊದಲಾದ ಇತರ ಸ್ತ್ರೀಯರ ಆವೇಶವಿದೆ. ಅವರಿಗೆ ಪರಪುರುಷನ ವಶವಾಗುವಂತಹ ಘೋರ ಶಾಪ ಬ್ರಹ್ಮದೇವರಿಂದ ಬಂದಿದೆ. ಅದರ ಅನುಭವವನ್ನು ಅವರೀಗ ಪಡೆಯುತ್ತಿರುವವರು. ಅದರಿಂದಾಗಿ ಅವರಿಗೆ ಅಪಾರ ದುಃಖವಾಗಿದೆ. ಆ ದುಃಖದ ಹಿನ್ನೆಲೆಯಲ್ಲಿ ಹಾಹಾಕಾರ ಮಾಡಿ ಪ್ರಾರ್ಥಿಸಿದವರು ಅವರೇ ಹೊರತು ಭಾರತೀದೇವಿಯಲ್ಲ. 'ಪತಿಂ ದೇಹಿ' ಎಂದು ಇಂದ್ರಸೇನೆಯಾಗಿದ್ದಾಗ ಇತರ ನಾಲ್ಕು ಬಾರಿ ಬಂದ ಮಾತು ಹೇಗೆ ವಿಭಿನ್ನ ದೇವತಾಸ್ತ್ರೀಯರ ಮಾತಾಗಿತ್ತೋ ಹಾಗೆ ಇಲ್ಲಿಯ ಆರ್ತನಾದ ಮಾತ್ರ ಆ ವಿಭಿನ್ನ ದೇವತಾಸ್ತ್ರೀಯರದಾಗಿತ್ತು ಎಂದು ತಿಳಿಯಬೇಕು. ಆದ್ದರಿಂದ, ದುಃಖ ಭಾರತೀದೇವಿಗಲ್ಲ, ಅವರೊಳಗಿನ ಇತರ ದೇವತಾ ಸ್ತ್ರೀಯರಿಗೆ ಮಾತ್ರ ಎಂಬುದು ಸ್ಫುಟಪಡುವುದು.

ಅಕ್ಷಯವಸ್ತ್ರದ ಅಗತ್ಯವಿಲ್ಲದ ಭಾರತೀದೇವಿಗೆ ಶ್ರೀಕೃಷ್ಣ ಅಕ್ಷಯವಸ್ತ್ರ ನೀಡಿದ್ದಕ್ಕೂ ಇದರಲ್ಲಿಯೇ ಉತ್ತರವಿದೆ. ಅಕ್ಷಯವಸ್ತ್ರದ ಅಗತ್ಯ ಭಾರತೀದೇವಿಗಿಲ್ಲ. ಅವರಿಗೆ ವಸ್ತ್ರರೂಪದ ರಕ್ಷಣೆಯನ್ನು ಸ್ವತಃ ಅವರ ಪತಿಯಾದ ಭಾರತೀರಮಣ ಮುಖ್ಯಪ್ರಾಣನೇ ನೀಡುತ್ತಿರುವನು. ಪ್ರಾಣನಿಗೆ ವಸ್ತ್ರ ಎಂದು ಹೆಸರೂ ಇದೆ[2]. ಎಂಬುದು ಶಾಸ್ತ್ರದಲ್ಲಿ ಬಂದಿರುವ ವಿವರ. ಆದರೆ,

---

೧ ಬೇಡದಲೆ ಕೊಡುತಿಹನು ಸುರರಿಗೆ। - ಶ್ರೀಹರಿಕಥಾಮೃತಸಾರ

೨ ಪ್ರಾಣಸ್ಯ ವಸ್ತ್ರಬುದ್ಧ್ಯಾ ತು - ಛಾಂದೋಗ್ಯೋಪನಿಷತ್

ಅವರ ದೇಹದೊಳಗಿದ್ದ ಪಾರ್ವತೀ ಮೊದಲಾದವರಿಗೆ ಅಕ್ಷಯವಸ್ತ್ರದ ಅಗತ್ಯವಿದೆ. ಅವರಿಗೆ ಆ ಸಮಯದಲ್ಲಿ ಉಳಿದ ಯಾವ ಎಚ್ಚರವೂ ಇಲ್ಲದೆ ದುಃಶಾಸನನಿಂದಾಗುತ್ತಿದ್ದ ಅಪಚಾರವಷ್ಟೆ ಕಣ್ಣಿಗೆ ಕಾಣುತ್ತಿದ್ದು ಅದರ ಪರಿಹಾಕ್ಕಾಗಿ ವಸ್ತ್ರ ಬೇಡುವ ಅನಿವಾರ್ಯತೆ ಅವರಿಗಿತ್ತು. ಅದನ್ನು ಶ್ರೀಕೃಷ್ಣ ಪೂರೈಸಿದ; ಅವರನ್ನು ರಕ್ಷಿಸಿದ ಎಂದು ತಿಳಿಯಬೇಕು.

ಈ ಸಂದರ್ಭದಲ್ಲಿ 'ಬಾಗಿಲನು ತೆರೆದು ಸೇವೆಯನ್ನು ಕೊಡು ಹರಿಯೇ' ಎಂಬ ಶ್ರೀಕನಕದಾಸರ ಕೃತಿಯಲ್ಲಿನ ವಿವರಣೆ ಅತ್ಯಂತಸಮಂಜಸವಾಗಿದೆ; ಅವರು ಆ ಹಾಡಿನಲ್ಲಿ ಹೇಳಲ್ಪಟ್ಟಿರುವ ಮಾತು ಹೀಗಿದೆ.

**ಯಮಸುತನ ರಾಣಿಗೆ ಅಕ್ಷಯವಸನವನಿತ್ತೆ।**
ಸಮಯದಲ್ಲಿ ಅಜಾಮಿಳನ ಪೊರೆದೆ।
ಸಮಯಾಸಮಯ ಉಂಟೆ ಭಕ್ತವತ್ಸಲ ನಿನಗೆ।
ಕಮಲಾಕ್ಷ ಕಾಗಿನೆಲೆಯಾದಿಕೇಶವರಾಯ

ಇಲ್ಲಿ ಶ್ರೀಕೃಷ್ಣನು ಅಕ್ಷಯವಸ್ತ್ರವನ್ನು ನೀಡಿದ್ದು ಯಮಸುತನ ರಾಣಿಗೆ. ಯಮಸುತ ಎಂದರೆ ಯಮನ ಅವತಾರನಾದ ಯುಧಿಷ್ಠಿರ. ಅವನ ರಾಣಿ ಎಂದರೆ ದ್ರೌಪದೀ ದೇಹದಲ್ಲಿನ ಶ್ಯಾಮಲಾದೇವೀ. ಅವಳಿಗೆ ಶ್ರೀಕೃಷ್ಣ ಅಕ್ಷಯವಸ್ತ್ರ ನೀಡಿದ ಎಂದರ್ಥ. ಇಲ್ಲಿ ಶ್ಯಾಮಲೆ ಎಂಬುದು ಉಪಲಕ್ಷಣ. ಪಾರ್ವತೀ, ಶಚಿ ಹಾಗೂ ಉಷಾ ದೇವತಾ ಸ್ತ್ರೀಯರನ್ನು ಆ ಪದದಿಂದ ಗ್ರಹಿಸಬೇಕು.

ಹೀಗೆ ದ್ರೌಪದಿಯ ಪ್ರಸಂಗದಲ್ಲಿ ಅನೇಕ ತಾತ್ವಿಕ ವಿಚಾರಗಳು ಮೇಳೈಸಿವೆ. ಅದರ ವಿವೇಚನೆಯನ್ನು ಸಮಗ್ರವಾಗಿ ನೀಡಿದ ಹಿರಿಮೆ ಶ್ರೀಮನ್ಮಧ್ವಾಚಾರ್ಯರದು.

ದುಃಶಾಸನನಿಗೆ ವಸ್ತ್ರ ಸೆಳೆದು ಸುಸ್ತಾಯಿತೇ ಹೊರತು ವಸ್ತ್ರಗಳು ಬರುವುದು ಮಾತ್ರ ನಿಲ್ಲಲೇ ಇಲ್ಲ. ಕೊನೆಗೆ ಅವನು ಮೂರ್ಛಿತನಾಗಿ ಬಿದ್ದ. ಹೀಗೆ ಅವನ ಪ್ರಯತ್ನ ಸಂಪೂರ್ಣ ನಿಷ್ಫಲವಾಯಿತು. ಅವನಿಗೆ ರುದ್ರಾದಿದೇವತೆಗಳ ವರವಿದ್ದ ಉಲ್ಲೇಖವೇನು ಕಂಡುಬರುವುದಿಲ್ಲ. ಆದರೆ, ಬ್ರಹ್ಮವರವಿದ್ದ ಕಲಿಯಾದ ದುರ್ಯೋಧನನ ಬೆಂಬಲವಿದ್ದುದೆ ಅವನ ಅಂತಹ ಅಟ್ಟಹಾಸಕ್ಕೆ ಕಾರಣವಾಗಿತ್ತು. ರುದ್ರಾದಿದೇವತೆಗಳಿಗೂ ವರ ನೀಡಬಲ್ಲ[೧] ಭಾರತೀದೇವಿಯ ಅವತಾರಳಾದ ದ್ರೌಪದಿಯಿಂದಾಗಿ ಅವನು ಇನ್ನಿಲ್ಲದಂತೆ ನೆಲಕಚ್ಚಿದ.

*****

---

೧ ಭವತಿ ಯದನುಭಾವಾದೇಡಮೂಕೋऽಪಿ ವಾಗ್ಮೀ
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ।
ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ॥ – ಶ್ರೀಮನ್ನ್ಯಾಯಸುಧಾ

## ದ್ರೌಪದಿಯ ಅಪೂರ್ವಸಂಯಮ

ಸಾಮಾನ್ಯವಾಗಿ ಇಂತಹ ಪ್ರಸಂಗಗಳಲ್ಲಿ ಪತಿವ್ರತಾಸ್ತ್ರೀಯರು ಅಂತಹ ದುಷ್ಟರಿಂದ ಪಾರಾಗಲು ಶಾಪಾದಿಗಳನ್ನು ಕೊಡುವುದು ಪುರಾಣಗಳಲ್ಲಿ ಕಂಡಬರುವುದು. ಆದರೆ, ಮಹಾಪತಿವ್ರತೆಯಾದ ದ್ರೌಪದಿಯು ಹಾಗೆ ಶಾಪವನ್ನು ಏಕೆ ನೀಡಲಿಲ್ಲ? ಎಂಬ ಪ್ರಶ್ನೆಗೆ ಅವಕಾಶವಿದೆ. ಇದಕ್ಕೆ ಮಹಾಭಾರತದಲ್ಲೇ ಉತ್ತರ ಬಂದಿದೆ.

ವಿರಾಟಪರ್ವದಲ್ಲಿ ಕೀಚಕನಿಂದ ನಡೆದ ದುಷ್ಕೃತ್ಯಗಳ ಬಗ್ಗೆ ಕೇಳಿದ ಜನಮೇಜಯ ರಾಜ ನೇರವಾಗಿ ಈ ಪ್ರಶ್ನೆಯನ್ನು ಮುಂದಿಡುವನು. ಅದಕ್ಕೆ ವೈಶಂಪಾಯನರು ನೀಡಿದ ಉತ್ತರ ಹೀಗಿದೆ.

ದ್ರೌಪದಿಯ ಪಾತಿವ್ರತ್ಯ ಮೊದಲಾದ ಗುಣಗಳು ಲೋಕೋತ್ತರವಾದುವು. ಅವರಿಗಿದ್ದ ಅಪಾರ ಸಾಮರ್ಥ್ಯವಂತೂ ಶಿವಾದಿ ದೇವತೆಗಳಿಂದಲೂ ಮಾನ್ಯವಾದದ್ದು. ಆದರೂ, ಇಂತಹ ಅನೇಕ ದುಸ್ತರ ಪ್ರಸಂಗಗಳಲ್ಲಿ ಅವರು ಶಾಪ ನೀಡದ್ದಕ್ಕೆ ಕಾರಣವಿದೆ. ಸಾಮಾನ್ಯವಾಗಿ ಅಂತಹ ಶಾಪ ನೀಡಿದಾಗ ತಪಸ್ಸಿನ ವ್ಯಯವಾಗುವುದು, ಅದರಿಂದ ಪುಣ್ಯ ಹಾನಿಯಾಗುವುದು. ಗೌತಮರು ಮೊದಲಾದವರು ಅಹಲ್ಯೆ ಮೊದಲಾದವರಿಗೆ ಶಾಪ ನೀಡಿದಾಗ, ಅವರ ಅಧಿಕಪುಣ್ಯವು ನಾಶವಾದ ಪ್ರಸಂಗ ರಾಮಾಯಣಾದಿಗಳಲ್ಲಿ ದಾಖಲಾಗಿದೆ. ಇದರಿಂದಾಗಿಯೇ ಶ್ರೇಷ್ಠಜ್ಞಾನಿಗಳು ಸಾಮಾನ್ಯವಾಗಿ ಶಾಪವನ್ನು ನೀಡುವುದಿಲ್ಲ. ದ್ರೌಪದಿಯು ಋಜುದೇವತೆ. ಅವರಿಗೆ ಯಾರಿಂದಲೂ ಅಪಾಯವಿಲ್ಲ ಎಂಬುದು ಮೊದಲು ಗಮನಿಸಬೇಕಾದ ಸಂಗತಿ. ಸಾಮಾನ್ಯವಾಗಿ ಶಾಪಾದಿಗಳನ್ನು ನೀಡುವುದು ಒಂದು ರೀತಿಯ ಅಶಕ್ತಿಯ ಸಂಕೇತವೂ ಹೌದು. ದ್ರೌಪದಿಗೆ ಅಂತಹ ಅಶಕ್ತಿಯೂ ಇಲ್ಲ, ನಿಜವಾದ ಆಪತ್ತೂ ಇಲ್ಲ. ಅಲ್ಲದೇ ಅವರು ಪುಣ್ಯವನ್ನು ವೃದ್ಧಿಸಿಕೊಳ್ಳುವ ಮಹಾಸಾಧಕರೆ ಹೊರತು ಪುಣ್ಯವನ್ನು ಕಳೆದುಕೊಳ್ಳುವವರಲ್ಲ[೧]. ಅದರಿಂದಾಗಿಯೇ ಅವರು

---

೧ ದ್ರೌಪದೀ ನ ಶಶಾಪೈನಂ ಯಸ್ಮಾತ್ತದ್ಗದತಃ ಶೃಣು ।
ಕ್ಷರತೀತಿ ತಪಃ ಕ್ರೋಧಾದೃಷಯೋ ನ ಶಪಂತಿ ಹಿ ॥
ಜಾನಂತೀ ತದ್ ಯಥಾತತ್ತ್ವಂ ಪಾಂಚಾಲೀ ನ ಶಶಾಪ ತಮ್ ।
ಕ್ಷಮಾ ಧರ್ಮಃ ಕ್ಷಮಾ ದಾನಂ ಕ್ಷಮಾ ಯಜ್ಞಃ ಕ್ಷಮಾ ಯಶಃ ॥
ಕ್ಷಮಾ ಸತ್ಯಂ ಕ್ಷಮಾ ಶೀಲಂ ಕ್ಷಮಾ ಕೀರ್ತಿಃ ಕ್ಷಮಾ ಪರಮ್ ।
ಕ್ಷಮಾ ಪುಣ್ಯಂ ಕ್ಷಮಾ ತೀರ್ಥಂ ಕ್ಷಮಾ ಸರ್ವಮಿತಿ ಶ್ರುತಿಃ ॥
ಕ್ಷಮಾವತಾಮಯಂ ಲೋಕಃ ಪರಶ್ಚೈವ ಕ್ಷಮಾವತಾಮ್ ।
ಏತತ್ ಸರ್ವಂ ವಿಜಾನಂತೀ ಸಾ ಕ್ಷಮಾಮನ್ವಪದ್ಯತ ॥
ಭರ್ತೄಣಾಂ ಮತಮಾಜ್ಞಾಯ ಕ್ಷಮಿಣಾಂ ಧರ್ಮಚಾರಿಣಾಮ್ ।
ನಾಶಪತ್ ತಂ ವಿಶಾಲಾಕ್ಷೀ ಸತೀ ಶಕ್ತಾಪಿ ಭಾರತ ॥ –ಮ.ಭಾ.(ವಿರಾಟಪರ್ವ ೧೬)

ಶಾಪಾದಿಗಳನ್ನು ನೀಡದೇ ಆ ಪ್ರಸಂಗವನ್ನು ನಿಭಾಯಿಸಿದರು. ಇದೇ ಕಾರಣಕ್ಕಾಗಿಯೇ ಕುಂತಿಯು ಮುಂದೆ ದ್ರೌಪದಿಯನ್ನು ಬಹಳವಾಗಿ ಶ್ಲಾಘಿಸುವಳು ಎಂಬ ಅಂಶ ಮಹಾಭಾರತದಲ್ಲಿ ದಾಖಲಾಗಿದೆ.

## ದ್ರೌಪದಿಯ ಧರ್ಮನಿಷ್ಠೆ

ಇಂತಹ ಪ್ರಸಂಗವನ್ನು ಕಣ್ಣಾರೆ ಕಂಡರೂ ಸಹ ದುರ್ಯೋಧನ ಬದಲಾಗಲಿಲ್ಲ, ತನ್ನ ದೌರ್ಜನ್ಯವನ್ನು ನಿಲ್ಲಿಸಲಿಲ್ಲ. ವಸ್ತ್ರಾಪಹರಣಕಾರ್ಯದಲ್ಲಿ ವಿಫಲನಾದ ಅವನು ಅವಳನ್ನು ತನ್ನ ಅಂತಃಪುರಕ್ಕೆ ಕರೆದೊಯ್ಯಲು ದುಃಶಾಸನನಿಗೆ ಅಪ್ಪಣೆ ಮಾಡಿದ. ಕೂಡಲೇ ಭೀಮಸೇನ ಮೇಲೆದ್ದು ''ಇನ್ನು ಸಹನೆಗೆ ಅವಕಾಶವಿಲ್ಲ, ವ್ಯಕ್ತಿ ಅಳಿದ ಮೇಲೆ ಉಳಿಯುವುದು ಎಂದರೆ ಅವನು ಸಂಪಾದಿಸಿದ ಜ್ಞಾನ, ಮಾಡಿದ ಸಾಧನೆ ಹಾಗೂ ಪಡೆಯುವ ಸಂತತಿ ಮಾತ್ರ[೧]. ಪತ್ನಿಯ ಸಂರಕ್ಷಣೆ ಮಾಡದಿದ್ದಲ್ಲಿ ಉತ್ತಮ ಸಂತತಿ ಲಭಿಸದು; ದುರ್ಯೋಧನ ಈಗ ಇಂತಹ ಪರಮದುಷ್ಕಾರ್ಯಕ್ಕೆ ಎಳೆಸಿರುವನು. ಆದ್ದರಿಂದ ಅವನನ್ನು ಸಪರಿವಾರವಾಗಿ ಸದೆಬಡೆಯುವೆ'' ಎಂದು ಪರಿಘ ಎಂಬ ಆಯುಧವನ್ನು ಕೈಗೆತ್ತಿಕೊಳ್ಳಲು ಹೊರಟ ಕೂಡಲೇ ಭೂಕಂಪ, ಧೂಮಕೇತು ದರ್ಶನ ಮೊದಲಾದ ಬಗೆಬಗೆಯ ದುಃಶಕುನಗಳು ಕಾಣಿಸಿಕೊಂಡವು. ಸಭೆಯಲ್ಲಿ ಹಾಹಾಕಾರವೆದ್ದಿತು. ಅದನ್ನೆಲ್ಲ ಕಾಣಲಾಗದ ಧೃತರಾಷ್ಟ್ರ ಅದಕ್ಕೆಲ್ಲ ಕಾರಣವನ್ನು ಕೇಳಿದಾಗ ವಿದುರ ಹೇಳಿದ ''ಇದು ನಿನ್ನ ಮಕ್ಕಳ ಅಳಿವಿನ ಮುನ್ಸೂಚನೆ, ನೀನೀಗ ಸ್ವಲ್ಪ ತಡ ಮಾಡಿದರೂ ನಿನ್ನ ಮಕ್ಕಳೆಲ್ಲ ಭೀಮಸೇನನಿಗೆ ಆಹುತಿಯಾಗುವರು. ನೀನು ದ್ರೌಪದಿಯನ್ನು ಕೂಡಲೇ ಸಮಾಧಾನಪಡಿಸಿ ಪರಿಸ್ಥಿತಿಯನ್ನು ಶಾಂತಗೊಳಿಸು''. ಧೃತರಾಷ್ಟ್ರ ಅದರಂತೆ ದ್ರೌಪದಿಯನ್ನು ಕರೆದು ಕೇಳಿದ. ''ಅಮ್ಮಾ! ನನ್ನ

---

೧ ತ್ರೀಣಿ ಜ್ಯೋತೀಂಷಿ ಪುರುಷ ಇತಿ ವೈ ದೇವಲೋಽಬ್ರವೀತ್ ।
ಅಪತ್ಯಂ ಕರ್ಮ ವಿದ್ಯಾ ಚ ಯತಃ ಸೃಷ್ಟಾಃ ಪ್ರಜಾಸ್ತತಃ ॥
ಅಮೇಧ್ಯೇ ವೈ ಗತಪ್ರಾಣೇ ಶೂನ್ಯೇ ಜ್ಞಾತಿಭಿರುಜ್ಝಿತೇ ।
ದೇಹೇ ತ್ರಿತಯಮೇವೈತತ್ ಪುರುಷಸ್ಯೋಪಯುಜ್ಯತೇ ॥
ತನ್ನೋ ಜ್ಯೋತಿರಭಿಹತಂ ದಾರಾಣಾಮಭಿಮರ್ಶನಾತ್ ।
ಧನಂಜಯ ಕಥಂಸ್ವಿತ್ ಸ್ಯಾದಪತ್ಯಮಭಿಮೃಷ್ಟಜಮ್ ॥ -ಮ.ಭಾ.(ಸಭಾಪರ್ವ (೭೨/೫-೭)
ಪತಿತಸ್ಯಾಸ್ಯ ದೇಹಸ್ಯ ಕಾಷ್ಠವಿಷ್ಠಾಸಮಸ್ಯ ಚ ।
ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾ ಕರ್ಮ ಸುತಾ ಇತಿ ॥
ಇತಿ ವೇದೋದಿತಂ ವಾಕ್ಯಂ ನ ಸುತೋ ದಾರದೂಷಣೇ ।
ದುಷ್ಟದಾರೋ ನ ಚಾಪ್ನೋತಿ ಲೋಕಾನರ್ಥೋ ಹಿ ದೂಷಿತಃ ॥
ಅರಕ್ಷಣಾದ್ದೂಷಿತಾಯಾ ನ ತ್ಯಾಗಾಚ್ಚ ಶುಭಂ ಭವೇತ್ ॥
ಅತೋಽದ್ಯ ಸಾನುಬಂಧಕಾನ್ ನಿಹನ್ಮಿ ಧಾರ್ತರಾಷ್ಟ್ರಕಾನ್ ।
ಇತಿ ಬ್ರುವನ್ ವ್ಯಲೋಕಯದ್ರಿಪೂನ್ ದಹನ್ನಿವೌಜಸಾ ॥ -ಮ.ಭಾ.ತಾ.ನಿ(೨೧/೩೬೨-೩೬೪)

ಮಕ್ಕಳಿಂದ ಅಪಚಾರವಾಗಿದೆ; ಅವರನ್ನು ಕ್ಷಮಿಸು; ನಿನಗೀಗ ನಾನು ವರಗಳನ್ನು ನೀಡುವೆ; ಬಯಸಿದ್ದನ್ನು ಕೇಳಿಕೊ'' ಎಂದ.

ದ್ರೌಪದಿಯು ಆಗ ಕೇಳಿದ್ದು ಸಕಲ ಪಾಂಡವರ ವಿಮೋಚನೆ ಹಾಗೂ ಅವರ ಸಕಲ ಸ್ವತ್ತುಗಳನ್ನು ಹಿಂದಿರುಗಸಬೇಕು ಎಂಬ ಎರಡು ವರಗಳನ್ನು ಮಾತ್ರ. ಧೃತರಾಷ್ಟ್ರ ಅದಕ್ಕೆ ಸಮ್ಮತಿಸಿ ಇನ್ನಷ್ಟು ವರಗಳನ್ನು ಕೇಳಲು ಕೇಳಿಕೊಂಡ. ದ್ರೌಪದಿಯು ಮಹಾರಾಣಿಯಾದವಳಿಗೆ ಎರಡು ವರಗಳನ್ನು ಮಾತ್ರ ಮಾವನಾದವನಿಂದ ಕೇಳಿಕೊಳ್ಳುವ ಅವಕಾಶವನ್ನು ಭಾಗವತ ಧರ್ಮ ನೀಡಿದೆ. ಮೂರನೇ ವರ ಕೇಳುವುದು [೧]ಧರ್ಮಬಾಹಿರ. ಧರ್ಮ ತಪ್ಪುವುದು ಸರಿಯಲ್ಲ, ಬೇರಾವ ವರವೂ ತನಗೆ ಬೇಕಿಲ್ಲ ಎಂದು ನಿರಾಕರಿಸಿಬಿಟ್ಟಳು.

ಧರ್ಮಶಾಸ್ತ್ರದಲ್ಲಿ ಒಬ್ಬ ಬ್ರಾಹ್ಮಣಸ್ತ್ರೀಯು ತನ್ನ ಮಾವನಿಂದ ನೂರು ವರಗಳನ್ನೂ, ಕ್ಷತ್ರಿಯಸ್ತ್ರೀಯು ಮೂರು ವರಗಳನ್ನು ಕೇಳಲು ಅವಕಾಶ ನೀಡಿರುವರು[೨]. ಹಾಗೆ ಕೇಳಿಕೊಳ್ಳುವುದು ಧರ್ಮದ ಲೋಪ ಎನ್ನಿಸದು ಎಂಬ ವಿವರಣೆಯು ಅಲ್ಲಿ ಬಂದಿದೆ.

---

೧ ಅನ್ವೇಷಣಮೇವ ತದ್ಧರ್ಮೇ ಕೃಷ್ಣೈಕಾ ಸಂಸ್ಥಿತಾ ಸದಾ।
ಧೃತರಾಷ್ಟ್ರಾದಪಿ ವರಂ ತತೋ ನಾತ್ಮಾರ್ಥಮಗ್ರಹೀತ್ ॥
ನಾಶಪದಾರ್ಥರಾಷ್ಟ್ರಾಂಶ್ಚ ಮಹಾಪದ್ಯಪಿ ಸಾ ತತಃ।
ನ ವಾಚಾ ಮನಸಾ ವಾಽಪಿ ಪ್ರತೀಪಂ ಕೇಶವೇಽಚರತ್ ॥ -ಮ.ಭಾ.ತಾ.ನಿ(೧೮/೧೬,೧೭)

೨ ಲೋಭೋ ಧರ್ಮಸ್ಯ ನಾಶಾಯ ಭಗವನ್ ನಾಹಮುತ್ಸಹೇ।
ಅನರ್ಹಾ ವರಮಾದಾತುಂ ತೃತೀಯಂ ರಾಜಸತ್ತಮ ॥
ಏಕಮಾಹುರ್ವೈಶ್ಯವರಂ ದ್ವೌ ತು ಕ್ಷತ್ರಸ್ತ್ರಿಯಾ ವರೌ।
ತ್ರಯಸ್ತು ರಾಜ್ಞೋ ರಾಜೇಂದ್ರ ಬ್ರಾಹ್ಮಣಸ್ಯ ಶತಂ ವರಾಃ॥ -ಮ.ಭಾ.(ಸಭಾಪರ್ವ/೭೧/೩೪,೩೫)
ಛಂದಿತಾ ಸಾ ವರೈಸ್ತೇನ ಧರ್ಮೇ ಭಾಗವತೇ ಸ್ಥಿತಾ।
ಸ್ವೈವಾತ್ಮನೋ ವರಾನ್ ವವ್ರೇ ವವ್ರೇ ತೇಷಾಂ ವಿಮೋಕ್ಷಣಮ್ ॥
ಯುಧಿಷ್ಠಿರಸ್ಯ ಸಭ್ರಾತುಃ ಸರಾಷ್ಟ್ರಸ್ಯ ವಿಮೋಕ್ಷಣಮ್ ।
ದದೌ ನೃಪೋಽಸ್ಯಾ ನ ಪುನಶ್ಛಂದ್ಯಮಾನಾಽಪಿ ಸಾಽವೃಣೋತ್ ॥
ಭರ್ತುರ್ವಿಷ್ಣೋಶ್ಚ ನಾನ್ಯಸ್ಮಾದ್ವರಸ್ವೀಕಾರ ಇಷ್ಯತೇ।
ಏವಂ ಹಿ ಭಗವದ್ಧರ್ಮಸ್ತಸ್ಮಾತ್ ಸಾ ನಾವೃಣೋತ್ ಪರಮ್ ॥
ಅಧರ್ಮತೋ ಹೃತತ್ವಾತ್ ತು ತದ್ದಾನಂ ನ ವರೋ ಭವೇತ್ ।
ಇತಿ ಮತ್ವಾ ಪಾಂಡವಾನಾಂ ವವ್ರೇ ಕೃಷ್ಣಾ ವಿಮೋಕ್ಷಣಮ್ ॥
ಶ್ವಶುರಾದ್ವೈಹಿಕವರಾಃ ಕ್ಷತ್ರಿಯಾಯಾಸ್ತ್ರಯೋ ಯತಃ।
ಉಕ್ತಾಃ ಶತಂ ಚ ವಿಪ್ರಾಯಾ ಧರ್ಮೇ ಭಾಗವತೇ ತತಃ।
ಹೇತುನಾಽನೇನ ವವ್ರೇ ಸಾ ನಾನ್ಯತ್ ಕಿಂಚಿದತಃ ಪರಮ್ ॥
-ಮ.ಭಾ.ತಾ.ನಿ (೨೧/೩೭೭-೩೮೧)

ಆದರಂತೆ ಕ್ಷತ್ರಿಯಸ್ತ್ರೀಯಾದ ದ್ರೌಪದಿಯು ಮೂರು ವರಗಳನ್ನು ಕೇಳಬಹುದಿತ್ತು. ರಾಜವನಿತೆಯಾದ್ದರಿಂದ ಎರಡು ವರಗಳನ್ನು ಕೇಳುವ ಅವಕಾಶವಿತ್ತು. ಅಷ್ಟು ಮಾತ್ರವನ್ನೇ ಕೇಳಿದ ದ್ರೌಪದೀ ಹೆಚ್ಚಿನ ವರಗಳನ್ನು ಕೇಳಲಿಲ್ಲ ಎಂಬುದು ಅವಳ ಭಾಗವತಧರ್ಮದ ನಿಷ್ಠೆಗೆ ಅತ್ಯುತ್ತಮ ನಿದರ್ಶನ. ಅಂತಹ ದುರ್ಭರ ಪ್ರಸಂಗದಲ್ಲೂ ಆಸೆಗೊಳಗಾಗದ ಅಪೂರ್ವತೆ ದ್ರೌಪದಿಯದಾಗಿತ್ತು. ಇನ್ನೂ ವಿಚಾರ ಮಾಡಿದರೆ ಅವೆರಡೂ ಸಹ ನಿಜವಾಗಿ ವರಗಳೇ ಅಲ್ಲ. ಕಪಟದ್ಯೂತದಲ್ಲಿ ನ್ಯಾಯಬಾಹಿರವಾಗಿ ದುರ್ಯೋಧನಾದಿಗಳು ಪಡೆದಿದ್ದನ್ನು ಹಿಂದಿರುಗಿ ಪಡೆಯುವುದು ಕರ್ತವ್ಯವೇ ಹೊರತು, ಅದು ಇನ್ನೊಬ್ಬರ ಅನುಗ್ರಹ ಎಂಬ ಲೆಕ್ಕಕ್ಕೆ ಸೇರುವುದಿಲ್ಲ. ಆದ್ದರಿಂದ ದ್ರೌಪದಿಯು ಯಾವ ವರವನ್ನೂ ಕೇಳಲಿಲ್ಲ ಎಂಬುದೇ ನಿಜವಾದ ಅರ್ಥ. ಆದರೂ, ಆ ಸಮಯದಲ್ಲಿ ಗುರುಹಿರಿಯರಿಗೆ ನೋವಾಗದಂತೆ ತನ್ನ ಹಕ್ಕನ್ನು ವರದ ರೂಪದಲ್ಲಿ ಪಡೆದುಕೊಂಡಿದ್ದು ದ್ರೌಪದಿಯ ವಿನೀತ ವರ್ತನೆಗೆ ಸಾಕ್ಷಿ. ಅಧರ್ಮವನ್ನು ಸಹ ಹಕ್ಕು ಎಂಬಂತೆ ನಡೆಸುವ ಜನರೆಲ್ಲಿ? ಧಾರ್ಮಿಕ ಹಕ್ಕನ್ನು ಸಹ ವರವೆಂಬಂತೆ ಪಡೆಯುವ ದ್ರೌಪದಿಯ ವಿನಯವೆಲ್ಲಿ? ದೊಡ್ಡವರ ರೀತಿ ಎಷ್ಟು ದೊಡ್ಡದು ಎಂಬುದಕ್ಕೆ ದ್ರೌಪದಿಯ ಈ ಪ್ರಸಂಗ ಉತ್ತಮ ನಿದರ್ಶನ.

## ವನವಾಸಕ್ಕೆ ಪಾಂಡವರು

ರಾಜ್ಯ ಮೊದಲಾದ ತಮ್ಮ ಸಕಲವನ್ನು ಹಿಂದಕ್ಕೆ ಪಡೆದು ಪಾಂಡವರು ಇಂದ್ರಪ್ರಸ್ಥದತ್ತ ಪ್ರಯಾಣ ಬೆಳೆಸಿದರು. ಆದರೆ ದುಃಶಾಸನ ಮತ್ತೆ ಧೃತರಾಷ್ಟ್ರನ ಬಳಿಗೆ ತೆರಳಿ ''ನಮ್ಮ ಪರಿಶ್ರಮವೆಲ್ಲ ನಿನ್ನ ವರ್ತನೆಯಿಂದ ವ್ಯರ್ಥವಾಯಿತು'' ಎಂದು ಅವನನ್ನು ಹಳಿದ. ಕೆರಳಿರುವ ಪಾಂಡವರಿಗೆ ತಾವು ಬಲಿಯಾಗುವುದು ನಿಶ್ಚಯ ಎಂದು ದುಃಖಿಸಿದ. ತಾವು ಇನ್ನಷ್ಟು ಕಾಲ ಬದುಕಬೇಕೆಂದಿದ್ದರೆ ಪಾಂಡವರನ್ನು ಮತ್ತೊಮ್ಮೆ ದ್ಯೂತಕ್ಕೆ ಆಹ್ವಾನಿಸಲೇಬೇಕು ಎಂದ ಹಠ ಹಿಡಿದ. ಕಲ್ಯಾವೇಶದಿಂದಾಗಿ ಪುತ್ರವ್ಯಾಮೋಹಕ್ಕೆ ಒಳಗಾಗಿದ್ದ ಧೃತರಾಷ್ಟ್ರ ಮತ್ತೊಮ್ಮೆ ಯುಧಿಷ್ಠಿರನನ್ನು ದ್ಯೂತಕ್ಕೆ ಆಹ್ವಾನಿಸಿದ. ದ್ಯೂತಕ್ಕೆ ಕರೆದರೆ ನಿರಾಕರಿಸಲಾರೆ ಎಂಬ ತನ್ನ ಪ್ರತಿಜ್ಞೆಯನ್ನು ಪಾಲಿಸಲೆಂದು ಯುಧಿಷ್ಠಿರ ಪುನಃ ದ್ಯೂತಕ್ಕೆ ಆಗಮಿಸಿದ. ಮತ್ತೊಮ್ಮೆ ಶಕುನಿಯ ಕಪಟಕ್ಕೆ ಬಲಿಯಾಗಿ, ಸಂಪೂರ್ಣವಾಗಿ ಸೋತ. ಸೋತವರು ಹನ್ನೆರಡು ವರ್ಷ ವನವಾಸ ಹಾಗು ಒಂದು ವರ್ಷ ಅಜ್ಞಾತವಾಸ ಎಂಬ ಕರಾರಿನಂತೆ, ಸೋದರರು ಹಾಗೂ ದ್ರೌಪದಿಯ ಸಮೇತ ಕಾಡಿಗೆ ತೆರಳಿದ. ಆಗಲೂ ಪಾಂಡವರ ಸತ್ಯಸಂಧತೆ ಮೊದಲಾದ ಹಿರಿಮೆಯನ್ನು ಅರ್ಥಮಾಡಿಕೊಳ್ಳದ ದುರ್ಯೋಧನನ ತಮ್ಮಂದಿರು ಕಾಡಿಗೆ ಹೊರಟುನಿಂತ ಪಾಂಡವರನ್ನು 'ಗೌಃ ಗೌಃ' ಎಂದೂ, ಜೊಳ್ಳೆಳ್ಳುಗಳೆಂದೂ ಅಪಹಾಸ್ಯ ಮಾಡಿದರು. ಕೆರಳಿದ ಭೀಮಸೇನನು ದುರ್ಯೋಧನ, ದುಃಶಾಸನರೊಂದಿಗೆ ಉಳಿದ ತೊಭತ್ತೆಂಟು ಜನರನ್ನು ಸಹ ಕೊಲ್ಲುವ ಪ್ರತಿಜ್ಞೆ ಮಾಡಿದ.

ಅವರೆಲ್ಲ ದ್ರೋಣರನ್ನು ಶರಣುಹೊಕ್ಕು ಅವರಿಂದ ಯಥಾಶಕ್ತಿ ರಕ್ಷಣೆಯ ಭರವಸೆಯನ್ನು ಪಡೆದುಕೊಂಡರು. ಅಂತಹ ಸನ್ನಿವೇಶದಲ್ಲೂ ಯುವಸಿಂಹದಂತೆ ಗಂಭೀರ ನಡಿಗೆಯಿಂದ ಸಭೆಯಿಂದ ಹೊರನಡೆದ ಭೀಮನನ್ನು ದುರ್ಯೋಧನ ಅವನ ನಡಿಗೆಯನ್ನು ಅನುಕರಿಸಿ ಅಪಹಾಸ್ಯ ಮಾಡಿದ. ಕೂಡಲೇ ಭೀಮಸೇನ ಅವನ ಇನ್ನೊಂದು ತೊಡೆಯನ್ನು ಸಹ ಮುರಿಯುವುದಾಗಿ ಪ್ರತಿಜ್ಞೆ ಮಾಡಿದ. ಮುಂದೆ ಪಾಂಡವರು ಕುಂತಿಯ ಬಳಿಗೆ ತೆರಳಿ, ಅವಳ ಅನುಮತಿ ಪಡೆದು ಕಾಡಿಗೆ ತೆರಳಿದರು. ಆಗ ಕುಂತಿಯು ದ್ರೌಪದಿಯನ್ನು ಬಹಳವಾಗಿ ಅಭಿನಂದಿಸುತ್ತಾ ನುಡಿದಳು ''ದ್ರೌಪದಿ! ನಿನಗೆ ನಾನು ಯಾವ ಸಂದೇಶವನ್ನೂ ನೀಡುವ [1]ಅಗತ್ಯವಿಲ್ಲ. ನೀನು ಕೌರವರನ್ನು ಇಂದು ಸುಟ್ಟು ಹಾಕಲಿಲ್ಲ ಎಂಬುದು ಅವರ ಪುಣ್ಯ. ನಿನ್ನಿಂದ ಉಭಯ ಕುಲಗಳಿಗೂ ಶೋಭೆ ಉಂಟಾಗಿದೆ'' ಎಂದು ಕೊಂಡಾಡಿದಳು.

ಕಾಡಿಗೆ ತೆರಳುವಾಗ ದ್ರೌಪದಿಯು ದುಃಶಾಸನನಿಂದಾಗಿ ಬಿಚ್ಚಿ ಹೋಗಿದ್ದ ತನ್ನ ಮುಡಿಯನ್ನು ಕಟ್ಟಿಕೊಳ್ಳದೆ ಹಾಗೆಯೇ ತೆರಳಿದಳು. ಧೃತರಾಷ್ಟ್ರನು ಅದಕ್ಕೆ ಕಾರಣವನ್ನು ತಿಳಿಯಬಯಸಿದಾಗ ವಿದುರ ತಿಳಿಸಿದ; ತನ್ನ ಮುಡಿಯನ್ನು ಬಿಚ್ಚುವ ಪ್ರಯತ್ನಕ್ಕೆಳಸಿದ ದುಷ್ಟರ ಪತ್ನಿಯರೆಲ್ಲರು ಎಂದೂ ಹಾಗೆ ಬಿಚ್ಚಿದ ಮುಡಿಯವರೇ ಆಗುವರು ಎಂಬುದು ಅದರ ಸೂಚನೆಯಾಗಿತ್ತು[2]. ಎಂದರೆ, ದುರ್ಯೋಧನಾದಿಗಳೆಲ್ಲ ಹತರಾಗಿ ಅವರ ಪತ್ನಿಯರು ಶೋಚನೀಯವಾದ ಸ್ಥಿತಿಯನ್ನು ತಲುಪುವರು ಎಂಬುದು ಅದರ ಅರ್ಥವಾಗಿತ್ತು. ಮುಂದೆ ನಡೆದಿದ್ದು ಸಹ ಹಾಗೆಯೇ.

---

೧ ಕುಂತೀ ಚ ಭೃಶಸಂತಪ್ತಾ ದ್ರೌಪದೀಂ ಪ್ರೇಕ್ಷ್ಯ ಗಚ್ಛತೀಮ್ ।
ಶೋಕವಿಹ್ವಲಯಾ ವಾಚಾ ಕೃಚ್ಛ್ರಾದ್ ವಚನಮಬ್ರವೀತ್ ॥
ವತ್ಸೇ ಶೋಕೋ ನ ತೇ ಕಾರ್ಯಃ ಪ್ರಾಪ್ಯೇದಂ ವ್ಯಸನಂ ಮಹತ್ ।
ಸ್ತ್ರೀಧರ್ಮಾಣಾಮಭಿಜ್ಞಾಽಸಿ ಶೀಲಾಚಾರವತೀ ತಥಾ ॥
ನ ತ್ವಾಂ ಸಂದೇಷ್ಟುಮರ್ಹಾಮಿ ಭರ್ತೄನ್ ಪ್ರತಿ ಶುಚಿಸ್ಮಿತೇ ।
ಸಾಧ್ವೀಗುಣಸಮಾಪನ್ನಾ ಭೂಷಿತಂ ತೇ ಕುಲದ್ವಯಮ್ ॥
ಸಭಾಗ್ಯಾಃ ಕುರವಶ್ಚ ಮೇ ಯೇ ನ ದಗ್ಧಾಸ್ತ್ವಯಾಽನಘೇ ।
ಅರಿಷ್ಟಂ ವ್ರಜ ಪಂಥಾನಂ ಮದನುಧ್ಯಾನಬೃಂಹಿತಾ ॥
ಭಾವಿನ್ಯರ್ಥೇ ಹಿ ಸತ್ಸ್ತ್ರೀಣಾಂ ವೈಕೃತಂ ನೋಪಜಾಯತೇ ।
ಗುರುಧರ್ಮಾಭಿಗುಪ್ತಾ ಚ ಶ್ರೇಯಃ ಕ್ಷಿಪ್ರಮವಾಪ್ಸ್ಯಸಿ ॥ -ಮ.ಭಾ.(ಸಭಾಪರ್ವ/.೭೯/೩-೭)

೨ ಏಕವಸ್ತ್ರಾ ಪ್ರರುದತೀ ಮುಕ್ತಕೇಶೀ ರಜಸ್ವಲಾ ।
ಶೋಣಿತೇನಾಕ್ತವಸನಾ ದ್ರೌಪದೀ ವಾಕ್ಯಮಬ್ರವೀತ್ ॥
ಯತ್ಕೃತೇಽಹಮಿದಂ ಪ್ರಾಪ್ತಾ ತೇಷಾಂ ವರ್ಷೇ ಚತುರ್ದಶೇ ।
ಹತಪತ್ನ್ಯೋ ಹತಸುತಾ ಹತಬಂಧುಜನಪ್ರಿಯಾಃ ॥
ಬಹುಶೋಣಿತದಿಗ್ಧಾಂಗ್ಯೋ ಮುಕ್ತಕೇಶ್ಯೋ ರಜಸ್ವಲಾಃ ।
ಏವಂ ಕೃತೋದಕಾ ಭಾರ್ಯಾಃ ಪ್ರವೇಕ್ಷ್ಯಂತಿ ಗಜಾಹ್ವಯಮ್ ॥ - ಮ.ಭಾ.(ಸಭಾ ೮೦/೧೯-೨೧)

# ವನವಾಸದಲ್ಲಿ ದ್ರೌಪದಿ

ಪಾಂಡವರು ವನವಾಸಕ್ಕೆ ತೆರಳಿದಾಗ ದ್ರೌಪದಿಯೊಂದಿಗೆ ಅವರ ಇತರ ಅನೇಕ ಪತ್ನಿಯರು, ಪುತ್ರರು ಸಹ ಅವರನ್ನು ಹಿಂಬಾಲಿಸಿದರು.

ಪಾಂಡವರ ವನವಾಸ ಪ್ರಾರಂಭವಾಯಿತು. ರಾಮಾಯಣದಲ್ಲಿ ಶ್ರೀರಾಮ, ಸೀತೆ ಹಾಗೂ ಲಕ್ಷ್ಮಣರು ಕಾಡಿಗೆ ತೆರಳಿದಾಗ ಅಯೋಧ್ಯೆಗೆ ಅಯೋಧ್ಯೆಯೇ ಹಿಂಬಾಲಿಸಿ ಬಂದಂತೆ, ಪಾಂಡವರ ಹಿಂದೆಯೂ ಹಸ್ತಿನಾಪುರದ ಜನತೆ ಧಾವಿಸಿ ಬಂದಿತ್ತು. ಶ್ರೀರಾಮ ಮಾಡಿದಂತೆ ಪಾಂಡವರು ಸಹ ಅವರಿಗೆ ಹಿತೋಕ್ತಿಯನ್ನು ನೀಡಿ ಮರಳಿ ಕಳುಹಿಸಿಕೊಟ್ಟರು. ಅವರು ವನವನ್ನು ಪ್ರವೇಶಿಸಿದ ಮೊದಲ ರಾತ್ರಿಯಂದೇ ಕಿರ್ಮೀರನೆಂಬ ಮಹಾದೈತ್ಯ ಅವರನ್ನು ಆಕ್ರಮಿಸಲು ಬಂದ. ಭೀಮಸೇನ ಅವನನ್ನು ತೃಣಪ್ರಾಯವಾಗಿ ಬಗೆದು ಸಂಹರಿಸಿದ. ಆ ವಾರ್ತೆ ಮುಂದೆ ದುರ್ಯೋಧನನ ಕಿವಿಗೆ ಬಿದ್ದು ಅವನು ಅದು ತನ್ನ ಸಾವಿಗೆ ಮುನ್ಸೂಚನೆ ಎಂದು ತಿಳಿದು ಖಿನ್ನನಾದ.

ಪಾಂಡವರಂತಹ ಸಜ್ಜನರ ಸಹವಾಸಕ್ಕೆ ಇದು ಅತ್ಯಂತ ಸಕಾಲ ಎಂದು ಭಾವಿಸಿ ವಿವಿಧ ಕಡೆಗಳಿಂದ ಋಷಿಗಳು, ಮುನಿಗಳು, ಯತಿಗಳು ಅವರಿದ್ದ ಸ್ಥಳಕ್ಕೆ ಧಾವಿಸಿದರು. ಅವರ ಸಂಖ್ಯೆ ಎಣಿಕೆಗೆ ಮೀರಿತ್ತು. ಯುಧಿಷ್ಠಿರ ಅವರನ್ನು ಹೇಗೆ ಪಾಲಿಸುವುದು ಎಂದು ಯೋಚಿಸಿದ. ಅವರೇನೋ ಹೇಳಿದ್ದರು, 'ನಮಗೆ ಬೇಕಿರುವುದು ನೀವು ನೀಡುವ ಅನ್ನಪಾನಾದಿಗಳಲ್ಲ, ನಮಗೆ ಅಗತ್ಯವೆನ್ನಿಸಿರುವುದು ನಿಮ್ಮಂತಹ ಸಜ್ಜನರ ಸಹವಾಸ. ಊಟದ ವ್ಯವಸ್ಥೆಯನ್ನು ನಾವೇ ಮಾಡಿಕೊಳ್ಳುವೆವು' ಎಂದು. ಸಜ್ಜನರ ಸಂಗದ ಮಹತ್ವವನ್ನು ಇದರಿಂದ ತಿಳಿಯಬಹುದು. ಅನ್ನಕ್ಕಾಗಿಯೇ ಸಜ್ಜನರ ಬಳಿಗೆ ತೆರಳುವ ಜನ ಇದನ್ನು ಅರ್ಥಮಾಡಿಕೊಳ್ಳಬೇಕು. ಸಜ್ಜನರ ಸಹವಾಸದ ಮುಖ್ಯ ಫಲ ಜ್ಞಾನ ಎನ್ನುವುದು ಇದರ ತಾತ್ಪರ್ಯ. ಆದರೆ, ಧರ್ಮರಾಜ ಯೋಚಿಸಿದ; ಅತಿಥಿ ಪೂಜೆ ವನವಾಸದಲ್ಲಿದ್ದಾಗಲೂ ಗೃಹಸ್ಥನಿಗೆ ಕಡ್ಡಾಯವೆನ್ನಿಸುವ ಧರ್ಮ. ತಾವಂತೂ ರಾಜಸೂಯಯಾಗ ಮಾಡಿದ ಚಕ್ರವರ್ತಿಗಳು. ಅಂತಹವರಿಗೆ ಈ ಜನರ ಸಂರಕ್ಷಣೆ ಮುಖ್ಯ ಕರ್ತವ್ಯವೇ ಆಗಿದೆ. ಹಾಗೆ ಯೋಚಿಸಿದವನೇ ಧೌಮ್ಯರೊಂದಿಗೆ ಸಮಾಲೋಚಿಸಿ ಅವರಿಂದ ಸೂರ್ಯಾಷ್ಟೋತ್ತರಶತನಾಮಸ್ತೋತ್ರದ ಉಪದೇಶ ಪಡೆದು, ಸರೋವರವೊಂದರಲ್ಲಿ ಮಿಂದು, ಕತ್ತಿನವರೆಗೆ ನೀರು ಬರುವಂತೆ ನಿಂತು ಅದನ್ನು ಭಕ್ತಿಯಿಂದ ಪಠಿಸಿದ; ಅವನು ಮುಖ್ಯವಾಗಿ ಆರಾಧಿಸಿದ್ದು ಸೂರ್ಯಾಂತರ್ಗತನಾದ ಶ್ರೀಹರಿಯನ್ನೇ. ಸೂರ್ಯ ಪ್ರತ್ಯಕ್ಷನಾಗಿ ಅಕ್ಷಯಪಾತ್ರೆಯನ್ನು ನೀಡಿದ. ಒಮ್ಮೆ ಅದರಲ್ಲಿ ಪಾಕ ಮಾಡಿ ಹಾಕಿದ ಸಕಲ ಪದಾರ್ಥಗಳು ಸಹ ಅಕ್ಷಯವಾಗುವವು ಎಂಬುದು ಅದರ ಹಿರಿಮೆ. ಅದರಿಂದ ಅತಿಥಿ ಪೂಜೆ ನಿರ್ವಿಘ್ನವಾಗಿ ನಡೆಯುವುದು. ಅದರಲ್ಲಿ ಆಹಾರದೊಂದಿಗೆ ರತ್ನಾದಿಗಳು ಸಹ ಲಭಿಸುತ್ತಿದ್ದವು. ಅದು ಬ್ರಾಹ್ಮಣರಿಗೆ ನೀಡುವ ದಕ್ಷಿಣೆಗೆ ವಿನಿಯೋಗವಾಗುತ್ತಿದ್ದವು.

ಅಕ್ಷಯಪಾತ್ರೆಯ ಪ್ರಭಾವದಿಂದ ಪಾಂಡವರಿಗೆ ಅತಿಥಿ ಪೂಜೆಯ ದೊಡ್ಡ ಸಮಸ್ಯೆ ಬಗೆಹರಿಯಿತು. ದ್ರೌಪದಿಯ ಕೈಯಿಂದ ಸಿದ್ಧವಾದ ಅಡುಗೆಯನ್ನು ಅದರಲ್ಲಿ ಹಾಕಿ ಬಡಿಸಲು ಪ್ರಾರಂಭಿಸಿದರೆ ಅದಕ್ಕೆ ಕೊನೆಯೇ ಇರುತ್ತಿರಲಿಲ್ಲ. ಎಲ್ಲರಿಗೂ ಸಾಕಾಗುವಷ್ಟು ಅನ್ನ ಮೊದಲಾದ ಬಯಸಿದ ಸಕಲ ಪದಾರ್ಥವು ಅದರಲ್ಲಿ ಬರುತ್ತಿತ್ತು. ಅತಿಥಿಗಳೆಲ್ಲರ ಭೋಜನವಾದ ಮೇಲೆ ಯುಧಿಷ್ಠಿರನ ಬಯಕೆಯಂತೆ ಭೀಮಸೇನಾದಿ ನಾಲ್ವರು ಭೋಜನ ಮಾಡುತ್ತಿದ್ದರು. ಆ ಬಳಿಕ ಯುಧಿಷ್ಠಿರನ ಭೋಜನ. ಕಟ್ಟಕಡೆಯಲ್ಲಿ ದ್ರೌಪದಿಯ [1]ಭೋಜನ. ಹೀಗೆ ನಿರಂತರ ನಡೆಯತೊಡಗಿತು.

ಅದೇನೋ ಅಕ್ಷಯಪಾತ್ರೆ ಎಂಬುದು ಸರಿ. ಆದರೆ, ದ್ರೌಪದಿಯ ಕೈಯೇ ಅಕ್ಷಯ. ವಿದ್ಯೆಯಿಂದ ಅನ್ನ ದೊರಕುವುದು ಲೋಕಪ್ರಸಿದ್ಧ. ವಿದ್ಯಾಭಿಮಾನಿ ದೇವತೆಯಾದ ಅವರ ಕೈ ನಿಜವಾದ ಅಕ್ಷಯಪಾತ್ರೆಯೇ ಆಗಿತ್ತು. ಪಂಚರಾತ್ರದಲ್ಲಿ ನಿರೂಪಿಸುವಂತೆ ಅನ್ನವನ್ನು ಪಾಕಮಾಡುವುದು ಭಾರತೀದೇವಿ. ಆ ಭಾರತಿಯೇ ದ್ರೌಪದಿಯಾದ್ದರಿಂದ ಅನ್ನ ಸಿದ್ಧವಾಗುವುದೇ ಅವರಿಂದ. ಲೋಕದ ದೃಷ್ಟಿಯಲ್ಲಿ ಮಾತ್ರವೇ ಅಕ್ಷಯಪಾತ್ರೆಯ ಮಹತ್ವ.

ಅಷ್ಟು ಜನಕ್ಕೆ ಭೋಜನದ ವ್ಯವಸ್ಥೆಯು ದ್ರೌಪದಿಯ ಪಾಲಿನದಾಗಿತ್ತು. ಸಾಮಾನ್ಯ ಶ್ರೀಮಂತರೇ ಆಳುಕಾಳುಗಳಿಂದ ಅಡುಗೆ ಮೊದಲಾದವುಗಳನ್ನು ಮಾಡಿಸುವುದು ಲೋಕರೂಢಿ. ಆದರೆ, ಮಹಾರಾಣಿ, ಯುವರಾಣಿಯಾಗಿದ್ದ ದ್ರೌಪದಿ ಸ್ವತಃ ಅಷ್ಟು ಜನರಿಗೆ ಪಾಕಕಾರ್ಯದೊಂದಿಗೆ, ಬಡಿಸುವುದು ಮೊದಲಾದ ಸಕಲ ಕಾರ್ಯಗಳನ್ನು ಮಾಡುತ್ತಿದ್ದರು. ಆದರ್ಶಗೃಹಿಣಿಯ ಪಾತ್ರವನ್ನು ದ್ರೌಪದಿಯ ಈ ಪ್ರಸಂಗದಲ್ಲಿ ನಾವು ಕಾಣಬಹುದು. ಮನೆಯ ಕೆಲಸ, ಅತಿಥಿ ಸತ್ಕಾರ, ಧರ್ಮಕಾರ್ಯಗಳಲ್ಲಿ ಗಂಡನಿಗೆ ಸಹಕಾರ ಮೊದಲಾದವುಗಳೇ ಸ್ತ್ರೀಯರ ಸಾಧನೆಯ ಮುಖ್ಯ ಕಾರ್ಯಗಳು. ಇದನ್ನು ಅರಿತ ಸ್ತ್ರೀಯರಿಗೆ ಮೋಕ್ಷಸಾಧನೆಯ ಗುಟ್ಟು ಕರಗತವಾದಂತೆಯೇ ಸರಿ.

ವನವಾಸ ಪ್ರಾರಂಭವಾದ ಕೆಲವೇ ದಿನಗಳಲ್ಲಿ ಶ್ರೀಕೃಷ್ಣ ಪಾಂಡವರ ಬಳಿಗೆ ಆಗಮಿಸಿದ. ಪಾಂಡವರನ್ನು ಸಾಂತ್ವನ ಪಡಿಸಿ, ತಾನು ಸಾಲ್ವ ವಧೆಗೆಂದು ತೆರಳಿದ್ದರಿಂದ ಪಾಂಡವರಿಗೆ ಅಂತಹ ಪ್ರಸಂಗ ಒದಗಿತು. ತಾನು ಅವರೊಂದಿಗೆ ಆಗ ಇದ್ದಿದ್ದಲ್ಲಿ ಪಾಂಡವರ ಪರಾಭವಾದಿಗಳಿಗೆ ಅವಕಾಶ ಸರ್ವಥಾ ಲಭಿಸುತ್ತಿರಲಿಲ್ಲ ಎಂದು ನುಡಿದ. ಅವನು ಸರ್ವತಂತ್ರ ಸ್ವತಂತ್ರ, ಸರ್ವಜ್ಞ, ಸರ್ವಶಕ್ತ ಆದರೂ ಹಾಗೆ ನುಡಿಯುವ ಮೂಲಕ ಲೋಕವಿಡಂಬನೆ ಮಾಡಿದ. ವಾಸ್ತವವಾಗಿ ಶ್ರೀಕೃಷ್ಣ ಅಂತಹ ದ್ಯೂತದ ಪ್ರಸಂಗಕ್ಕೆ ಅವಕಾಶ ಕಲ್ಪಿಸಿದ್ದು ಮುಖ್ಯವಾಗಿ ರಾಜಸೂಯಯಾಗದಿಂದ ಯುಧಿಷ್ಠಿರನಿಗೆ, ಅರ್ಜುನಾದಿಗಳಿಗೆ

---

೧ ಅಲಂಘ್ಯತ್ವಾತ್ ತದಾಜ್ಞಾಯಾ ಅನುಜಾಃ ಪೂರ್ವಭೋಜನಃ।
ತಸ್ಮಾನಂತರಮೇವೈಕಾ ಭುಂಕ್ತೇ ಸಾ ಪಾರ್ಷತಾತ್ಮಜಾ॥ -ಮ.ಭಾ.ತಾ.ನಿ.(೨೨/೬೧)

ಒದಗಿದ್ದ ಅಧಿಕ ಪುಣ್ಯವನ್ನು ಭೀಮದ್ರೌಪದಿಯರಿಗೆ ವರ್ಗಾವಣೆ ಮಾಡುವುದಾಗಿತ್ತು. ದ್ಯೂತವಾಡುವ ಮೂಲಕ ಯುಧಿಷ್ಠಿರ ತನ್ನ ಅಧಿಕಪುಣ್ಯವನ್ನು ಕಳೆದುಕೊಂಡ. ಅದು ಭೀಮ, ದ್ರೌಪದೀ ಮೊದಲಾದವರಿಗೆ ಸಂದಿತು. ಯುಧಿಷ್ಠಿರನ ಕಾರ್ಯದಲ್ಲಿ ಮೌನವಾಗಿ ಕುಳಿತಿದ್ದರ ಫಲವಾಗಿ ಅರ್ಜುನಾದಿಗಳಿಗೂ ಅದು ಪೂರ್ಣವಾಗಿ ದಕ್ಕದೇ ಮುಖ್ಯವಾಗಿ ಭೀಮಸೇನನಿಗೆ, ಆ ಬಳಿಕ ದ್ರೌಪದಿಗೆ ಅದು ಪ್ರಾಪ್ತವಾಯಿತು. ಪ್ರತಿಭಟನೆ, ಶಪಥ ಮೊದಲಾದವುಗಳ ಮೂಲಕ ಭೀಮಸೇನನಿಗೆ ಆ ಪುಣ್ಯದ ಹೆಚ್ಚಿನ ಅಂಶ ಸೇರಿದರೆ, ದ್ಯೂತದ ಪ್ರಸಂಗದಲ್ಲಿ ಅನುಭವಿಸಿದ ಬಗೆಬಗೆಯ ತಾಪಗಳಿಂದಾಗಿ ಉಳಿದ ಭಾಗವೆಲ್ಲ ದ್ರೌಪದಿಗೆ ಸಂದಿತು. ದುರ್ಯೋಧನಾದಿಗಳಿಗಂತೂ ಪಾಪದ ವೃದ್ಧಿಯೇ ಪೂರ್ಣಪ್ರಮಾಣದಲ್ಲಿ ಆಯಿತು. ಭೀಷ್ಮಾದಿಗಳು ಸಹ ಆ ಸಮಯದಲ್ಲಿ ತಮ್ಮ ಕರ್ತವ್ಯವನ್ನು ಸೂಕ್ತವಾಗಿ ನಿರ್ವಹಿಸದ ಕಾರಣವಾಗಿ ಪುಣ್ಯಹ್ರಾಸವಾಯಿತು.

ದ್ರೌಪದಿಯು ಲೋಕದೃಷ್ಟಿಯಲ್ಲಿ ತನಗಾದ ಅವಮಾನಾದಿಗಳನ್ನು ಶ್ರೀಕೃಷ್ಣನ ಮುಂದೆ ಅರಿಕೆಮಾಡಿಕೊಂಡಳು. ಆ ಬಗ್ಗೆ ಪರಿಪರಿಯಾಗಿ ತಿಳಿಸಿದಳು[೧]. ಶ್ರೀಕೃಷ್ಣ ಅದಕ್ಕೆ ಕಾರಣರಾದ

---

೧ ಬ್ರಹ್ಮಶಂಕರಶಕ್ರಾದ್ಯೈರ್ದೈವವೃಂದೈಃ ಪುನಃ ಪುನಃ ।
ಕ್ರೀಡಸೇ ತ್ವಂ ನರವ್ಯಾಘ್ರ ಬಾಲಃ ಕ್ರೀಡನಕೈರಿವ ॥....
ಕಥಂ ನು ಭಾರ್ಯಾ ಪಾರ್ಥಾನಾಂ ತವ ಕೃಷ್ಣ ಸಖೀ ವಿಭೋ ।
ಧೃಷ್ಟದ್ಯುಮ್ನಸ್ಯ ಭಗಿನೀ ಸಭಾಂ ಕೃಷ್ಯೇತ ಮಾದೃಶೀ ॥
ಸ್ತ್ರೀಧರ್ಮಿಣೀ ವೇಪಮಾನಾ ಶೋಣಿತೇನ ಸಮುಕ್ಷಿತಾ ।
ಏಕವಸ್ತ್ರಾ ವಿಕೃಷ್ಟಾಸ್ಮಿ ದುಃಖಿತಾ ಕುರುಸಂಸದಿ ॥
ರಾಜ್ಞಾಂ ಮಧ್ಯೇ ಸಭಾಯಾಂ ತು ರಜಸಾಽತಿಪರಿಪ್ಲುತಾ ।
ದೃಷ್ಟ್ವಾ ಚ ಮಾಂ ಧಾರ್ತರಾಷ್ಟ್ರಾ ಪ್ರಾಹಸನ್ ಪಾಪಚೇತಸಃ ॥
ದಾಸೀಭಾವೇನ ಮಾಂ ಭೋಕ್ತುಮೀಷುಸ್ತೇ ಮಧುಸೂದನ ।
ಜೀವತ್ಸು ಪಾಂಡುಪುತ್ರೇಷು ಪಂಚಾಲೇಷು ಚ ವೃಷ್ಣಿಷು ॥
ನನ್ವಹಂ ಕೃಷ್ಣ ಭೀಷ್ಮಸ್ಯ ಧೃತರಾಷ್ಟ್ರಸ್ಯ ಚೋಭಯೋಃ ।
ಸ್ನುಷಾ ಭವಾಮಿ ಧರ್ಮೇಣ ಸಾಽಹಂ ದಾಸೀಕೃತಾ ಬಲಾತ್ ॥
ಗರ್ಹಯೇ ಪಾಂಡವಾಂಸ್ತ್ವೇವ ಯುಧಿ ಶ್ರೇಷ್ಠಾನ್ ಮಹಾಬಲಾನ್ ।
ಯತ್ಕ್ಲಿಶ್ಯಮಾನಾಂ ಪ್ರೇಕ್ಷಂತೇ ಧರ್ಮಪತ್ನೀಂ ಯಶಸ್ವಿನೀಮ್ ॥.......
ಶಾಶ್ವತೋಽಯಂ ಧರ್ಮಪಥಃ ಸದ್ಭಿರಾಚರಿತಃ ಸದಾ ।
ಯದ್ಭಾರ್ಯಾಂ ಪರಿರಕ್ಷಂತಿ ಭರ್ತಾರೋಽಲ್ಪಬಲಾ ಅಪಿ ॥.......
ನನ್ವಿಮೇ ಧನುಷಿ ಶ್ರೇಷ್ಠಾ ಅಜೇಯಾ ಯುಧಿ ಶಾತ್ರವೈಃ ।
ಕಿಮರ್ಥಂ ಧಾರ್ತರಾಷ್ಟ್ರಾಣಾಂ ಸಹಂತೇ ದುರ್ಬಲೀಯಸಾಮ್ ॥
ಅಧರ್ಮೇಣ ಹೃತಂ ರಾಜ್ಯಂ ಸರ್ವೇ ದಾಸಾಃ ಕೃತಾಸ್ತಥಾ ।
ಸಭಾಯಾಂ ಪರಿಕೃಷ್ಟಾಽಹಮೇಕವಸ್ತ್ರಾ ರಜಸ್ವಲಾ ॥
ನಾಧಿಜ್ಯಮಪಿ ಯಚ್ಛಕ್ಯಂ ಕರ್ತುಮನ್ಯೇನ ಗಾಂಡಿವಮ್ ।

ದುರ್ಯೋಧನಾದಿಗಳ ಪತ್ನಿಯರೆಲ್ಲ ತಮ್ಮ ಗಂಡಂದಿರ ಶವಗಳನ್ನು ಆಲಿಂಗಿಸಿಕೊಂಡು ರೋದಿಸುವ ದೃಶ್ಯವನ್ನು ತಾನು ದ್ರೌಪದಿಗೆ ತೋರಿಸುವುದಾಗಿ ವಚನವಿತ್ತ[೧]. ಭೀಮ ಕೈಗೊಂಡಿದ್ದ ಶಪಥಗಳಿಗೆ ಶ್ರೀಕೃಷ್ಣ ತನ್ನ ವಚನಗಳ ಮೂಲಕ ಹಾಗೆ ಅಂಕಿತ ಹಾಕಿದ. ಎಂದರೆ, ಭೀಮನ ಪ್ರತಿಜ್ಞೆ ಪೂರೈಸುವುದು ಶ್ರೀಕೃಷ್ಣನ ಪ್ರತಿಜ್ಞೆಯಾಯಿತು ಎಂದರ್ಥ.

ಶ್ರೀಕೃಷ್ಣ ಅಲ್ಲಿಂದ ತೆರಳುವಾಗ ಸುಭದ್ರೆ ಹಾಗೂ ಅಭಿಮನ್ಯುವನ್ನು ತನ್ನೊಂದಿಗೆ ಕರೆದೊಯ್ದ. ಅಲ್ಲಿಗೆ ಆಗಮಿಸಿದ್ದ ಧೃಷ್ಟದ್ಯುಮ್ನ ದ್ರೌಪದಿಯ ಪುತ್ರರನ್ನು ಕರೆದೊಯ್ದ.

---

ಅನ್ಯತ್ರಾರ್ಜುನಭೀಮಾಭ್ಯಾಂ ತ್ವಯಾ ವಾ ಮಧುಸೂದನ ॥
ಧಿಗ್ಬಲಂ ಭೀಮಸೇನಸ್ಯ ಧಿಕ್ಪಾರ್ಥಸ್ಯ ಚ ಪೌರುಷಮ್ ।
ಯತ್ರ ದುರ್ಯೋಧನಃ ಕೃಷ್ಣ ಮುಹೂರ್ತಮಪಿ ಜೀವತಿ ॥
ಯ ಏತಾನಾಕ್ಷಿಪದ್ರಾಷ್ಟ್ರಾತ್ ಸಹ ಮಾತ್ರಾವಿಹಿಂಸಕಾನ್ ।
ಅಧೀಯಾನಾನ್ ಪುರಾ ಬಾಲಾನ್ ವ್ರತಸ್ಥಾನ್ ಮಧುಸೂದನ ॥
ಭೋಜನೇ ಭೀಮಸೇನಸ್ಯ ಪಾಪಃ ಪ್ರಾಕ್ಷೇಪಯದ್ವಿಷಮ್ ।
ಕಾಲಕೂಟಂ ನವಂ ತೀಕ್ಷ್ಣಂ ಸಂಭೂತಂ ಲೋಮಹರ್ಷಣಮ್ ॥
ತಜ್ಜೀರ್ಣಮವಿಕಾರೇಣ ಸಹಾನ್ನೇನ ಜನಾರ್ದನ ।
ಸಶೇಷತ್ವಾನ್ಮಹಾಬಾಹೋ ಭೀಮಸ್ಯ ಪುರುಷೋತ್ತಮ ॥
ಪ್ರಮಾಣಕೋಟ್ಯಾಂ ವಿಶ್ವಸ್ತಂ ತಥಾ ಸುಪ್ತಂ ವೃಕೋದರಮ್ ।
ಬದ್ಧ್ವೈನಂ ಕೃಷ್ಣ ಗಂಗಾಯಾಂ ಪ್ರಕ್ಷಿಪ್ಯ ಪುರಮಾವ್ರಜತ್ ॥
ಯದಾ ವಿಬುದ್ಧಃ ಕೌಂತೇಯಸ್ತದಾ ಸಂಛಿದ್ಯ ಬಂಧನಮ್ ।
ಉದತಿಷ್ಠನ್ಮಹಾಬಾಹುರ್ಭೀಮಸೇನೋ ಮಹಾಬಲಃ ॥
ಆಶೀವಿಷೈಃ ಕೃಷ್ಣಸರ್ಪೈರ್ಭೀಮಸೇನಮದಂಶಯತ್ ।
ಸರ್ವೇಷ್ವೇವಾಂಗದೇಶೇಷು ನ ಮಮಾರ ಚ ಶತ್ರುಹಾ ॥
ಪ್ರತಿಬುದ್ಧಸ್ತು ಕೌಂತೇಯಃ ಸರ್ವಾನ್ ಸರ್ಪಾನಪೋಥಯತ್ ।
ಸಾರಥಿಂ ಚಾಸ್ಯ ದಯಿತಮಪಹಸ್ತೇನ ಜಘ್ನಿವಾನ್ ॥
ಪುನಃ ಸುಪ್ತಾನುಪಾಧಾಕ್ಷೀದ್ಬಾಲಕಾನ್ ವಾರಣಾವತೇ ।
ಶಯಾನಾನಾರ್ಯಯಾ ಸಾರ್ಧಂ ಕೋ ನು ತತ್ ಕರ್ತುಮರ್ಹತಿ ॥......

-ಮ.ಭಾ.(ವ.ಪ./೧೨/೫೪,೬೧-೬೬,೬೮,೭೧-೮೬)

೧ ರೋದಿಷ್ಯಂತಿ ಸ್ತ್ರಿಯೋ ಹ್ಯೇವಂ ಯೇಷಾಂ ಕ್ರುದ್ಧಾಽಸಿ ಭಾಮಿನಿ ।
ಬೀಭತ್ಸುಶರಸಂಛನ್ನಾಞ್ಛೋಣಿತೌಘಪರಿಪ್ಲುತಾನ್ ॥
ನಿಹತಾನ್ ವಲ್ಲಭಾನ್ ವೀಕ್ಷ್ಯ ಶಯಾನಾನ್ ವಸುಧಾತಲೇ ।
ಯತ್ಸಮರ್ಥಂ ಪಾಂಡವಾನಾಂ ತತ್ ಕರಿಷ್ಯಾಮಿ ಮಾ ಶುಚಃ ॥
ಸತ್ಯಂ ತೇ ಪ್ರತಿಜಾನಾಮಿ ರಾಜ್ಞಾಂ ರಾಜ್ಞೀ ಭವಿಷ್ಯಸಿ ।
ಪತೇದ್ದ್ಯೌರ್ಹಿಮವಾಞ್ಛೀರ್ಯೇತ್ ಪೃಥಿವೀ ಶಕಲೀಭವೇತ್ ॥
ಶುಷ್ಯೇತ್ ತೋಯನಿಧಿಃ ಕೃಷ್ಣೇ ನ ಮೇ ಮೋಘಂ ವಚೋ ಭವೇತ್ ।
ತಚ್ಛ್ರುತ್ವಾ ದ್ರೌಪದೀ ವಾಕ್ಯಂ ಪ್ರತಿವಾಕ್ಯಮಥಾಚ್ಯುತಾತ್ ॥ -ಮ.ಭಾ.(ವನಪರ್ವ/೧೨೮-೧೩೧)

ಕಾಶಿರಾಜ ಕಾಳೀದೇವಿಯನ್ನು ಕರೆದೊಯ್ದರೆ ಇತರರನ್ನು ಸಂಬಂಧಿಸಿದವರು ಕರೆದೊಯ್ದರು. ಕೊನೆಗೆ ಮುಖ್ಯವಾಗಿ ವನವಾಸದಲ್ಲಿ ಉಳಿದುಕೊಂಡವರು ಪಾಂಡವರು ಹಾಗೂ ದ್ರೌಪದಿ ಮಾತ್ರ. ಉಳಿದವರೆಲ್ಲ ಋಷಿ, ಮುನಿಗಳು ಮೊದಲಾದವರಷ್ಟೆ.

ಪಾಂಡವರ ಪತ್ನಿಯರಲ್ಲಿ ಉಳಿದುಕೊಂಡಿದ್ದು ದ್ರೌಪದೀ ಮಾತ್ರ. ಇದು ದ್ರೌಪದಿಯ ಪಾತ್ರಕ್ಕಿರುವ ಮಹತ್ವಕ್ಕೆ ಮತ್ತೊಂದು ನಿದರ್ಶನ. ದುರ್ಯೋಧನನ ನಿಬಂಧನೆಯು ಹಾಗೆಯೇ ಇದ್ದಿತು, ಪಾಂಡವರ ಜೀವನದಲ್ಲಿ ದ್ರೌಪದಿಯ ಪಾತ್ರದ ಹಿರಿಮೆಯು ಅದರಂತೆ ಇತ್ತು. ಇದರಿಂದ ಯುಧಿಷ್ಠಿರಾದಿಗಳು ಇತರ ಪತ್ನಿಯರನ್ನು ಹೊಂದಿದ್ದರು ಸಹ ಧಾರ್ಮಿಕ ನೆಲೆಯಲ್ಲಿ ದ್ರೌಪದಿಯದೇ ಪ್ರಧಾನ ಪಾತ್ರವಾಗಿತ್ತು ಎಂಬುದಕ್ಕೆ ಇದು ಗಮಕ.

## ಜ್ಞಾನಮೂರ್ತಿ ದ್ರೌಪದಿ

ವನವಾಸ ಪ್ರಾರಂಭವಾಗಿ ಒಂದು ವರ್ಷ ಕಳೆಯಿತು. ಯುಧಿಷ್ಠಿರ ವನವಾಸಕ್ಕೆ ಒಗ್ಗಿಕೊಂಡ. ಪ್ರತಿನಿತ್ಯ ಋಷಿಮುನಿಗಳೊಂದಿಗೆ ಸಲ್ಲಾಪ ಮೊದಲಾದವುಗಳಲ್ಲಿ ಕಾಲ ಕಳೆಯತೊಡಗಿದ. ತಾನು ದ್ಯೂತವಾಡಿದ್ದರ ಬಗ್ಗೆಯಾಗಲಿ, ತನ್ನಿಂದ ತಮ್ಮಂದಿರಿಗೆ, ದ್ರೌಪದಿಗೆ ಆದ ಅನ್ಯಾಯದ ಬಗ್ಗೆಯಾಗಲೀ ಸ್ವಲ್ಪವೂ ಪಶ್ಚಾತ್ತಾಪ ಮೂಡಲೇ ಇಲ್ಲ. ದುರ್ಯೋಧನಾದಿಗಳು ಮಾಡಿದ ಕಪಟದ ಬಗ್ಗೆಯೂ ಅವನ ಪ್ರತಿಕ್ರಿಯೆ ಕೇವಲ ಕ್ಷಮೆಯೇ ಆಗಿತ್ತು. ತಾನು ಅವರ ಬಗ್ಗೆ ಮುಂದೆ ಕೈಗೊಳ್ಳಬೇಕಾದ ಕ್ರಮದ ಬಗ್ಗೆಯೂ ಅವನು ಯಾವ ಯೋಚನೆಯನ್ನು ಮಾಡದಾದ. ಇದನ್ನು ಗಮನಿಸಿ ಭೀಮ-ದ್ರೌಪದಿಯರು ಅವನ ಕರ್ತವ್ಯಭ್ರಷ್ಟತೆಯನ್ನು ಸರಿಪಡಿಸಲು ತೀರ್ಮಾನಿಸಿದರು. ಯುಧಿಷ್ಠಿರನ ಅಂತಹ ನಿಷ್ಕ್ರಿಯವೆನ್ನಿಸುವ ಜೀವನ ಅವರ ಅವತಾರದ ಉದ್ದೇಶಕ್ಕೆ ವಿರುದ್ಧವಾದುದು. ಲೋಕಕ್ಕಂತು ಅದರಿಂದ ಒಳಿತಿಗಿಂತ ಕೆಡುಕೇ ಹೆಚ್ಚು. ಭೀಮಸೇನ ವಿಷಯವನ್ನು ಪ್ರಸ್ತಾಪಿಸಲೆಂದು ಮೊದಲು ದ್ರೌಪದಿಯನ್ನು ಯುಧಿಷ್ಠಿರನ ಬಳಿ ಮಾತಿಗೆ ಕಳುಹಿಸಿಕೊಟ್ಟ.

ಅದೊಂದು ದಿನ ಏಕಾಂತದಲ್ಲಿ ದ್ರೌಪದೀ ಯುಧಿಷ್ಠಿರನ ಬಳಿಗೆ ತೆರಳಿದಳು. ನಿಶ್ಚಿಂತೆಯಿಂದ ಕುಳಿತಿದ್ದ ಯುಧಿಷ್ಠಿರನ ಬಳಿ ಮಾತು ತೆಗೆದಳು:

"ರಾಜಾ! ನೀನು ಮಾಡಿದ್ದರ ಬಗ್ಗೆ ಏನಾದರೂ ಯೋಚನೆಯನ್ನು ಮಾಡುತ್ತಿರುವೆಯಾ? ದುರ್ಯೋಧನಾದಿಗಳಿಂದ ನಿನಗೆ, ನಮಗೆ ಆದ ಅನ್ಯಾಯ ಎಂತಹುದು ಎಂಬುದನ್ನು ಅರ್ಥಮಾಡಿಕೊಂಡಿರುವೆಯಾ? ನಾವು ವನವಾಸಕ್ಕೆ ತೆರಳಿದಾಗ ಇಡೀ ಹಸ್ತಿನಾಪುರದ ಜನತೆಯೇ ಗೋಳಿಟ್ಟಿತು. ಆಗಲೂ ಆ ಬಗ್ಗೆ ಸ್ವಲ್ಪವೂ ಚಿಂತಿಸದ ಕಲ್ಲು ಹೃದಯ

ದುರ್ಯೋಧನ, ದುಶ್ಶಾಸನ, ಕರ್ಣ ಹಾಗೂ ಶಕುನಿ ಈ ನಾಲ್ವರದು[1]. ರಾಜವೃಂದದಿಂದ ವಂದಿತನಾಗಿ ಸಭಾಮಧ್ಯದಲ್ಲಿ ರತ್ನಸಿಂಹಾಸನದಲ್ಲಿ ಪೂಜಿತನಾಗಬೇಕಿದ್ದ ನೀನು ದರ್ಭಾಸನದಲ್ಲಿ ಹೀಗೆ ಧೂಳು ಮೆತ್ತಿದವನಾಗಿ ಕುಳಿತುಕೊಂಡಿರುವುದನ್ನು ಕಂಡು ನನ್ನ ಮನಸ್ಸು ಮರುಗುತ್ತಿದೆ[2]. ಮಹಾತ್ಮರಾದ ಭೀಮಸೇನಾದಿ ನಿನ್ನ ಸೋದರರರು ತಮ್ಮದಲ್ಲದ ತಪ್ಪಿಗಾಗಿ ಹೀಗೆ ವನವಾಸಿಗಳಾಗಿರುವುದು ಯಾವ ನ್ಯಾಯ? ನೀನು ಮಾಡಿದ್ದಾದರೂ ಸರಿಯೇ? ನಿನ್ನಿಂದ ನಮಗೆ, ಲೋಕಕ್ಕೆ, ಧರ್ಮಕ್ಕೆ ಆದ ಅನ್ಯಾಯವನ್ನು ಗಮನಿಸಿರುವೆಯಾ? ನಿನಗೆ ಈ ಬಗ್ಗೆ ವ್ಯಥೆಯಾಗಲೀ, ಕೋಪವಾಗಲೀ ಉಂಟಾಗುತ್ತಲೇ ಇಲ್ಲವಲ್ಲ. ಇದು ನನಗೆ ಮತ್ತಷ್ಟು ಖೇದಕರವಾದ ವಿಷಯ[3].

ಯುಧಿಷ್ಠಿರ ಶಾಂತನಾಗಿ ನುಡಿದ –

''ದ್ರೌಪದೀ! ಎಲ್ಲವು ಭಗವಂತನ ಚಿತ್ತ. ಅವನ ಸಂಕಲ್ಪದಂತೆಯೇ ಎಲ್ಲವೂ ನಡೆಯುವುದು. ದುರ್ಯೋಧನಾದಿಗಳದು ಅನ್ಯಾಯ ಎಂದು ನಾನು ಬಲ್ಲೆ. ಆದರೆ, ಅದಕ್ಕಾಗಿ ನಾವು ಅವನ ಬಗ್ಗೆ ಕೋಪಗೊಳ್ಳಬೇಕಿಲ್ಲ. ಕ್ಷಮಿಸುವುದೇ ನಮ್ಮ ಧರ್ಮ. ಕ್ಷಮೆ ಅತಿ ಶ್ರೇಷ್ಠವಾದ ಗುಣ. ಅವರು ಮಾಡಿದ ಕೆಡುಕಿನ ಬಗ್ಗೆ ದೈವವೇ ಶಿಕ್ಷೆ ನೀಡುವುದು'' ಎಂದ.

ದ್ರೌಪದಿಯು ಉತ್ತರಿಸಿದಳು –

''ರಾಜಾ! ನೀನು ಹೇಳುವ ಕ್ಷಮೆಯ ಮಾತು ಕ್ಷತ್ರಿಯರಿಗೆ, ಅದರಲ್ಲೂ ಪ್ರಜಾಪಾಲನೆಯ ದೀಕ್ಷೆ ಹೊತ್ತ ರಾಜರಿಗೆ ಅನ್ವಯಿಸುವಂತಹುದಲ್ಲ. ಅದು ಬ್ರಾಹ್ಮಣರ ಧರ್ಮ. ಜ್ಞಾನಕಾರ್ಯಕ್ಕೆ ತನ್ನನ್ನು ತೊಡಗಿಸಿಕೊಳ್ಳುವ ಬ್ರಾಹ್ಮಣನಿಗೆ ಇತರರಿಂದ ತನಗಾಗುವ ಅನ್ಯಾಯವನ್ನು ಕ್ಷಮಿಸುವುದೇ ತಪಸ್ಸು. ಆದರೆ, ನಾವು ಕ್ಷತ್ರಿಯರು; ಅದರಲ್ಲೂ ರಾಜಸೂಯಯಾಗ ಮಾಡಿದ ಚಕ್ರವರ್ತಿಗಳು. ಅಂತಹ ಅನ್ಯಾಯವನ್ನು ಪ್ರತಿಭಟಿಸುವುದು, ಅನ್ಯಾಯ ಮಾಡಿದವರನ್ನು ಶಿಕ್ಷಿಸುವುದು, ನಮ್ಮ ಕರ್ತವ್ಯ. ಅಂತಹ ಕೇಡಿಗರನ್ನು ಸಹ ಕ್ಷಮಿಸುವುದಾದಲ್ಲಿ ರಾಜನೇತಕ್ಕೆ? ರಾಜಧರ್ಮವೇತಕ್ಕೆ? ಎಲ್ಲರೂ ಹೀಗೆ ಕ್ಷಮೆಯನ್ನು

---

೧ ಚತುರ್ಣಾಮೇವ ಪಾಪಾನಾಮಸ್ತ್ರಂ ನ ಪತಿತಂ ತದಾ ।
ತ್ವಯಿ ಭಾರತ ನಿಷ್ಕ್ರಾಂತೇ ವನಾಯಾಜಿನವಾಸಸಿ ॥
ದುರ್ಯೋಧನಸ್ಯ ಕರ್ಣಸ್ಯ ಶಕುನೇಶ್ಚ ದುರಾತ್ಮನಃ ।
ದುರ್ಭ್ರಾತುಸ್ತಸ್ಯ ಚೋಗ್ರಸ್ಯ ರಾಜನ್ ದುಃಶಾಸನಸ್ಯ ಚ ॥ – ಮ.ಭಾ(ವ.ಪ./೨೭/೭,೮)

೨ ದಾಂತಂ ಯಚ್ಚ ಸಭಾಮಧ್ಯ ಆಸನಂ ರತ್ನಭೂಷಿತಮ್ ।
ದೃಷ್ಟ್ವಾ ಕುಶವೃಷೀಂ ಚೇಮಾಂ ಶೋಕೋ ಮಾಂ ಪ್ರದಹತ್ಯಯಮ್ ॥
– ಮ.ಭಾ.(ವ.ಪ./೨೭/೧೧)

೩ ಭೀಮಸೇನಂ ಹಿ ಕರ್ಮಾಣಿ ಸ್ವಯಂ ಕುರ್ವಾಣಮಚ್ಯುತಮ್ ।
ಸುಖಾರ್ಹಂ ದುಃಖಿತಂ ದೃಷ್ಟ್ವಾ ಕಸ್ಮಾನ್ಮನ್ಯುರ್ನ ವರ್ಧತೇ ॥ –ಮ.ಭಾ.(ವ.ಪ./೨೭/೨೨)

ಆಶ್ರಯಿಸಿದ್ದಲ್ಲಿ ಜನರ ಬದುಕು ಹೇಗೆ ಸಾಗೀತು? ಧರ್ಮ ಹೇಗೆ ಉಳಿದೀತು? ಇದು ಸರಿಯಲ್ಲ''[೧] ಎಂದಳು.

ಯುಧಿಷ್ಠಿರ ಮತ್ತೆ ಹೇಳಿದ –

''ದ್ರೌಪದಿ! ಹಾಗೆ ಹೇಳಬೇಡ, ಕ್ಷಮೆಯಿಂದಲೇ ಜಗತ್ತು ಬದುಕಿರುವುದು. ಭಗವಂತನೊಬ್ಬನೇ ಸ್ವತಂತ್ರ, ನಾವೆಲ್ಲ ಅವನು ಆಡಿಸಿದಂತೆ ಆಡುವ ಗೊಂಬೆಗಳು. ಯಾವ ಕಾಲಕ್ಕೆ ಏನಾಗಬೇಕೆಂಬುದನ್ನು ಭಗವಂತ ನಿಶ್ಚಯಿಸುವನು, ಅದನ್ನೇ ಮಾಡಿಸುವನು. ಇನ್ನೊಬ್ಬರನ್ನು ಶಿಕ್ಷಿಸಲು ನಾವು ಯಾರು? ದೇವರು ಸ್ವತಂತ್ರ ಎಂಬುದನ್ನು ನೀನು ತಿಳಿದಿಲ್ಲವೇನು?''

ಯುಧಿಷ್ಠಿರನ ಈ ಮಾತಿನಲ್ಲಿ ದೇವರನ್ನು ನಂಬಿ ಕರ್ತವ್ಯ ತ್ಯಾಗ ಮಾಡುವ ಜನತೆಯ ಚಿತ್ರವನ್ನು ಕಾಣಬಹುದು. ದ್ರೌಪದಿ ಉತ್ತರಿಸಿದಳು –

''ರಾಜಾ! ನಾನು ಭಗವಂತನು ಸ್ವತಂತ್ರ ಎಂಬುದನ್ನು ಅಲ್ಲಗಳೆಯುತ್ತಿಲ್ಲ. ಸ್ವತಂತ್ರನಾದ ಭಗವಂತನೇ ಹೇಳಿರುವ ಕರ್ತವ್ಯದ ಬಗ್ಗೆ ಮಾತನಾಡುತ್ತಿದ್ದೇನೆ. ಅವನೇ ಮಾಡಿರುವ ನಿಯಮ ಇದು. ಕ್ಷತ್ರಿಯರು, ಅದರಲ್ಲೂ ರಾಜರು ಅನ್ಯಾಯದ ಬಗ್ಗೆ ಉಗ್ರವಾದ ನಿಲುವನ್ನು ತಾಳಲೇಬೇಕು, ದುಷ್ಟರನ್ನು ನಿಗ್ರಹಿಸಲೇಬೇಕು. ಪುರುಷಪ್ರಯತ್ನವನ್ನು ತೊರೆದು ಕೇವಲ ದೈವದ ಮೇಲೆಯೇ ಭಾರ ಹಾಕುವುದನ್ನು ಸಾಧನೆ ಎನ್ನಲಾಗದು. ವಿಧಿನಿಷೇಧಗಳು ಅನ್ವಯಿಸುವುದು ಜೀವನಿಗೆ ಕರ್ತೃತ್ವವಿರುವುದನ್ನು ಸಮರ್ಥಿಸುವುದು. ಜೀವನಿಗೆ ಕರ್ತೃತ್ವ ಇಲ್ಲವೆಂದಾದಲ್ಲಿ ವಿಧಿನಿಷೇಧಗಳ ಅನ್ವಯ ಯಾರಿಗೆ? ಅವಕ್ಕೆ ಭಗವಂತನೇ ಪಾತ್ರನೆನ್ನಬೇಕಾಗುವುದಲ್ಲ!''[೨]

---

೧ ನ ನಿರ್ಮನ್ಯುಃ ಕ್ಷತ್ರಿಯೋऽಸ್ತಿ ಲೋಕೇ ನಿರ್ವಚನಂ ಸ್ಮೃತಮ್ ।
ತದದ್ಯ ತ್ವಯಿ ಪಶ್ಯಾಮಿ ಕ್ಷತ್ರಿಯೇ ವಿಪರೀತವತ್ ॥
ಯೋ ನ ದರ್ಶಯತೇ ತೇಜಃ ಕ್ಷತ್ರಿಯಃ ಕಾಲ ಆಗತೇ ।
ಸರ್ವಭೂತಾನಿ ತಂ ಪಾರ್ಥ ಸದಾ ಪರಿಭವಂತ್ಯುತ ॥
ತತ್ ತ್ವಯಾ ನ ಕ್ಷಮಾ ಕಾರ್ಯಾ ಶತ್ರೂನ್ ಪ್ರತಿ ಕಥಂಚನ ।
ತೇಜಸೈವ ಹಿ ತೇ ಶಕ್ಯಾ ನಿಹಂತುಂ ನಾತ್ರ ಸಂಶಯಃ ॥
ತಥೈವ ಯಃ ಕ್ಷಮಾಕಾಲೇ ಕ್ಷತ್ರಿಯೋ ನೋಪಶಾಮ್ಯತಿ ।
ಅಪ್ರಿಯಃ ಸರ್ವಭೂತಾನಾಂ ಸೋऽಮುತ್ರೇಹ ಚ ನಶ್ಯತಿ ॥ –ಮ.ಭಾ(ವ.ಪ./೨೭/೩೭–೪೦)

೨ ಕರ್ಮಭಿಶ್ಚಿಂತಿತೋ ಲೋಕೋ ಗತ್ಯಾಂ ಗತ್ಯಾಂ ಪೃಥಗ್ವಿಧಃ ।
ತಸ್ಮಾತ್ ಕರ್ಮಾಣಿ ನಿತ್ಯಾನಿ ಲೋಭಾನ್ಮೋಕ್ಷಂ ಯಿಯಾಸತಿ ॥
ನೇಹ ಧರ್ಮಾನೃಶಂಸ್ಯಾಭ್ಯಾಂ ನ ಕ್ಷಾಂತ್ಯಾ ನಾರ್ಜವೇನ ಚ ।
ಪುರುಷಃ ಶ್ರಿಯಮಾಪ್ನೋತಿ ನ ಘೃಣಿತ್ವೇನ ಕರ್ಹಿಚಿತ್ ॥ – ಮ.ಭಾ(ವ.ಪ/೩೦/೨,೩)

ಯುಧಿಷ್ಠಿರನಿಗೆ ಉತ್ತರ ನೀಡುವುದು ಕಷ್ಟವೆನ್ನಿಸಿತು. ''ಹಾಗಿದ್ದರೆ ನೀನು ದೇವರನ್ನೇ ಅಸ್ವತಂತ್ರ ಎಂದು ಹೇಳಹೊರಟಿರುವೆಯಾ? ಅವನ ಹಿರಿಮೆಗೆ ದೋಷವನ್ನು ಆರೋಪಿಸುತ್ತಿರುವೆಯಾ?'' ಎಂದು ಕೆರಳಿ ನುಡಿದ.

---

ಈಶ್ವರಸ್ಯ ವಶೇ ಲೋಕಾಸ್ತಿಷ್ಠಂತೇ ನಾತ್ಮನೋ ಯಥಾ।
ಧಾತೈವ ಖಲು ಭೂತಾನಾಂ ಸುಖದುಃಖೇ ಪ್ರಿಯಾಪ್ರಿಯೇ॥
ದಧಾತಿ ಸರ್ವಮೀಶಾನಃ ಪುರಸ್ತಾಚ್ಛುಕ್ರಮುಚ್ಚರನ್।
ಯಥಾ ದಾರುಮಯೀ ಯೋಷಾ ನರವೀರ ಸಮಾಹಿತಾ।
ಈರಯತ್ಯಂಗಮಂಗಾನಿ ತಥಾ ರಾಜನ್ನಿಮಾಃ ಪ್ರಜಾಃ॥ -ಮ.ಭಾ.(ವ.ಪ/೩೦/೨೧-೨೩)

೧ ದ್ರೌಪದೀ-ಯುಧಿಷ್ಠಿರಸಂವಾದವು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಅತ್ಯಂತ ರೋಚಕವಾಗಿ ಈ ರೀತಿಯಲ್ಲಿ ನಿರೂಪಿತವಾಗಿದೆ:

ಅತಿಮಾರ್ದವಯುಕ್ತತ್ವಾದ್ಧರ್ಮರಾಜಶ್ಚತುರ್ದಶೇ।
ಅಪಿ ವರ್ಷೇ ಗುರುಭಯಾದ್ರಾಜ್ಯಂ ನೇಚ್ಛೇದಿತಿ ಪ್ರಭುಃ।
ಮಾರುತಿಃ ಪ್ರೇಷಯಾಮಾಸ ಕೃಷ್ಣಾಂ ಪ್ರಸ್ತಾವಹೇತವೇ॥
ಕ್ಷಮಾ ಸರ್ವತ್ರ ಧರ್ಮೋ ನ ಪಾಪಹೇತುಶ್ಚ ದುರ್ಜನೇ।
ರಾಜ್ಞಾಂ ಸಾಮರ್ಥ್ಯಯುಕ್ತಾನಾಮಿತಿ ಸಂಸ್ಥಾಪ್ಯ ಶಾಸ್ತ್ರತಃ॥
ಹತ್ವಾ ಚತುರ್ದಶೇ ವರ್ಷೇ ಧಾರ್ತರಾಷ್ಟ್ರಾನ್‌ರಾಜ್ಯದಾನ್।
ಕರ್ತುಂ ರಾಜ್ಯಂ ಪುರೋ ಗಂತಾ ಭವಾನೀತ್ಯಗ್ರಜೇನ ಹ॥
ಕಾರಯನ್ ಸತ್ಯಶಪಥಂ ವಿವಾದಸ್ಯ ಕ್ರಮೇಚ್ಛಯಾ।
ಆದಿಶತ್ ಪ್ರಥಮಂ ಕೃಷ್ಣಾಂ ಭೀಮಃ ಸಾ ನೃಪಮಬ್ರವೀತ್॥
ನೈವ ಕ್ಷಮಾ ಕುಜನತಾಸು ನೃಪಸ್ಯ ಧರ್ಮಸ್ತಾಂ ತ್ವಂ ವೃಥೈವ ಧೃತವಾನಸಿ ಸರ್ವಕಾಲಮ್।
ಇತ್ಯುಕ್ತ ಆಹ ನೃಪತಿಃ ಪರಮಾ ಕ್ಷಮೈವ ಸರ್ವತ್ರ ತದ್ವಿಧೃತಮೇವ ಜಗತ್ ಸಮಸ್ತಮ್॥
ಕರ್ತಾ ಚ ಸರ್ವಜಗತಃ ಸುಖದುಃಖಯೋರ್ಹಿ ನಾರಾಯಣಸ್ತದನುದತ್ತಮಿಹಾಸ್ಯ ಸರ್ವಮ್।
ತಸ್ಮಾನ್ನ ಕೋಪವಿಷಯೋಽಸ್ತಿ ಕುತಶ್ಚ ಕಶ್ಚಿತ್ ತಸ್ಮಾತ್ ಕ್ಷಮೈವ ಸಕಲೇಷು ಪರೋಽಸ್ಯ ಧರ್ಮಃ॥
ಇತ್ಯುಕ್ತವಂತಂ ನೃಪಮಾಹ ಪಾರ್ಷತೀ ಯದಿ ಕ್ಷಮಾ ಸರ್ವನರೇಷು ಧರ್ಮಃ।
ರಾಜ್ಞಾ ನ ಕೃತ್ಯಂ ನ ಚ ಲೋಕಯಾತ್ರಾ ಭವೇಜ್ಜಗತ್ ಕಾಪುರುಷೈರ್ವಿನಶ್ಯೇತ್॥
ಸತ್ಯಂ ಚ ವಿಷ್ಣುಃ ಸಕಲಪ್ರವರ್ತಕೋ ರಮಾವಿರಿಂಚೇಶಪುರಃಸರಾಶ್ಚ।
ಕಾಷ್ಠಾದಿವತ್ ತದ್ವಶಗಾಃ ಸಮಸ್ತಾಸ್ತಥಾಽಪಿ ನ ವ್ಯರ್ಥತಾ ಪೌರುಷಸ್ಯ॥
ತದಾಜ್ಞಯಾ ಪುರುಷಶ್ಚೇಷ್ಟಮಾನಶ್ಚೇಷ್ಟಾನುಸಾರೇಣ ಶುಭಾಶುಭಸ್ಯ।
ಭೋಕ್ತಾ ನ ತಚ್ಚೇಷ್ಟಿತಮನ್ಯಥಾ ಭವೇತ್ ಕರ್ತಾ ತಸ್ಮಾತ್ ಪುರುಷೋಽಪ್ಯಸ್ಯ ವಶ್ಯಃ॥
ವೃಥಾ ಯದಿ ಸ್ಯಾತ್ ಪೌರುಷಂ ಕಸ್ಯ ಹೇತೋರ್ವಿಧಿರ್ನಿಷೇಧಶ್ಚ ಸಮಸ್ತವೇದಗಃ।
ವಿಧೇರ್ನಿಷೇಧಸ್ಯ ಚ ನೈವ ಗೋಚರಃ ಪುಮಾನ್ ಯದಿ ಸ್ಯಾದ್ಭವತೋ ಹಿ ತೌ ಹರೇಃ॥
ತೇನೈವ ಲೇಪಶ್ಚ ಭವೇದಮುಷ್ಯ ಪುಣ್ಯೇನ ಪಾಪೇನ ಚ ನೈವ ಚಾಸೌ।
ಲಿಪ್ಯೇತ ತಾಭ್ಯಾಂ ಪರಮಃ ಸ್ವತಂತ್ರಃ ಕರ್ತಾ ತತಃ ಪುರುಷೋಽಪ್ಯಸ್ಯ ವಶ್ಯಃ॥
ಇತೀರಿತೋ ಧರ್ಮಜಃ ಕೃಷ್ಣಯೈವ ನಿರುತ್ತರತ್ವಂ ಗಮಿತಸ್ತ್ವಭರ್ತ್ಸಯತ್।
ಕುತರ್ಕಮಾಶ್ರಿತ್ಯ ಹರೇರಪಿ ತ್ವಮಸ್ವಾತಂತ್ರ್ಯಂ ಸಾಧಯಸೀತಿ ಚೋಕ್ತ್ವಾ॥

ದ್ರೌಪದಿಗೆ ಅರ್ಥವಾಯಿತು. ಅವನಿಗೆ ಉತ್ತರ ಕೊಡಲು ಸಾಧ್ಯವಾಗುತ್ತಿಲ್ಲ, ಅದನ್ನು ಅವನು ಹಾಗೆ ಕೋಪಗೊಳ್ಳುವ ಮೂಲಕ ಹೊರಹಾಕುತ್ತಿರುವನು. ತನಗೆ ಅವನ ಆಕ್ಷೇಪಕ್ಕೆ ಪೂರ್ಣವಾಗಿ ಉತ್ತರ ಕೊಡಲು ಸಾಧ್ಯವಿದೆ. ಆದರೆ, ಸ್ತ್ರೀಯರು ಅತಿಯಾಗಿ ಮಾತನಾಡುವುದು ಶೋಭಿಸುವಂತಹುದಲ್ಲ[೨]. ಮುಂದಿನ ಕಾರ್ಯವನ್ನು ಮಾಡಲು ಹೇಗೂ ಭೀಮಸೇನನಿರುವನು ಎಂದು ಯೋಚಿಸಿ ಸುಮ್ಮನಾದಳು.

ಅದಕ್ಕಾಗಿ ಕಾಯುತ್ತಿದ್ದ ಭೀಮಸೇನ ಮಧ್ಯೆ ಪ್ರವೇಶಿಸಿದ. ಯುಧಿಷ್ಠಿರನಿಗೆ ವಿವರವಾಗಿ ಶ್ರೀಹರಿಯ ಸ್ವಾತಂತ್ರ್ಯ, ಜೀವನಕರ್ತೃತ್ವ ಮೊದಲಾದ ವಿಚಾರಗಳ ಬಗ್ಗೆ ಪರಿಪೂರ್ಣವಾದ ತಿಳುವಳಿಕೆಯನ್ನು ನೀಡಿದ. ಕ್ಷತ್ರಿಯರ ಮುಖ್ಯ ಕರ್ತವ್ಯ ದುಷ್ಟರ ನಿಗ್ರಹ, ಶಿಷ್ಟರ ಪರಿಪಾಲನೆ ಹಾಗೂ ಧರ್ಮದ ಸಂರಕ್ಷಣೆ ಎಂಬುದನ್ನು ಮನದಟ್ಟು ಮಾಡಿಕೊಟ್ಟ. ಆಗಿರುವ ತಪ್ಪನ್ನು ತಿದ್ದಿಕೊಳ್ಳಲೇಬೇಕು. ವನವಾಸ, ಅಜ್ಞಾತವಾಸಗಳು ಪೂರೈಸಿದ ಬಳಿಕ ದುರ್ಯೋಧನ ತನ್ನ ಮಾತಿನಂತೆ ರಾಜ್ಯ ಹಿಂದಿರುಗಿಸದಿದ್ದಲ್ಲಿ ಯುದ್ಧವನ್ನು ಹೂಡಲೇಬೇಕು. ಅದು ರಾಜ್ಯಕ್ಕಾಗಿ ಯುದ್ಧವಲ್ಲ, ಧರ್ಮಕ್ಕಾಗಿ ಯುದ್ಧ ಲೋಕರಕ್ಷಣೆಗಾಗಿ ಯುದ್ಧ, ಭಗವತ್ಪೂಜೆಗಾಗಿ ಯುದ್ಧ. ಶ್ರೀಹರಿಯನ್ನು ಸ್ವತಂತ್ರ ಎಂದು ಆರಾಧಿಸುವುದು ಎಂದರೆ ಜೀವನು ತನ್ನ ಕರ್ತೃತ್ವವನ್ನು ಅಲ್ಲಗಳೆಯುವುದು ಎಂದರ್ಥವಲ್ಲ. ಜೀವನಿಗೆ ಕರ್ತೃತ್ವವನ್ನು ಒಪ್ಪಲೇಬೇಕು, ಸ್ವಾತಂತ್ರ್ಯವನ್ನು ಮಾತ್ರ ಒಪ್ಪಕೂಡದು. ದೇವರನ್ನು ಒಪ್ಪದವನು ಹೇಗೆ ನರಕಭಾಜನನೆನ್ನಿಸುವನೋ, ದೇವರನ್ನು ಒಪ್ಪಿ ತನ್ನ ಕರ್ತೃತ್ವವನ್ನು ತ್ಯಾಗ ಮಾಡುವವನು ಸಹ ಅಂತಹ ತಪ್ಪನ್ನು ಮಾಡಿ ಅಧಃಪತನ ಹೊಂದುವನು. ದೇವರನ್ನು ಒಪ್ಪುವುದು ಎಂದರೆ ಅವನು ವಿಧಿಸಿದ ಕರ್ತವ್ಯವನ್ನು ಪಾಲಿಸಿ, ಅವನಿಗೆ ಒಪ್ಪಿಸಿ ಪೂಜಿಸುವುದು ಎಂದರ್ಥ. ಕರ್ತವ್ಯತ್ಯಾಗ ಎಂದೂ ಭಗವದಾರಾಧನೆ ಎನ್ನಿಸದು. ಸಾಧಕನು ತ್ಯಾಗ ಮಾಡಬೇಕಾದದ್ದು ಅಹಂಕಾರ, ಮಮಕಾರಗಳನ್ನು, ಕರ್ತವ್ಯ ಕರ್ಮದ ಆಚರಣೆಗೆ ಪ್ರತಿಫಲವನ್ನು. ಕರ್ತವ್ಯವನ್ನೇ ತ್ಯಾಗ ಮಾಡುವುದು ಮಾತ್ರ ಭಗವಂತನಿಗೆ ಎಸಗುವ ದ್ರೋಹವೇ ಆಗುವುದು. ದ್ರೌಪದಿಯು ಹೇಳುತ್ತಿರುವುದು ಸರಿ. ಭಗವಂತನ ಸ್ವಾತಂತ್ರ್ಯವನ್ನು ಒಪ್ಪುವುದು ಎಂದರೆ ಜೀವನು ತನ್ನ ಕರ್ತೃತ್ವವನ್ನು ತೊರೆಯುವುದು ಎಂದರ್ಥವಲ್ಲ, ಭಗವದಧೀನವೆಂದು ಭಾವಿಸಿ ಫಲದ ಆಸೆಯನ್ನು ತೊರೆದು ತಮ್ಮ ಪಾಲಿನ ವಿಹಿತ ಕರ್ತವ್ಯವನ್ನು ಭಗವತ್ಪೂಜಾತ್ಮಕವಾಗಿ ಮಾಡುವುದೇ ನಿಜವಾದ ಸಾಧನೆ. ಕರ್ಮಯೋಗವೇಂದರೆ ಇದೇ.

---

ಛಲೇನ ತೇನ ಪ್ರತಿಭರ್ತ್ಸಿತಾ ಸಾ
ಕ್ಷಮಾಪಯಾಮಾಸ ನೃಪಂ ಯತಃ ಸ್ತ್ರೀ। -ಮ.ಭಾ.ತಾ.ನಿ.(೨೨/೬೩-೭೫)

೨ ವಾಚಾಲತಾ ನಾತಿತರಾಂ ಹಿ ಶೋಭತೇ ಸ್ತ್ರೀಣಾಂ ತತಃ ಪ್ರಾಹ ವೃಕೋದರಸ್ತಮ್ ॥
-ಮ.ಭಾ.ತಾ.ನಿ.(೨೨/೭೫)

ಭೀಮಸೇನ ಅಲ್ಲಿ ಧರ್ಮರಾಜನಿಗೆ ತಿಳಿಸಿದ ಧರ್ಮಸೂಕ್ಷ್ಮ ದ್ರೌಪದಿಯ ವಾದದ ಪರಿಪೂರ್ಣರೂಪವಾಗಿತ್ತು. ಒಟ್ಟಾಗಿ ಭೀಮ-ದ್ರೌಪದಿಯರ ಸಂದೇಶದಲ್ಲಿ ಏಕವಾಕ್ಯತೆ ಇತ್ತು. ದ್ರೌಪದಿಯ ಅತ್ಯದ್ಭುತವಾದ ತತ್ತ್ವಜ್ಞಾನದ ಪ್ರಾವೀಣ್ಯಕ್ಕೆ ಈ ಪ್ರಸಂಗ ಅತ್ಯುತ್ತಮವಾದ ಸಾಕ್ಷಿಯಾಗಿ ನಿಲ್ಲುವುದು.

ಅವರಿಬ್ಬರ ಮಾತುಗಳಿಂದ ಯುಧಿಷ್ಠಿರ ಧರ್ಮದ ಹೃದಯವನ್ನು ತಿಳಿಯುವಂತಾದ. ಕರ್ತವ್ಯ ವಿಮುಖನಾಗಿದ್ದ ಅವನು ಕರ್ತವ್ಯ ಸುಮುಖನಾದ. ತನ್ನ ತಪ್ಪನ್ನು ತಿದ್ದಿಕೊಂಡು ಸನ್ಮಾರ್ಗದಲ್ಲಿ ನಡೆಯಲು ಬದ್ಧಕಂಕಣನಾದ. ಹೆಸರಿಗೆ ಯುಧಿಷ್ಠಿರನಾಗಿದ್ದ ಅವನು ನಿಜವಾದ ಅರ್ಥದಲ್ಲಿ ಯುಧಿಷ್ಠಿರ ಎನ್ನಿಸಿ ದುರ್ಯೋಧನಾದಿಗಳೊಂದಿಗೆ ಯುದ್ಧಸಾರಲು ಸ್ಥಿರವಾದ ಮನಸ್ಸನ್ನು ಮಾಡಿದ.

ಭೀಮ-ದ್ರೌಪದಿಯರ ಉಪದೇಶದಿಂದ ಯುದ್ಧಕ್ಕೆ ಮನಸ್ಸು ಮಾಡಿದ ಯುಧಿಷ್ಠಿರ, ಭೀಷ್ಮಾದಿಗಳನ್ನು ಎದುರಿಸಲು ಅರ್ಜುನನಿಗೆ ಈಗಿರುವ ಸಿದ್ಧತೆ ಸಾಲದು ಎಂದು ಭಾವಿಸಿ ಚಿಂತಾಮಗ್ನನಾದ. ಆಗ ಶ್ರೀವೇದವ್ಯಾಸರು ಆಗಮಿಸಿ, ಶಿವನನ್ನು ಆರಾಧಿಸಿ ಪಾಶುಪತಾಸ್ತ್ರವನ್ನು ಪಡೆದು ಬರಲು ಅರ್ಜುನನಿಗೆ ಮಂತ್ರವೊಂದನ್ನು ಅವನ ಮೂಲಕ ತಿಳಿಸಿದರು. ಅರ್ಜುನ ಮುಂದೆ ಅದರಲ್ಲಿ ಯಶಸ್ವಿಯಾಗಿ ಪಾಶುಪತಾಸ್ತ್ರವನ್ನು ಪಡೆದ. ಇತರ ದಿಕ್ಪಾಲಕರು ಸಹ ತಮ್ಮ ತಮ್ಮ ಅಸ್ತ್ರಗಳನ್ನು ನೀಡಿದರು. ಇಂದ್ರನ ಆಹ್ವಾನದಂತೆ ಅರ್ಜುನ ಇಂದ್ರಲೋಕಕ್ಕೆ ತೆರಳಿ ಅಲ್ಲಿ ನಾಲ್ಕು ವರ್ಷಗಳಷ್ಟು ಸುದೀರ್ಘಕಾಲ ನೆಲೆಸಿ ಬಗೆಬಗೆಯ ವಿದ್ಯೆಗಳನ್ನು ಕಲಿತ. ತನ್ನನ್ನು ಬಯಸಿ ಬಂದ ಊರ್ವಶಿಯನ್ನು ಕುಲದ ತಾಯಿ ಎಂದು ತಿರಸ್ಕರಿಸಿ ಅವಳಿಂದ ಷಂಡತನದ ಶಾಪವನ್ನು ಪಡೆದ. ಇಂದ್ರ ತಿಳಿಸಿದಂತೆ ಮುಂದೆ ಅದು ಅಜ್ಞಾತವಾಸ ಕಾಲದಲ್ಲಿ ಒಂದು ವರ್ಷ ಬೃಹನ್ನಳೆಯ ರೂಪದಲ್ಲಿ ಅರ್ಜುನ ಇರಲು ವರವೇ ಆಯಿತು.

ಇಂದ್ರ ಕಳುಹಿಸಿದ ಲೋಮಶ ಎಂಬ ಮುನಿಗಳು ಪಾಂಡವರ ಬಳಿಗೆ ಬಂದರು. ಅವರ ನೇತೃತ್ವದಲ್ಲಿ ಪಾಂಡವರು ಸಮಗ್ರ ಭರತಖಂಡವನ್ನು ಪರ್ಯಟನ ಮಾಡಿದರು. ಮುಂದೆ ಪ್ರಭಾಸದಲ್ಲಿ ಶ್ರೀಕೃಷ್ಣನನ್ನು ಸಂದರ್ಶಿಸಿ ಬದರಿಯತ್ತ ಪ್ರಯಾಣ ಬೆಳೆಸಿದರು. ಹರಿದ್ವಾರಾದಿ ಪ್ರಾಂತಗಳಲ್ಲಿ ಸುಖಪ್ರಯಾಣಕ್ಕಾಗಿ ಯುಧಿಷ್ಠಿರ ಘಟೋತ್ಕಚನನ್ನು ಸ್ಮರಿಸಿದ. ತನ್ನ ಪರಿವಾದೊಂದಿಗೆ ಬಂದ ಅವನು ದ್ರೌಪದಿಯನ್ನು ತನ್ನ ಬೆನ್ನ ಮೇಲೆ ಧರಿಸಿ ಬದರಿಯತ್ತ ಸಾಗಿದ. ಅವನ ಅನುಚರರು ಪಾಂಡವರನ್ನು ಋಷಿಮುನಿಗಳನ್ನು ಹೊತ್ತು ಅವನನ್ನು ಹಿಂಬಾಲಿಸಿದರು. ಪಾಂಡವರು ಬದರಿಯಲ್ಲಿ ಕೆಲಕಾಲ ಇದ್ದು ಮುಂದೆ ಗಂಧಮಾದನ ಪ್ರಾಂತದಲ್ಲಿದ್ದ ಉತ್ತರ ಬದರಿಯನ್ನು ತಲುಪಿದರು.

## ಸೌಗಂಧಿಕಪುಷ್ಪದ ಪ್ರಸಂಗ

ಭೀಮ-ದ್ರೌಪದಿಯರು ಒಮ್ಮೆ ಗಂಧಮಾದನ ಪ್ರಾಂತದಲ್ಲಿ ಏಕಾಂತದಲ್ಲಿದ್ದ ಸಮಯ. ಆಗೊಮ್ಮೆ ಕುಬೇರನ ಒಡೆತನದಲ್ಲಿದ್ದ ಸೌಗಂಧಿಕಪುಷ್ಪಗಳ ಸರೋವರದಲ್ಲಿ ನೆಲೆಸಿದ್ದ ನಾಗವೊಂದನ್ನು ಗರುಡ ಹಾರಿ ಹಿಡಿದ. ಆಗ ಬೀಸಿದ ಅವನ ರೆಕ್ಕೆಯಿಂದ ಹೊರಹೊಮ್ಮಿದ ಗಾಳಿಗೆ ಸರೋವರದ ನೀರು ಉಲ್ಲೋಲಕಲ್ಲೋಲವಾಗಿ ಹತ್ತಾರು ಸೌಗಂಧಿಕ ಪುಷ್ಪಗಳು ಭೀಮ-ದ್ರೌಪದಿಯರ ಬಳಿ ಬಿದ್ದವು. ಅದನ್ನು ನೋಡಿದ ದ್ರೌಪದಿಯು ಅಂತಹ ಇನ್ನಷ್ಟು ಹೂವುಗಳು ಬೇಕು ಎಂದು ಭೀಮನನ್ನು ಕೇಳಿಕೊಂಡಳು. ಕೂಡಲೇ ಭೀಮಸೇನ ಅದನ್ನು ತರಲೆಂದು ಗಂಧಮಾದನ ಪರ್ವತವನ್ನು ಏರತೊಡಗಿದ. ಮಾರ್ಗಮಧ್ಯದಲ್ಲಿ ಭೀಮ-ಹನುಮಂತರ ಸಮಾಗಮ ನಡೆಯಿತು. ಸೌಗಂಧಿಕ ಸರೋವರನ್ನು ಕಾಯುತ್ತಿದ್ದ ಲಕ್ಷಗಟ್ಟಲೆ ರಾಕ್ಷಸರನ್ನು ಭೀಮ ಸಂಹರಿಸಿದ. ಆ ವಾರ್ತೆಯನ್ನು ಕೇಳಿದ ಕುಬೇರ ಭೀಮನ ಪರಾಕ್ರಮವನ್ನು ತಿಳಿದು ಸಂತೋಷದಿಂದ ಪುಷ್ಪಗಳನ್ನು ಸಮರ್ಪಿಸಲು ತನ್ನ ಪರಿವಾರಕ್ಕೆ ಅಪ್ಪಣೆ ಮಾಡಿದ. ಆ ವೇಳೆಗೆ ದ್ರೌಪದೀ ಸಮೇತನಾಗಿ ಯುಧಿಷ್ಠಿರ ಸಪರಿವಾರನಾಗಿ ಅಲ್ಲಿಗೆ ಆಗಮಿಸಿದ. ಕುಬೇರನ ಕೋರಿಕೆಯಂತೆ ಪಾಂಡವರ ಮುಂದಿನ ವಾಸ ಅಲ್ಲಿಯೇ ನಡೆಯಿತು.

## ಪಂಚವರ್ಣದ ಪುಷ್ಪಗಳ ಪ್ರಸಂಗ

ಪಾಂಡವರು ಕುಬೇರನ ಪಟ್ಟಣವಾದ ಅಲಕಾಪುರಿಯ ಹೊರವಲಯದಲ್ಲಿ ನೆಲೆಸಿದ್ದಾಗ ಒಮ್ಮೆ ಭೀಮ-ದ್ರೌಪದಿಯರು ಮತ್ತೊಮ್ಮೆ ಏಕಾಂತದಲ್ಲಿದ್ದಾಗ ಹಿಂದೆ ನಡೆದಂತಹ ಪ್ರಸಂಗ ಮತ್ತೆ ನಡೆಯಿತು. ಈ ಬಾರಿ ಕುಬೇರನ ಪಟ್ಟಣದ ಒಳವಲಯದಲ್ಲಿದ್ದ ಪಂಚವರ್ಣದ ಪುಷ್ಪಗಳು ದ್ರೌಪದಿಯ ಮುಂದೆ ಬಂದು ಬಿದ್ದವು. ದ್ರೌಪದೀ ಅಂತಹ ಮತ್ತಷ್ಟು ಪುಷ್ಪಗಳನ್ನು ತರಲು ಭೀಮನನ್ನು ಕೇಳಿಕೊಂಡಳು. ಕೂಡಲೇ ಭೀಮಸೇನ ಅಲ್ಲಿಗೆ ಧಾವಿಸಿದ; ಅಲ್ಲಿದ್ದ ಪದ್ಮತ್ರಯ ಸಂಖ್ಯೆಯ ಕ್ರೋಧವಶರು ಎಂಬ ದೈತ್ಯರನ್ನು ಆ ಸೈನ್ಯದ ಮುಖ್ಯಸ್ಥನಾದ ಮಣಿಮಂತನ ಸಮೇತವಾಗಿ ಸಂಹರಿಸಿದ. ಅಲ್ಲಿಗೆ ಆಗಮಿಸಿದ ಕುಬೇರ, ಆ ವೇಳಗೆ ಬಂದಿದ್ದ ಧರ್ಮರಾಜನನ್ನು ಕಂಡು ವಿಷಯ ತಿಳಿದು ಅವರನ್ನು ಸನ್ಮಾನಿಸಿದ. ಪಾಂಡವರ ಮುಂದಿನ ಅನೇಕ ವರ್ಷಗಳ ವಾಸ ಅಲಕಾಪುರಿಯಲ್ಲಿಯೇ ನಡೆಯಿತು.

ಈ ಎರಡೂ ಪ್ರಸಂಗಗಳಲ್ಲಿ ದ್ರೌಪದಿಯು ಹೂವಿಗೆ ಆಸೆ ಪಟ್ಟ ಒಬ್ಬ ಸಾಮಾನ್ಯ ಸ್ತ್ರೀಯಂತೆ ಕಾಣುವಳು. ಹೂವನ್ನು ಬಯಸುವುದು ಸ್ತ್ರೀಯರ ಸ್ವಭಾವ. ದ್ರೌಪದಿಯು ಸಹ ಹಾಗೆ ನಡೆದುಕೊಂಡಳೇ? ಎಂಬುದು ಇಲ್ಲಿಯ ಪ್ರಶ್ನೆ. ಅದು ಸರಿಯಲ್ಲ, ದ್ರೌಪದಿಗೆ ಬೇಕಾದದ್ದು ಹೂವುಗಳಲ್ಲ, ಅ ಮೂಲಕವಾಗಿ ಆ ಸರೋವರಗಳ ಬಳಿ ನೆಲೆಸಿದ್ದ ಶಿವನ ವರದಿಂದ

ಕೂಡಿದ್ದ ಅಪಾರ ಸಂಖ್ಯೆಯ ಕ್ರೋಧವಶ ದೈತ್ಯರ ಸಂಹಾರ, ಮುಖ್ಯವಾಗಿ ಮಣಿಮಂತನ ಸಂಹಾರ. ಆ ಮೂಲಕವಾಗಿ ಭೀಮಸೇನನ ಯಶಸ್ಸು ಹಾಗೂ ಧರ್ಮಗಳ ಪ್ರಕಾಶನ. ಒಬ್ಬ ಸತಿ ತನ್ನ ಪತಿಯ ಅಭ್ಯುದಯವನ್ನು ಸದಾ ಹಾರೈಸಬೇಕು. ಅದಕ್ಕೆ ಅನುಕೂಲಿಸುವಂತಹ ಪ್ರಸಂಗವನ್ನು ತಂದುಕೊಳ್ಳಬೇಕು ಎಂಬುದು ದ್ರೌಪದಿಯ ವರ್ತನೆಯ ಹಿಂದಿನ ರಹಸ್ಯ. ದುಷ್ಟರ ಸಂಹಾರ ಭಗವಂತನಿಗೆ ಪ್ರಿಯವಾದ ಕಾರ್ಯ. ಆ ಕಾರ್ಯವನ್ನು ಭೀಮಸೇನ ಮಾಡಬೇಕು, ಅದಕ್ಕೆ ತಾನು ಒಂದು ಕಾರಣವಾಗಬೇಕು. ದ್ರೌಪದಿಯ ಈ ಚಿಂತನೆ ಸ್ತ್ರೀಧರ್ಮಕ್ಕೆ ಒಂದು ದೊಡ್ಡ ಕಾಣಿಕೆ.

ಹೂವನ್ನು ಬೇಡುವ ನೆಪದಲ್ಲಿ ಧರ್ಮಸಂಸ್ಥಾಪನೆ ಮಾಡಿದ ಪ್ರಜ್ಞಾವಂತ ಮಹಿಳೆ ದ್ರೌಪದಿ. ಒಂದು ರೀತಿಯಲ್ಲಿ ಈ ಪ್ರಸಂಗ ಪಾರಿಜಾತ ಪುಷ್ಪದ ಪ್ರಸಂಗದಲ್ಲಿನ ಸತ್ಯಭಾಮಾ ದೇವಿಯ ರೀತಿಯನ್ನು ಹೋಲುವುದು. ಸತ್ಯಭಾಮೆಯ ಕಪಟಕೋಪ, ಮುಂದೆ ಶ್ರೀಕೃಷ್ಣ ಇಂದ್ರನ ನಂದನವನದಿಂದ ಪಾರಿಜಾತವೃಕ್ಷವನ್ನೇ ಭೂಮಿಗೆ ತಂದಿರಿಸುವ ಮಹಾತ್ಕಾರ್ಯದಲ್ಲಿ ಪರ್ಯವಸಾನವಾಯಿತು. ನಂದನವನವನದಿಂದ ಪಾರಿಜಾತವನ್ನು ತರುವ ಮುನ್ನ ನರಕಾಸುರನ ವಧೆಯೂ ನಡೆಯಿತು. ಇಂದ್ರ ಮೊದಲಾದ ದೇವತಾವೃಂದ ಶಿವನ ಸಮೇತವಾಗಿ ಶ್ರೀಕೃಷ್ಣನಿಂದ ಪರಾಭವಗೊಳ್ಳುವ ಮೂಲಕ ಅವನ ಸರ್ವೋತ್ತಮತ್ವ ಸಮರ್ಥಿತವಾಯಿತು. ಸತ್ಯಭಾಮೆ ಶ್ರೀಕೃಷ್ಣನ ಹಿರಿಮೆಯನ್ನು ಹೀಗೆ ಸಾಧಿಸುವ ಭಗವತ್ಪ್ರಿಯವಾದ ಕಾರ್ಯವನ್ನು ಮಾಡಿದರೆ, ಮಣಿಮಂತ ಮೊದಲಾದವರ ವಧೆಯ ಮೂಲಕ ಭೀಮಸೇನನ ಜೀವೋತ್ತಮತ್ವ ಜಗತ್ತಿಗೆ ತಿಳಿಯುವಂತೆ ಮಾಡಿದ್ದು ದ್ರೌಪದಿಯ ಈ ಪ್ರಸಂಗದ ಸಾಧನೆಯಾಯಿತು.

ಇನ್ನೊಂದು ರೀತಿಯಲ್ಲಿ ಇದು ರಾಮಾಯಣದಲ್ಲಿ ಸೀತಾದೇವಿಯು ಶ್ರೀರಾಮನನ್ನು ಕೇಳಿಕೊಂಡ ಮಾಯಾಜಿಂಕೆಯ ಪ್ರಸಂಗವನ್ನು ಹೋಲುವುದು. ಸಾಕ್ಷಾತ್ ಮಹಾಲಕ್ಷ್ಮಿಯಾದ ಸೀತೆಗೆ ಆ ಸುವರ್ಣಜಿಂಕೆಯಿಂದ ಆಗಬೇಕಾದದ್ದು ಏನೂ ಇಲ್ಲ. ಆದರೆ, ಆ ಮೂಲಕವಾಗಿ ಮಾರೀಚನ ಸಂಹಾರವಾಗಬೇಕು, ಮುಂದೆ ಅದು ರಾವಣಾದಿ ಸಕಲದೈತ್ಯರ ಸಂಹಾರಕ್ಕೆ ನಾಂದಿಯಾಗಬೇಕು ಎಂಬುದು ಮುಖ್ಯ ಉದ್ದೇಶವಾಗಿತ್ತು. ಇದನ್ನೆಲ್ಲ ಅರ್ಥಮಾಡಿಕೊಂಡವರಿಗೆ ದ್ರೌಪದಿಯ ಈ ಕಾರ್ಯದ ಮಹತ್ತ್ವವು

---

೧ ವಸತ್ಸು ತತ್ರ ಪಾರ್ಥೇಷು ಪುನಃ ಕತಿಪಯೈರ್ದಿನೈಃ।
ಉವಾಚ ಭೀಮಸೇನಸ್ಯ ಯಶೋಧರ್ಮಾಭಿವೃದ್ಧಯೇ॥
ಪಂಚವರ್ಣಾನಿ ಪುಷ್ಪಾಣಿ ಕೃಷ್ಣಾ ವೀಕ್ಷ್ಯಾಹೃತಾನಿ ತು।
ಮಾರುತೇನ ಕುಬೇರಸ್ಯ ಗೃಹಾನ್ನಭಿರಗಮ್ಯತಃ॥
ಅಗಮ್ಯೋಽಯಂ ಗಿರಿಃ ಸರ್ವೈಃ ಕುಬೇರೇಣಾಭಿಪಾಲಿತಃ।
ಅದ್ಯ ತ್ವಯೈವ ಗಂತವ್ಯೋ ವಿಧೂಯಾಖಿಲರಾಕ್ಷಸಾನ್॥ -ಮ.ಭಾ.ತಾ.ನಿ.(೨೨/೩೦೧-೩೦೩)

ಮನವರಿಕೆಯಾಗುವುದು. ಸರ್ವೋತ್ತಮನ ಪತ್ನಿಯಾಗಿ ಮಹಾಲಕ್ಷ್ಮೀ, ಸೀತಾ, ಸತ್ಯಭಾಮಾ ಮೊದಲಾದ ರೂಪಗಳಿಂದ ಮಾಡಿದ ಭಗವತ್ಕಾರ್ಯ ಸಾಧನೆಯನ್ನು ಜೀವೋತ್ತಮನ ಪತ್ನಿಯಾಗಿ ದ್ರೌಪದಿಯು ಹೀಗೆ ಮಾಡಿದಳು ಎಂಬುದು ಇಲ್ಲಿಯ ಮುಖ್ಯವಾದ ಅಂಶ.

## ಜಟಾಸುರ ವಧೆಯ ಪ್ರಸಂಗ

ಜಟಾಸುರ ಮತ್ತೊಬ್ಬ ರಾಕ್ಷಸ. ಅವನಿಗೆ ಪಾರ್ವತಿಯ ವರವಿತ್ತು. ಪಾಂಡವರಿಗೆ ಕೇಡನ್ನು ಬಯಸಿದ್ದ ಅವನು ಜಟಾದಿಗಳನ್ನು ಧರಿಸಿದ ಬ್ರಾಹ್ಮಣ ವೇಷದಲ್ಲಿ ಪಾಂಡವರ ಬಳಿ ಸೇರಿಕೊಂಡ. ಪೂರ್ಣಪ್ರಜ್ಞನಾದ ಭೀಮ ಅವನನ್ನು ನೋಡಿದ ಕೂಡಲೆ ಅವನು ಯಾರು ಎಂಬುದನ್ನು ತಿಳಿದ. ಆದರೆ, ಬ್ರಾಹ್ಮಣವೇಷದಲ್ಲಿದ್ದ ಅವನನ್ನು ಕೊಲ್ಲುವುದು ತರವಲ್ಲ ಎಂದು ಅವನು ತನ್ನ ನಿಜರೂಪವನ್ನು ಧರಿಸುವ ಸಮಯ ಬರಲಿ ಎಂದು ಕಾಯುತ್ತಿದ್ದ. ಒಮ್ಮೆ ಪಾಂಡವರೆಲ್ಲ ಬೇಟೆಗೆ ಹೋಗಿದ್ದಾಗ, ಅವನು ದ್ರೌಪದಿಯನ್ನು, ಯುಧಿಷ್ಠಿರ ಹಾಗೂ ನಕುಲ-ಸಹದೇವರ ಸಮೇತ ಅಪಹರಣ ಮಾಡಿಕೊಂಡು ಪಲಾಯನಗೈದ. ಅವನಿಂದ ಹೇಗೋ ತಪ್ಪಿಸಿಕೊಂಡ ಸಹದೇವ ರಕ್ಷಣೆಗಾಗಿ ಭೀಮಸೇನನನ್ನು ಕೂಗಿಕೊಂಡ. ಕೂಡಲೆ ಭೀಮಸೇನ ಅಲ್ಲಿಗೆ ಧಾವಿಸಿದ. ಆಗ ಯುಧಿಷ್ಠಿರ ತನ್ನ ಯೋಗಶಕ್ತಿಯಿಂದ ಜಟಾಸುರನು ಮುಂದೆ ಸಾಗದಷ್ಟು ಭಾರವಾದ. ಭೀಮನನ್ನು ಕಾಣುತ್ತಲೆ ಅಂಜಿದ ಜಟಾಸುರ ದ್ರೌಪದೀ ಮೊದಲಾದ ಎಲ್ಲರನ್ನೂ ಬಿಟ್ಟು ಭೀಮನ ಮೇಲೆ ಯುದ್ಧಕ್ಕೆ ತೊಡಗಿದ. ಭೀಮಸೇನ ಕೊನೆಗೆ ಜಟಾಸುರನೊಂದಿಗೆ ಯುದ್ಧ ಮಾಡಿ, ಖಡ್ಗದಿಂದ ಅವನ ದೇಹವನ್ನು ತುಂಡು ತುಂಡು ಮಾಡಿದ; ಅವನ ತಲೆಯನ್ನು ಮರದಿಂದ ಹಣ್ಣನ್ನು ಹೇಗೋ ಹಾಗೆ ಕಿತ್ತಿ ಬಿಸಾಡಿದ.

ದ್ರೌಪದಿಯು ವೇದಾದಿಶಾಸ್ತ್ರಗಳ ಸಂಕೇತ; ಜಟಾಸುರ ಇದಕ್ಕೆ ಅರ್ಹತೆ ಇಲ್ಲದ ಅಸುರ. ಅವನು ಬ್ರಾಹ್ಮಣವೇಷದಲ್ಲಿ ದ್ರೌಪದಿಯನ್ನು ಅಪಹರಿಸಬಯಸಿದ್ದು ವೇಷಾಂತರದಿಂದ ವಿದ್ಯೆಯನ್ನು ಕದಿಯುವ ಕುತಂತ್ರಕ್ಕೆ ಸಂಕೇತ. ಭೀಮಸೇನನಿಂದ ದ್ರೌಪದಿಯ ಬಿಡುಗಡೆ ಎಂಬ ಮಾತಿಗೆ ವಾಯುದೇವರಿಂದಲೆ ಶಾಸ್ತ್ರಗಳಿಗಾಗುವ ಅಪಚಾರದ ಪರಿಹಾರ ಎಂಬ ತತ್ತ್ವ ಅಡಗಿದೆ.

## ಜಯದ್ರಥನ ಪರಾಭವ

ಪಾಂಡವರು ಕಾಮ್ಯಕವನದಲ್ಲಿದ್ದಾಗ ನಡೆದ ಘಟನೆ. ಎಂದಿನಂತೆ ಒಂದು ದಿನ ಅವರು ಮಧ್ಯಾಹ್ನದ ಸಮಯದಲ್ಲಿ ತಪಸ್ವಿಗಳಿಗೆ ಅಡ್ಡಿಮಾಡುವಂತಹ ಕ್ರೂರಮೃಗಗಳ ಬೇಟೆಗೆಂದು ತೆರಳಿದ್ದರು. ಜಯದ್ರಥನು ಕೌರವರ ತಂಗಿ ದುಃಶಲೆಯ ಗಂಡ. ಅವನು ಮತ್ತೊಂದು ಮದುವೆಯನ್ನು ಮಾಡಿಕೊಳ್ಳ ಬಯಸಿ ಸಾಲ್ವದೇಶದತ್ತ ಹೊರಟಿದ್ದವನು ವಿಷಯ

ಲೋಲುಪನಾದ ಅವನಿಗೆ, ಕಾಡಿನ ಮಾರ್ಗದಲ್ಲಿ ಪಾಂಡವರ ಆಶ್ರಮ ಕಣ್ಣಿಗೆ ಬಿತ್ತು. ದ್ರೌಪದಿ ಒಬ್ಬಳೇ ಇರುವುದನ್ನು ಗಮನಿಸಿದ ಅವನು, ಅವಳ ಅಪಹರಣಕ್ಕೆ ಪ್ರಯತ್ನಿಸಿದ. ನೀಚರ ಸ್ವಭಾವವೇ ಅಂತಹುದು. ಹೆಣ್ಣು ಎಂದರೆ ಆಯಿತು, ಅವರ ಹಿರಿಮೆ, ಸಂಬಂಧ ಮೊದಲಾದ ಯಾವುದನ್ನೂ ಗಮನಿಸದೇ ಅವರತ್ತ ಕೆಟ್ಟ ದೃಷ್ಟಿ ಹಾಕುವುದು ಅವರ ರೀತಿ. ಜಯದ್ರಥ ಮಾಡಿದ್ದೂ ಅದನ್ನೇ. ಮೊದಲಿಗೆ ತನ್ನ ಸ್ನೇಹಿತನಾದ ಕೋಟಿಕಾಶ್ಯ ಎಂಬವನನ್ನು ದ್ರೌಪದಿಯನ್ನು ಕರೆತರಲು ಕಳುಹಿಸಿದ. ಅವಳಿಂದ ನಿರಾಕೃತನಾದ ಅವನು ಮರಳಿದಾಗ, ಜಯದ್ರಥ ತಾನೇ ತೆರಳಿ ದ್ರೌಪದಿಯನ್ನು ಹಿಡಿದು ತರುವ ಪ್ರಯತ್ನವನ್ನು ನಡೆಸಿದ. ಪರಿಸ್ಥಿತಿಯನ್ನು ಗಮನಿಸಿ ದ್ರೌಪದಿಯು ಧೌಮ್ಯರೊಂದಿಗೆ ರಥವನ್ನು ಏರಿದಳು. ರಕ್ಷಣೆಗಾಗಿ ಧೌಮ್ಯರ ಕೂಗಾಟವನ್ನು ಕೇಳಿದ ಪಾಂಡವರೆಲ್ಲ ಅಲ್ಲಿಗೆ ಧಾವಿಸಿದರು. ರಥದಲ್ಲಿ ವೇಗದಿಂದ ಸಾಗುತ್ತಿದ್ದ ಜಯದ್ರಥನನ್ನು ಭೀಮಾರ್ಜುನರು ಬೆನ್ನಟ್ಟಿದರು. ಅವರನ್ನು ಕಾಣುತ್ತಲೇ ದ್ರೌಪದಿಯು ಧೌಮ್ಯರೊಂದಿಗೆ ಕೆಳಕ್ಕಿಳಿದು ತಮ್ಮ ಆಶ್ರಮವನ್ನು ಸೇರಿಕೊಂಡಳು. ಜಯದ್ರಥನ ಸೈನ್ಯವನ್ನು ನಾಶಮಾಡಿ ಭೀಮಾರ್ಜುನರು ಅವನನ್ನು ಸೆರೆಹಿಡಿದು ದ್ರೌಪದಿಯ ಪಾದದಲ್ಲಿ ಹಾಕಿದರು. ಬಂಧು ಎಂಬ ಕಾರಣದಿಂದ ಯುಧಿಷ್ಠಿರ ಅವನನ್ನು ಬಿಡುಗಡೆ ಮಾಡಿಸಿದ. ಭೀಮಸೇನ ಅವನ ತಲೆ ಬೋಳಿಸಿ ಪಂಚಚೂಡನನ್ನಾಗಿ ಮಾಡಿ ಕಳುಹಿಸಿಕೊಟ್ಟ. ಅದು ಸಹ ಅವನು ತಾನು ದ್ರೌಪದಿಯ ದಾಸ ಎಂದು ಶರಣಾಗತನಾದ ಬಳಿಕವೆ.

ಒಂಟಿಯಾಗಿದ್ದ ದ್ರೌಪದಿಯ ಅಪಹರಣದ ಈ ಪ್ರಸಂಗ ರಾಮಾಯಣದ ಸೀತಾಪಹರಣ ಪ್ರಸಂಗವನ್ನು ಹೋಲುವುದು. ಅಲ್ಲಿ ನಡೆದದ್ದು ಸೀತೆಯ ಅಪಹರಣ, ಎಂದರೆ ಮಹಾಲಕ್ಷ್ಮಿಯ ಅಪಹರಣದ ಪ್ರಯತ್ನ. ಇಲ್ಲಿ ನಡೆದದ್ದು ದ್ರೌಪದಿಯ ಅಪಹರಣದ ಪ್ರಯತ್ನ ಎಂದರೆ ವಿದ್ಯಾಭಿಮಾನಿನಿಯಾದ ಸರಸ್ವತಿಯ ಅಪಹರಣದ ಪ್ರಸಂಗ. ಅದನ್ನು ಮಾಡಲು ಹೊರಟಿದ್ದು ರಾವಣನಾದರೆ, ಇಲ್ಲಿ ಆ ಕಾರ್ಯ ಮಾಡಿದವನು ಜಯದ್ರಥ. ಎರಡೂ ನಡೆದದ್ದು ಸಹ ವನವಾಸ ಪ್ರಸಂಗದಲ್ಲಿಯೇ ಎಂಬುದು ಗಮನಿಸಬೇಕಾದ ಸಂಗತಿ. ಲಕ್ಷ್ಮೀ-ಸರಸ್ವತಿಯರನ್ನು ಭಕ್ತಿಯಿಂದ ಆರಾಧಿಸಿ ಅನುಗ್ರಹಕ್ಕೆ ಪಾತ್ರನಾಗುವುದು ಸಾಧನೆಯೇ ಹೊರತು, ಒತ್ತಾಯದಿಂದ ಅವರನ್ನು ವಶಮಾಡಿಕೊಳ್ಳುವುದು ಸರ್ವಥಾ ಅಸಾಧ್ಯ. ಮಹಾಲಕ್ಷ್ಮಿಯು ಸರ್ವೋತ್ತಮರಾದ ಶ್ರೀಹರಿಯ ಪತ್ನಿಯಾದರೆ, ಭಾರತಿಯು ಜೀವೋತ್ತಮರಾದ ವಾಯುದೇವರ ಪತ್ನಿ. ಅವರಿಬ್ಬರ ಮೇಲೆ ಒಡೆತನವನ್ನು ಸಾಧಿಸಬಯಸುವವರು ರಾವಣ-ಜಯದ್ರಥರಂತೆ ಅಯೋಗ್ಯರೇ ಸರಿ. ಅವರಿಗೆ ಸೂಕ್ತ ಶಿಕ್ಷೆ ತಪ್ಪಿದ್ದಲ್ಲ. ಅವರಿಬ್ಬರು ಸಹ ಮುಂದೆ ಯುದ್ಧದಲ್ಲಿ ಹೀನಾಯವಾದ ಸಾವನ್ನು ಕಂಡವರೇ ಎಂಬುದು ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶ.

# ದ್ರೌಪದೀ-ಸತ್ಯಭಾಮಾ ಸಂವಾದ

ವನವಾಸದಲ್ಲಿ ಶ್ರೀಕೃಷ್ಣ ಅನೇಕ ಸಲ ಪಾಂಡವರನ್ನು ಸಂದರ್ಶಿಸಲೆಂದು ಆಗಮಿಸಿದ್ದ. ಪಾಂಡವರ ವನವಾಸವು ಹಾಗೆ ಶ್ರೀಹರಿಯ ದರ್ಶನಕ್ಕೆ ಕಾರಣವಾದದ್ದು ಅವರ ವನವಾಸದ ಪಾವಿತ್ರ್ಯಕ್ಕೆ ಸಾಕ್ಷಿ. ಒಮ್ಮೆ ಶ್ರೀಕೃಷ್ಣನು ಸತ್ಯಭಾಮಾದೇವಿಯ ಸಮೇತ ವನದಲ್ಲಿ ಪಾಂಡವರಿಗೆ ದರ್ಶನವಿತ್ತ. ಪಾಂಡವರಿಗೆ ಆದ ಸಂಭ್ರಮಕ್ಕೆ ಮಿತಿಯೇ ಇರಲಿಲ್ಲ. ಹಾಗೆ ಸಂದರ್ಶಿಸಿದ ಶ್ರೀಕೃಷ್ಣ ಕೆಲವು ದಿನ ಅವರೊಂದಿಗೆ ತಾನು ಸಹ ಅಲ್ಲಿಯೇ ನೆಲೆಸಿದ್ದ. ಆಗೊಮ್ಮೆ ಏಕಾಂತದಲ್ಲಿ ದ್ರೌಪದಿಯನ್ನು ಸಮೀಪಿಸಿದ ಸತ್ಯಭಾಮಾದೇವಿ ಕೇಳಿದಳು: ''ಅಮ್ಮಾ ದ್ರೌಪದಿ! ನಿನ್ನ ರೀತಿ ನನಗೆ ಆಶ್ಚರ್ಯವೆನ್ನಿಸುತ್ತಿದೆ. ಶ್ರೀಕೃಷ್ಣನಿಗೆ ನಾವು ಹದಿನಾರುಸಾವಿರದ ನೂರೆಂಟು ಜನ ಪತ್ನಿಯರು. ಆದರೆ, ನಾವೆಲ್ಲರೂ ಎಷ್ಟು ಪ್ರಯತ್ನಿಸಿದರೂ ಸಹ ಅವನನ್ನು ವಶದಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತಿಲ್ಲ. ಆದರೆ, ನಿನಗಾದರೋ ಐವರು ಪತಿಯರು. ನಿನ್ನನ್ನು ಗಮನಿಸಿದರೆ ಅವರೆಲ್ಲ ನಿನ್ನ ಬಗ್ಗೆ ಹೊಂದಿರುವ ಪ್ರೀತಿಯನ್ನು ಕಂಡು ಆಶ್ಚರ್ಯವೆನ್ನಿಸುವುದು. ನಿನಗೆ ಇದು ಹೇಗೆ ಸಾಧ್ಯವಾಯಿತು. ನಿನ್ನ ಯಶಸ್ಸಿನ ಗುಟ್ಟೇನು? ಅದಕ್ಕಾಗಿ ಏನಾದರು ವ್ರತವನ್ನು ಕೈಗೊಂಡಿರುವೆಯಾ, ತಪಸ್ಸನ್ನು ಆಚರಿಸುತ್ತಿರುವೆಯಾ? ವಿಶೇಷ ಸ್ನಾನ, ಮಂತ್ರ, ಔಷಧಿಗಳನ್ನು ಪ್ರಯೋಗಿಸುತ್ತಿರುವೆಯಾ? ಮೂಲಿಕೆಗಳನ್ನು ಬಳಸಿರುವೆಯಾ? ಜಪ, ಹೋಮಗಳನ್ನೇನಾದರು ಮಾಡಿಸಿರುವೆಯಾ? ವಶೀಕರಣ ವಿದ್ಯೆಯನ್ನೇನಾದರು ಕಲಿತಿರುವೆಯಾ? ನನಗೆ ತುಂಬಾ ಕುತೂಹಲ; ತಿಳಿಸು'' ಎಂದು ಕೇಳಿದಳು.

ಸತ್ಯಭಾಮಾದೇವಿ ಸಾಮಾನ್ಯಳಲ್ಲ, ಅಕ್ಷರಪುರುಷಳಾದ ಮಹಾಲಕ್ಷ್ಮಿಯ ಭೂರೂಪದ ಅವತಾರ. ಎಂದರೆ, ಸಾಕ್ಷಾತ್ ಶ್ರೀಮಹಾಲಕ್ಷ್ಮಿಯೇ. ಶ್ರೀಹರಿಗೆ ಅನಾದಿಕಾಲದಿಂದ ಅನಂತಕಾಲದವರೆಗಿನ ನಿತ್ಯಪತ್ನಿ. ಶ್ರೀಹರಿಗೆ ಅವಳಷ್ಟು ಪ್ರಿಯಳು ವಿಶ್ವದಲ್ಲೇ ಬೇರೊಬ್ಬರಿಲ್ಲ. ಆದರೂ ಹಾಗೆ ಸತ್ಯಭಾಮಾದೇವಿಯು ಕೇಳಿದ್ದು ಕೇವಲ ಲೋಕವಿಡಂಬನೆಗೆಂದು ಹಾಗೂ ಲೋಕಶಿಕ್ಷಣಕ್ಕೆಂದು ತಿಳಿಯಬೇಕು. ಅಸುರಮೋಹನದ ಉದ್ದೇಶವಂತು ಇಂತಹ ಪ್ರಸಂಗಗಳಲ್ಲಿ ಇದ್ದೇ ಇರುವುದು. ಮುಖ್ಯವಾಗಿ ದ್ರೌಪದಿಯ ಪಾತಿವ್ರತ್ಯದ ಹಿರಿಮೆಯನ್ನು ಸತ್ಯಭಾಮಾದೇವೀ ಆ ಪ್ರಸಂಗದ ಮೂಲಕ ಪ್ರಕಟಪಡಿಸಿದರು ಎಂದು ತಿಳಿಯಬೇಕು.

ದ್ರೌಪದಿಯು ತಿಳಿಸಿದಳು. ''ಅಮ್ಮಾ! ನಿನಗೆ ತಿಳಿಯದ್ದೇನಿದೆ. ಶ್ರೀಕೃಷ್ಣನನ್ನು ನೀವು ಆರಾಧಿಸಿ ಒಲಿಸಿಕೊಂಡಿರುವುದು ನನಗೆ ತಿಳಿಯದ ಸಂಗತಿಯೇನಲ್ಲ. ಆದರೂ ನೀನು ಕೇಳಿರುವಿ ಎಂಬ ಕಾರಣಕ್ಕೆ ತಿಳಿಸುತ್ತಿದ್ದೇನೆ. ನಾನು ಯಾವುದೇ ಮಂತ್ರ, ತಂತ್ರ, ವಶೀಕರಣ ವಿದ್ಯೆಯಿಂದ ಪಾಂಡವರನ್ನು ವಶಪಡಿಸಿಕೊಂಡಿಲ್ಲ. ನಿರ್ಮಲವಾದ ನಡತೆಯೇ ಅವರ ಪ್ರೀತಿಗೆ ಕಾರಣ.''

ಲೋಲುಪನಾದ ಅವನಿಗೆ, ಕಾಡಿನ ಮಾರ್ಗದಲ್ಲಿ ಪಾಂಡವರ ಆಶ್ರಮ ಕಣ್ಣಿಗೆ ಬಿತ್ತು. ದ್ರೌಪದಿ ಒಬ್ಬಳೇ ಇರುವುದನ್ನು ಗಮನಿಸಿದ ಅವನು, ಅವಳ ಅಪಹರಣಕ್ಕೆ ಪ್ರಯತ್ನಿಸಿದ. ನೀಚರ ಸ್ವಭಾವವೇ ಅಂತಹುದು. ಹೆಣ್ಣು ಎಂದರೆ ಆಯಿತು, ಅವರ ಹಿರಿಮೆ, ಸಂಬಂಧ ಮೊದಲಾದ ಯಾವುದನ್ನೂ ಗಮನಿಸದೇ ಅವರತ್ತ ಕೆಟ್ಟ ದೃಷ್ಟಿ ಹಾಕುವುದು ಅವರ ರೀತಿ. ಜಯದ್ರಥ ಮಾಡಿದ್ದೂ ಅದನ್ನೇ. ಮೊದಲಿಗೆ ತನ್ನ ಸ್ನೇಹಿತನಾದ ಕೋಟಿಕಾಶ್ಯ ಎಂಬವನನ್ನು ದ್ರೌಪದಿಯನ್ನು ಕರೆತರಲು ಕಳುಹಿಸಿದ. ಅವಳಿಂದ ನಿರಾಕೃತನಾದ ಅವನು ಮರಳಿದಾಗ, ಜಯದ್ರಥ ತಾನೇ ತೆರಳಿ ದ್ರೌಪದಿಯನ್ನು ಹಿಡಿದು ತರುವ ಪ್ರಯತ್ನವನ್ನು ನಡೆಸಿದ. ಪರಿಸ್ಥಿತಿಯನ್ನು ಗಮನಿಸಿ ದ್ರೌಪದಿಯು ಧೌಮ್ಯರೊಂದಿಗೆ ರಥವನ್ನು ಏರಿದಳು. ರಕ್ಷಣೆಗಾಗಿ ಧೌಮ್ಯರ ಕೂಗಾಟವನ್ನು ಕೇಳಿದ ಪಾಂಡವರೆಲ್ಲ ಅಲ್ಲಿಗೆ ಧಾವಿಸಿದರು. ರಥದಲ್ಲಿ ವೇಗದಿಂದ ಸಾಗುತ್ತಿದ್ದ ಜಯದ್ರಥನನ್ನು ಭೀಮಾರ್ಜುನರು ಬೆನ್ನಟ್ಟಿದರು. ಅವರನ್ನು ಕಾಣುತ್ತಲೇ ದ್ರೌಪದಿಯು ಧೌಮ್ಯರೊಂದಿಗೆ ಕೆಳಕ್ಕಿಳಿದು ತಮ್ಮ ಆಶ್ರಮವನ್ನು ಸೇರಿಕೊಂಡಳು. ಜಯದ್ರಥನ ಸೈನ್ಯವನ್ನು ನಾಶಮಾಡಿ ಭೀಮಾರ್ಜುನರು ಅವನನ್ನು ಸೆರೆಹಿಡಿದು ದ್ರೌಪದಿಯ ಪಾದದಲ್ಲಿ ಹಾಕಿದರು. ಬಂಧು ಎಂಬ ಕಾರಣದಿಂದ ಯುಧಿಷ್ಠಿರ ಅವನನ್ನು ಬಿಡುಗಡೆ ಮಾಡಿಸಿದ. ಭೀಮಸೇನ ಅವನ ತಲೆ ಬೋಳಿಸಿ ಪಂಚಚೂಡನನ್ನಾಗಿ ಮಾಡಿ ಕಳುಹಿಸಿಕೊಟ್ಟ, ಅದು ಸಹ ಅವನು ತಾನು ದ್ರೌಪದಿಯ ದಾಸ ಎಂದು ಶರಣಾಗತನಾದ ಬಳಿಕವೆ.

ಒಂಟಿಯಾಗಿದ್ದ ದ್ರೌಪದಿಯ ಅಪಹರಣದ ಈ ಪ್ರಸಂಗ ರಾಮಾಯಣದ ಸೀತಾಪಹರಣ ಪ್ರಸಂಗವನ್ನು ಹೋಲುವುದು. ಅಲ್ಲಿ ನಡೆದದ್ದು ಸೀತೆಯ ಅಪಹರಣ, ಎಂದರೆ ಮಹಾಲಕ್ಷ್ಮಿಯ ಅಪಹರಣದ ಪ್ರಯತ್ನ. ಇಲ್ಲಿ ನಡೆದದ್ದು ದ್ರೌಪದಿಯ ಅಪಹರಣದ ಪ್ರಯತ್ನ ಎಂದರೆ ವಿದ್ಯಾಭಿಮಾನಿನಿಯಾದ ಸರಸ್ವತಿಯ ಅಪಹರಣದ ಪ್ರಸಂಗ. ಅದನ್ನು ಮಾಡಲು ಹೊರಟಿದ್ದು ರಾವಣನಾದರೆ, ಇಲ್ಲಿ ಆ ಕಾರ್ಯ ಮಾಡಿದವನು ಜಯದ್ರಥ. ಎರಡೂ ನಡೆದದ್ದು ಸಹ ವನವಾಸ ಪ್ರಸಂಗದಲ್ಲಿಯೇ ಎಂಬುದು ಗಮನಿಸಬೇಕಾದ ಸಂಗತಿ. ಲಕ್ಷ್ಮೀ-ಸರಸ್ವತಿಯರನ್ನು ಭಕ್ತಿಯಿಂದ ಆರಾಧಿಸಿ ಅನುಗ್ರಹಕ್ಕೆ ಪಾತ್ರನಾಗುವುದು ಸಾಧನೆಯೇ ಹೊರತು, ಒತ್ತಾಯದಿಂದ ಅವರನ್ನು ವಶಮಾಡಿಕೊಳ್ಳುವುದು ಸರ್ವಥಾ ಅಸಾಧ್ಯ. ಮಹಾಲಕ್ಷ್ಮಿಯು ಸರ್ವೋತ್ತಮರಾದ ಶ್ರೀಹರಿಯ ಪತ್ನಿಯಾದರೆ, ಭಾರತಿಯು ಜೀವೋತ್ತಮರಾದ ವಾಯುದೇವರ ಪತ್ನಿ. ಅವರಿಬ್ಬರ ಮೇಲೆ ಒಡೆತನವನ್ನು ಸಾಧಿಸಬಯಸುವವರು ರಾವಣ-ಜಯದ್ರಥರಂತೆ ಅಯೋಗ್ಯರೇ ಸರಿ. ಅವರಿಗೆ ಸೂಕ್ತ ಶಿಕ್ಷೆ ತಪ್ಪಿದ್ದಲ್ಲ, ಅವರಿಬ್ಬರು ಸಹ ಮುಂದೆ ಯುದ್ಧದಲ್ಲಿ ಹೀನಾಯವಾದ ಸಾವನ್ನು ಕಂಡವರೇ ಎಂಬುದು ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶ.

# ದ್ರೌಪದೀ-ಸತ್ಯಭಾಮಾ ಸಂವಾದ

ವನವಾಸದಲ್ಲಿ ಶ್ರೀಕೃಷ್ಣ ಅನೇಕ ಸಲ ಪಾಂಡವರನ್ನು ಸಂದರ್ಶಿಸಲೆಂದು ಆಗಮಿಸಿದ್ದ. ಪಾಂಡವರ ವನವಾಸವು ಹಾಗೆ ಶ್ರೀಹರಿಯ ದರ್ಶನಕ್ಕೆ ಕಾರಣವಾದದ್ದು ಅವರ ವನವಾಸದ ಪಾವಿತ್ರ್ಯಕ್ಕೆ ಸಾಕ್ಷಿ. ಒಮ್ಮೆ ಶ್ರೀಕೃಷ್ಣನು ಸತ್ಯಭಾಮಾದೇವಿಯ ಸಮೇತ ವನದಲ್ಲಿ ಪಾಂಡವರಿಗೆ ದರ್ಶನವಿತ್ತ. ಪಾಂಡವರಿಗೆ ಆದ ಸಂಭ್ರಮಕ್ಕೆ ಮಿತಿಯೇ ಇರಲಿಲ್ಲ. ಹಾಗೆ ಸಂದರ್ಶಿಸಿದ ಶ್ರೀಕೃಷ್ಣ ಕೆಲವು ದಿನ ಅವರೊಂದಿಗೆ ತಾನು ಸಹ ಅಲ್ಲಿಯೇ ನೆಲೆಸಿದ್ದ. ಆಗೊಮ್ಮೆ ಏಕಾಂತದಲ್ಲಿ ದ್ರೌಪದಿಯನ್ನು ಸಮೀಪಿಸಿದ ಸತ್ಯಭಾಮಾದೇವಿ ಕೇಳಿದಳು: ''ಅಮ್ಮಾ ದ್ರೌಪದಿ! ನಿನ್ನ ರೀತಿ ನನಗೆ ಆಶ್ಚರ್ಯವೆನ್ನಿಸುತ್ತಿದೆ. ಶ್ರೀಕೃಷ್ಣನಿಗೆ ನಾವು ಹದಿನಾರುಸಾವಿರದ ನೂರೆಂಟು ಜನ ಪತ್ನಿಯರು. ಆದರೆ, ನಾವೆಲ್ಲರೂ ಎಷ್ಟು ಪ್ರಯತ್ನಿಸಿದರೂ ಸಹ ಅವನನ್ನು ವಶದಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತಿಲ್ಲ. ಆದರೆ, ನಿನಗಾದರೋ ಐವರು ಪತಿಯರು. ನಿನ್ನನ್ನು ಗಮನಿಸಿದರೆ ಅವರೆಲ್ಲ ನಿನ್ನ ಬಗ್ಗೆ ಹೊಂದಿರುವ ಪ್ರೀತಿಯನ್ನು ಕಂಡು ಆಶ್ಚರ್ಯವೆನ್ನಿಸುವುದು. ನಿನಗೆ ಇದು ಹೇಗೆ ಸಾಧ್ಯವಾಯಿತು. ನಿನ್ನ ಯಶಸ್ಸಿನ ಗುಟ್ಟೇನು? ಅದಕ್ಕಾಗಿ ಏನಾದರು ವ್ರತವನ್ನು ಕೈಗೊಂಡಿರುವೆಯಾ, ತಪಸ್ಸನ್ನು ಆಚರಿಸುತ್ತಿರುವೆಯಾ? ವಿಶೇಷ ಸ್ನಾನ, ಮಂತ್ರ, ಔಷಧಿಗಳನ್ನು ಪ್ರಯೋಗಿಸುತ್ತಿರುವೆಯಾ? ಮೂಲಿಕೆಗಳನ್ನು ಬಳಸಿರುವೆಯಾ? ಜಪ, ಹೋಮಗಳನ್ನೇನಾದರು ಮಾಡಿಸಿರುವೆಯಾ? ವಶೀಕರಣ ವಿದ್ಯೆಯನ್ನೇನಾದರು ಕಲಿತಿರುವೆಯಾ? ನನಗೆ ತುಂಬಾ ಕುತೂಹಲ; ತಿಳಿಸು'' ಎಂದು ಕೇಳಿದಳು.

ಸತ್ಯಭಾಮಾದೇವಿ ಸಾಮಾನ್ಯಳಲ್ಲ, ಅಕ್ಷರಪುರುಷಳಾದ ಮಹಾಲಕ್ಷ್ಮಿಯ ಭೂರೂಪದ ಅವತಾರ. ಎಂದರೆ, ಸಾಕ್ಷಾತ್ ಶ್ರೀಮಹಾಲಕ್ಷ್ಮಿಯೇ. ಶ್ರೀಹರಿಗೆ ಅನಾದಿಕಾಲದಿಂದ ಅನಂತಕಾಲದವರೆಗಿನ ನಿತ್ಯಪತ್ನಿ. ಶ್ರೀಹರಿಗೆ ಅವಳಷ್ಟು ಪ್ರಿಯಳು ವಿಶ್ವದಲ್ಲೇ ಬೇರೊಬ್ಬರಿಲ್ಲ. ಆದರೂ ಹಾಗೆ ಸತ್ಯಭಾಮಾದೇವಿಯು ಕೇಳಿದ್ದು ಕೇವಲ ಲೋಕವಿಡಂಬನೆಗೆಂದು ಹಾಗೂ ಲೋಕಶಿಕ್ಷಣಕ್ಕೆಂದು ತಿಳಿಯಬೇಕು. ಅಸುರಮೋಹನದ ಉದ್ದೇಶವಂತು ಇಂತಹ ಪ್ರಸಂಗಗಳಲ್ಲಿ ಇದ್ದೇ ಇರುವುದು. ಮುಖ್ಯವಾಗಿ ದ್ರೌಪದಿಯ ಪಾತಿವ್ರತ್ಯದ ಹಿರಿಮೆಯನ್ನು ಸತ್ಯಭಾಮಾದೇವೀ ಆ ಪ್ರಸಂಗದ ಮೂಲಕ ಪ್ರಕಟಪಡಿಸಿದರು ಎಂದು ತಿಳಿಯಬೇಕು.

ದ್ರೌಪದಿಯು ತಿಳಿಸಿದಳು. ''ಅಮ್ಮಾ! ನಿನಗೆ ತಿಳಿಯದ್ದೇನಿದೆ. ಶ್ರೀಕೃಷ್ಣನನ್ನು ನೀವು ಆರಾಧಿಸಿ ಒಲಿಸಿಕೊಂಡಿರುವುದು ನನಗೆ ತಿಳಿಯದ ಸಂಗತಿಯೇನಲ್ಲ. ಆದರೂ ನೀನು ಕೇಳಿರುವಿ ಎಂಬ ಕಾರಣಕ್ಕೆ ತಿಳಿಸುತ್ತಿದ್ದೇನೆ. ನಾನು ಯಾವುದೇ ಮಂತ್ರ, ತಂತ್ರ, ವಶೀಕರಣ ವಿದ್ಯೆಯಿಂದ ಪಾಂಡವರನ್ನು ವಶಪಡಿಸಿಕೊಂಡಿಲ್ಲ. ನಿರ್ಮಲವಾದ ನಡೆತೆಯೇ ಅವರ ಪ್ರೀತಿಗೆ ಕಾರಣ.''

"ಮಂತ್ರತಂತ್ರಾದಿಗಳಿಂದ ಪತಿಯನ್ನು ವಶಪಡಿಸಿಕೊಳ್ಳುವುದು ಶಾಸ್ತ್ರಕ್ಕೆ ವಿರುದ್ಧವಾದ ವಿಚಾರ. ಅಂತಹ ಪ್ರಯತ್ನ ಎಂದೂ [೧]ಋಜುಮಾರ್ಗವೆನ್ನಿಸದು. ಅವುಗಳು ಯಶಸ್ವಿ-ಯಾಗುವುದು ಸಹ ಮಿಥ್ಯೆಯೇ. ವಶೀಕರಣ ಮೊದಲಾದವುಗಳಿಂದ ಪತಿಯು ಸತಿಯ ವಶವಾಗುವುದರ ಬದಲು ಯಮನ ವಶವಾಗುವ ಸಂಭವವೇ ಹೆಚ್ಚು. ಹಾಗೆ ವಶವಾಗುವ ಪತಿಯು ಜಲೋದರ, ತೊನ್ನು ಮೊದಲಾದ ರೋಗಗಳಿಗೆ ಗುರಿಯಾಗುವನು. ತಲೆಯು ಬೆಳ್ಳಗಾಗುವುದು, ಷಂಡನೂ ಆಗುವನು. ದಡ್ಡನೂ, ಕುರುಡನೂ, ಕಿವುಡನೂ ಆಗುವನು. ಅಂತಹ ವಾಮಮಾರ್ಗವನ್ನು ಎಂದೂ ಪತಿವ್ರತಾಸ್ತ್ರೀಯು ಅನುಸರಿಸಕೂಡದು.

ಪತಿಯಲ್ಲಿ ಭಗವಂತನ ಸನ್ನಿಧಾನ ಇರುವುದು ಎಂದು ತಿಳಿದು ಶ್ರದ್ಧೆಯಿಂದ ನಾನು ಉಪಚರಿಸುತ್ತೇನೆ. ಅವರ ಸಕಲ ಕಾರ್ಯಗಳಲ್ಲೂ ನಾನು ಮನಃಪೂರ್ವಕವಾಗಿ ಸಹಕರಿಸುತ್ತೇನೆ. ಅವರ ಮನಸ್ಸಿಗೆ ಬೇಸರವಾಗುವಂತಹ ಕಾರ್ಯಗಳನ್ನು ನಾನು ಸರ್ವಥಾ ಮಾಡುವುದಿಲ್ಲ. ಅಹಂಕಾರವನ್ನು, ಕಾಮಕ್ರೋಧಗಳನ್ನು ತೊರೆದು ನಾನು ಪತಿಸೇವೆಯನ್ನು ಮಾಡುವೆನು. ಅವರ ಮನಸ್ಸಿಗೆ ನೋವುಂಟಾಗುವ ಮಾತುಗಳನ್ನೂ ನಾನು ಆಡುವುದಿಲ್ಲ. ಅವರ ಮನೋಗತವನ್ನು ತಿಳಿದುಕೊಂಡು ವರ್ತಿಸುವೆನು. ಅವರು ಉಣ್ಣುವ ಮುನ್ನ ನಾನು ಉಣ್ಣುವುದಿಲ್ಲ. ಕರ್ತವ್ಯ ಪೂರೈಸಿ ಮನೆಗೆ ಮರಳುವ ಅವರನ್ನು ಎದ್ದು ನಿಂತು ಆದರದಿಂದ ಎದುರುಗೊಳ್ಳುವೆನು. ಆಸನವನ್ನು ನೀಡುವೆನು, ನೀರನ್ನೂ ಕೊಡುವೆನು. ಮನೆಯ ಪಾತ್ರೆಗಳನ್ನು ಶುಚಿಯಾಗಿ ಇರಿಸಿಕೊಳ್ಳುವೆನು. ಮೃಷ್ಟಾನ್ನವನ್ನು ಅವರಿಗೆ ನೀಡುವೆನು. ಆಲಸ್ಯ ಮಾಡದೆ ಅವರಿಗೆ ಸದಾ ಅನುಕೂಲವಾಗಿಯೇ ವರ್ತಿಸುವೆನು.

---

೧ ಅಸತ್ಸ್ತ್ರೀಣಾಂ ಸಮಾಚಾರಂ ಸತ್ಯೇ ಮಾಮನುಪೃಚ್ಛಸಿ ।
ಅಸದಾಚರಿತೇ ಮಾರ್ಗೇ ಕಥಂ ಸ್ಯಾದನುಕೀರ್ತನಮ್ ॥
ಅನುಪ್ರಶ್ನಃ ಸಂಶಯೋ ವಾ ನೈತತ್ ತ್ವಯ್ಯುಪಪದ್ಯತೇ ।
ತಥಾ ಹ್ಯುಪೇತಾ ಬುದ್ಧ್ಯಾ ತ್ವಂ ಕೃಷ್ಣಸ್ಯ ಮಹಿಷೀ ಪ್ರಿಯಾ ॥
ಯದ್ಯೈವ ಭರ್ತಾ ಜಾನೀಯಾನ್ಮಂತ್ರಮೂಲಪರಾಂ ಸ್ತ್ರಿಯಮ್ ।
ಉದ್ವಿಜೇತ ತದೈವಾಸ್ಯಾಃ ಸರ್ಪಾದ್ವೇಶ್ಮಗತಾದಿವ ॥
ಉದ್ವಿಗ್ನಸ್ಯ ಕುತಃ ಶಾಂತಿರಶಾಂತಸ್ಯ ಕುತಃ ಸುಖಮ್ ।
ನ ಜಾತು ವಶಗೋ ಭರ್ತಾ ಸ್ತ್ರಿಯಾಃ ಸ್ಯಾನ್ಮಂತ್ರಕರ್ಮಣಾ ॥
ಅಮಿತ್ರಪ್ರಹಿತಾಂಶ್ಚಾಪಿ ಗದಾನ್ ಪರಮದಾರುಣಾನ್ ।
ಮೂಲಪ್ರಚಾರೈರ್ಹಿ ವಿಷಂ ಪ್ರಯಚ್ಛಂತಿ ಜಿಘಾಂಸವಃ ॥
ಜಿಹ್ವಾಯ ಯಾನಿ ಪುರುಷಸ್ತ್ವಚಾ ವಾಽಪ್ಯುಪಸೇವತೇ ।
ತತ್ರ ಚೂರ್ಣಾನಿ ದತ್ತಾನಿ ಹನ್ಯುಃ ಕ್ಷಿಪ್ರಮಸಂಶಯಮ್ ॥
ಜಲೋದರಸಮಾಯುಕ್ತಾಃ ಶ್ವಿತ್ರಿಣಃ ಪಲಿತಾಸ್ತಥಾ ।
ಅಪುಮಾಂಸಃ ಕೃತಾಃ ಸ್ತ್ರೀಭಿರ್ಜಡಾಂಧಬಧಿರಾಸ್ತಥಾ ॥
ಪಾಪಾನುಗಾಸ್ತು ಪಾಪಾಸ್ತಾಃ ಪತೀನುಪಸೃಜಂತ್ಯುತ ॥ -ಮ.ಭಾ.(ವನಪರ್ವ ೨೩೩/೧೦-೧೭)

ಪತಿಯು ತಿನ್ನದ್ದನ್ನು, ಕುಡಿಯದ್ದನ್ನು, ಉಣ್ಣದ್ದನ್ನು ನಾನು ಸರ್ವಥಾ ಉಣ್ಣೆನು. ಅತ್ತೆಯನ್ನು ಆದರಿಸುವೆನು, ವಂದಿಸುವೆನು, ಸೇವಿಸುವೆನು. ಅವಳಿಗೆ ಎಂದೂ ಎದುರಾಡೆನು. ಮನೆಯ ನಿರ್ವಹಣೆಯ ಜವಾಬ್ದಾರಿಯನ್ನು ಸಂಪೂರ್ಣವಾಗಿ ನಾನೇ ವಹಿಸಿಕೊಂಡು, ಅವರಿಗೆ ತಮ್ಮ ತಮ್ಮ ಕಾರ್ಯಗಳನ್ನು ಮಾಡಿಕೊಳ್ಳಲು ಅವಕಾಶವನ್ನು ಕಲ್ಪಿಸುವೆನು. ಆದರಿಂದಾಗಿ ಅವರು ನಿಶ್ಚಿಂತೆಯಿಂದ ಭಗವದುಪಾಸನಾದಿ ಕಾರ್ಯಗಳನ್ನು ಮಾಡಿಕೊಂಡಿರಲು ಸಾಧ್ಯವಾಗುವುದು.''

''ಪೂರ್ಣವಾದ ಪತಿನಿಷ್ಠೆ ನನ್ನ ಇನ್ನೊಂದು ಸಾಧನೆ. ಎಂತಹ ವ್ಯಕ್ತಿಯೇ ಆಗಿರಲಿ ಶ್ರೀಮಂತನೋ, ಗುಣವಂತನೋ, ದೇವತೆಯೋ, ಗಂಧರ್ವನೋ, ಮೋಹಕ ತರುಣನೋ ಯಾರೇ ಆಗಿದ್ದರೂ ನನ್ನ ಮನಸ್ಸು ನನ್ನ ಪತಿಯ ಹೊರತು ಬೇರೆಯವರತ್ತ [೧]ಆಕರ್ಷಿತವಾಗುವುದಿಲ್ಲ. ಇದು ನನ್ನ ಪಾತಿವ್ರತ್ಯದ ಅತಿಮುಖ್ಯವಾದ ಗುಟ್ಟು. ಗಂಡನಿಗಿಂತ ಮುಂಚೆ ಏಳುವುದು. ರಾತ್ರಿ ಅವರು ಮಲಗಿದ ಮೇಲೆ ಮಲಗುವುದು, ಪತಿಗೆ ಪ್ರಿಯವಾದ ಕೆಲಸಗಳನ್ನೇ ಮಾಡುವುದು, ಅಪ್ರಿಯವಾದ ಕೆಲಸಗಳನ್ನು ಸರ್ವಥಾ ತೊರೆಯುವುದು, ತಮ್ಮ ಕಾರ್ಯವನ್ನು ಪೂರೈಸಿ ಮನೆಗೆ ಮರಳುವ ಅವರನ್ನು ಮಂದಹಾಸದಿಂದ ಸ್ವಾಗತಿಸುವುದು, ಅವರ ಮನಸ್ಸಿಗೆ ಸ್ವಲ್ಪವೂ ನೋವಾಗದಂತೆ ನಡೆದುಕೊಳ್ಳುವುದು ನನ್ನ [೨]ಕರ್ತವ್ಯವಾಗಿದೆ.''

---

೧ ದೇವೋ ಮನುಷ್ಯೋ ಗಂಧರ್ವೋ ಯುವಾ ಚಾಪಿ ಸ್ವಲಂಕೃತಃ।
ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ॥

-ಮ.ಭಾ.(ವನಪರ್ವ/೨೩೩/೨೩)

೨ ನ ಜಾತು ವಿಪ್ರಿಯಂ ಭರ್ತುಃ ಸ್ತ್ರಿಯಾ ಕಾರ್ಯಂ ಕಥಂಚನ॥
ವರ್ತಾಮ್ಯಹಂ ತು ಯಾಂ ವೃತ್ತಿಂ ಪಾಂಡವೇಷು ಮಹಾತ್ಮಸು।
ತಾಂ ಸರ್ವಾಂ ಶೃಣು ಮೇ ಸತ್ಯಾಂ ಸತ್ಯಭಾಮೇ ಯಶಸ್ವಿನಿ॥
ಪ್ರಣಯಂ ಪ್ರತಿಸಂಹೃತ್ಯ ನಿಧಾಯಾತ್ಮಾನಮಾತ್ಮನಿ।
ಶುಶ್ರೂಷುರ್ನಿರಹಂಮಾನಾ ಪತೀನಾಂ ಚಿತ್ತರಕ್ಷಿಣೀ॥
ದುರ್ವ್ಯಾಹೃತಾಚ್ಛಂಕಮಾನಾ ದುಃಸ್ಥಿತಾದ್ ದುರವೇಕ್ಷಿತಾತ್।
ದುರಾಸಿತಾದ್ ದುರ್ವ್ರಜಿತಾದಿಂಗಿತಾಧ್ಯಾಸಿತಾದಪಿ॥ ................
ನಾಭುಕ್ತವತಿ ನಾಸ್ನಾತೇ ನಾಸಂವಿಷ್ಟೇ ಚ ಭರ್ತರಿ।
ನ ಸಂವಿಶಾಪಿ ನಾಶ್ನಾಮಿ ಸದಾ ಕರ್ಮಕರೇಷ್ವಪಿ।
ಕ್ಷೇತ್ರಾದ್ವನಾದ್ವಾ ಗ್ರಾಮಾದ್ವಾ ಭರ್ತಾರಂ ಗೃಹಮಾಗತಮ್॥
ಅಭ್ಯುತ್ಥಾಯಾಭಿನಂದಾಮಿ ಆಸನೇನೋದಕೇನ ಚ॥
ಪ್ರಮೃಷ್ಟಭಾಂಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ।
ಸಂಯತಾ ಗುಪ್ತಧಾನ್ಯಾ ಚ ಸುಸಮ್ಮೃಷ್ಟನಿವೇಶನಾ॥
ಅತಿರಸ್ಕೃತಸಂಭಾಷಾ ದುಃಸ್ತ್ರಿಯೋ ನಾನುಸೇವತೀ।

"ಪತಿಯು ಊರಲ್ಲಿರದ ಸಮಯದಲ್ಲಿ ಅಲಂಕಾರಾದಿಗಳನ್ನು ತೊರೆಯುವುದು;

---

ಅನುಕೂಲವತೀ ನಿತ್ಯಂ ಭವಾಮ್ಯನಲಸಾ ಸದಾ ॥
ಅನರ್ಮ ಚಾಪಿ ಹಸಿತಂ ದ್ವಾರಿ ಸ್ಥಾನಮಭೀಕ್ಷ್ಣಶಃ ।
ಅವಸ್ಕರೇ ಚಿರಸ್ಥಾನಂ ನಿಷ್ಕುಟೇಷು ಚ ವರ್ಜಯೇ ॥
ಅಸ್ಯಾಲಾಪಮಸಂತೋಷಂ ಪರವ್ಯಾಪಾರಸಂಕಥಾಮ್ ।
ಅತಿಹಾಸಾತಿರೋಷೌ ಚ ಕ್ರೋಧಸ್ಥಾನಂ ಚ ವರ್ಜಯೇ ।
ನಿರತಾಽಹಂ ಸದಾ ಸತ್ಯೇ ಭರ್ತ್ಯಣಾಮುಪಸೇವನೇ ॥
ಸರ್ವಥಾ ಭರ್ತೃರಹಿತಂ ನ ಮಮೇಷ್ಟಂ ಕಥಂಚನ ।
ಯದಾ ಪ್ರವಸತೇ ಭರ್ತಾ ಕುಟುಂಬಾರ್ಥೇನ ಕೇನಚಿತ್ ॥
ಸುಮನೋವರ್ಣಕೋಪೇತಾ ಭವಾಮಿ ವ್ರತಚಾರಿಣೀ ।
ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ ॥
ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ವರ್ಜಯಾಮ್ಯಹಮ್ ।
ಯಥೋಪದೇಶಂ ನಿಯತಾ ವರ್ತಮಾನಾ ವರಾಂಗನೇ ॥
ಸ್ವಲಂಕೃತಾ ಸುಪ್ರಯತಾ ಭರ್ತುಃ ಪ್ರಿಯಹಿತೇ ರತಾ ।
ಯೇ ಚ ಧರ್ಮಾಃ ಕುಟುಂಬೇಷು ಶ್ವಶ್ರ್ವಾ ಮೇ ಕಥಿತಾಃ ಪುರಾ ॥
ಅನುತಿಷ್ಠಾಮಿ ತತ್ ಸರ್ವಂ ನಿತ್ಯಕಾಲಮತಂದ್ರಿತಾ ।
ಭಿಕ್ಷಾಬಲಿಶ್ರಾದ್ಧಮಿತಿ ಸ್ಥಾಲೀಪಾಕಾಶ್ಚ ಪರ್ವಸು ।
ಮಾನ್ಯಾನಾಂ ಮಾನಸತ್ಕಾರಾ ಯೇ ಚಾನ್ಯೇ ವಿದಿತಾ ಮಮ ॥
ತಾನ್ ಸರ್ವಾನನುವರ್ತೇಽಹಂ ದಿವಾರಾತ್ರಮತಂದ್ರಿತಾ ।
ವಿನಯಾನ್ ನಿಯಮಾಂಶ್ಚೈವ ಸದಾ ಸರ್ವಾತ್ಮನಾ ಶ್ರಿತಾ ॥
ಮೃದೂನ್ ಸತಃ ಸತ್ಯಶೀಲಾನ್ ಸತ್ಯಧರ್ಮಾನುಪಾಲಿನಃ ।
ಆಶೀವಿಷಾನಿವ ಕ್ರುದ್ಧಾನ್ ಪತೀನ್ ಪರಿಚರಾಮ್ಯಹಮ್ ॥
ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ ।
ಸ ದೇವಃ ಸಾ ಗತಿರ್ನಾನ್ಯಾ ತಸ್ಯ ಕಾ ವಿಪ್ರಿಯಂ ಚರೇತ್ ॥
ಅಹಂ ಪತೀನ್ ನಾತಿಶಯೇ ನಾತ್ಯಶ್ನೇ ನಾತಿಭೂಷಯೇ ।
ನಾಪಿ ಶ್ವಶ್ರೂಂ ಪರಿವದೇ ಸರ್ವದಾ ಪರಿಯಂತ್ರಿತಾ ।
ಅವಧಾನೇನ ಸುಭಗೇ ನಿತ್ಯೋತ್ಥಿತತಯೈವ ಚ ।
ಭರ್ತಾರೋ ವಶಗಾ ಮಹ್ಯಂ ಗುರುಶುಶ್ರೂಷಯೈವ ಚ ॥
ನಿತ್ಯಮಾರ್ಯಾಮಹಂ ಕುಂತೀಂ ವೀರಸೂಂ ಸತ್ಯವಾದಿನೀಮ್ ।
ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನಭೋಜನೈಃ ॥
ನೈತಾಮತಿಶಯೇ ಜಾತು ವಸ್ತ್ರಭೂಷಣಭೋಜನೈಃ ।
ನಾಪಿ ಪರಿವದೇ ಚಾಹಂ ತಾಂ ಪೃಥಾಂ ಪೃಥಿವೀಸಮಾಮ್ ॥...............
ಏತದಾಸೀತ್ ತದಾ ರಾಜ್ಞೋ ಯನ್ಮಹೀಂ ಪರ್ಯಪಾಲಯತ್ ।
ಯೇಷಾಂ ಸಂಖ್ಯಾವಿಧಿಂ ಚೈವ ಪ್ರದಿಶಾಮಿ ಶೃಣೋಮಿ ಚ ॥
ಅಂತಃಪುರಾಣಾಂ ಸರ್ವೇಷಾಂ ಭೃತ್ಯಾನಾಂ ಚೈವ ಸರ್ವಶಃ ।
ಆಗೋಪಾಲಾವಿಪಾಲೇಭ್ಯಃ ಸರ್ವಂ ವೇದ ಕೃತಾಕೃತಮ್ ॥

ಊರಲ್ಲಿದ್ದಾಗ ಅವರಿಗೆ ಮೆಚ್ಚುಗೆ ಎನ್ನಿಸುವ ಅಲಂಕಾರವನ್ನು ಮಾಡಿಕೊಳ್ಳುವುದು ಸಹ ಪತಿವ್ರತಾಸ್ತ್ರೀಯ ಧರ್ಮ. ಅದನ್ನು ಸಹ ನಾನು ತಪ್ಪದೇ ನಡೆಸುತ್ತಿದ್ದೇನೆ.

ಆಳುಕಾಳುಗಳ ಹಿತರಕ್ಷಣೆಯನ್ನು ನಾನು ಸ್ವಂತ ಮುತುವರ್ಜಿಯಿಂದ ನಿರ್ವಹಿಸುತ್ತೇನೆ, ಅವರೆಲ್ಲರ ಹೆಸರು, ಮನೆಯ ಪರಿಸ್ಥಿತಿ ಎಲ್ಲದರ ಪೂರ್ಣ ಮಾಹಿತಿ ನನಗೆ ಸದಾ ಇರುವುದು. ಅವರ ಕಷ್ಟಸುಖಗಳಿಗೆ ಸ್ಪಂದಿಸುವ ಕರ್ತವ್ಯದಲ್ಲಿ ಎಂದೂ ನಾನು ಹಿಂದೆ ಬಿದ್ದಿಲ್ಲ. ಚಿನ್ನದ ತಟ್ಟೆಯಲ್ಲಿ, ನಮ್ಮ ಅರಮನೆಯಲ್ಲಿ ಲಕ್ಷಗಟ್ಟಲೆ ಜನರ ಭೋಜನ ದಿನನಿತ್ಯ ನಡೆಯುವುದು. ಅದರ ಎಲ್ಲ ಜವಾಬ್ದಾರಿಯು ನನ್ನದೇ.''

ದ್ರೌಪದಿಯ ಈ ಮಾತುಗಳಲ್ಲಿ ಪಾತಿವ್ರತ್ಯಧರ್ಮದ ಸಾರಸರ್ವಸ್ವವೇ ಅಡಗಿದೆ. ನಿಷ್ಕಾರಣವಾಗಿ ಗಂಡನಿಂದ ದೂರವಾಗಿ ಬದುಕುವ ಜನರೇ ಹೆಚ್ಚುತ್ತಿರುವ ಈ ಕಾಲದಲ್ಲಿ ದ್ರೌಪದಿಯ ಮಾತುಗಳು ಸ್ತ್ರೀಸಂಕುಲಕ್ಕೆ ಪಥ್ಯವಾಗಿ ಅಧ್ಯಯನಕ್ಕೆ ಅರ್ಹವಾಗಿವೆ. ಪಾತಿವ್ರತ್ಯದ ಒಂದು ಮುಖ ಪತಿಯಲ್ಲಿ ಮಾತ್ರವೇ ಆಸಕ್ತವಾಗುವುದು; ಅದರ ಮತ್ತೊಂದು ಮುಖ, ಪತಿಗೆ ಹಿತವಾಗುವ ಸಕಲಕಾರ್ಯಗಳನ್ನು ಸಹ ಭಗವತ್ಪೂಜೆ ಎಂದು ಭಾವಿಸಿ ಸಾಧನೆಗೆ ನೆರವಾಗುವುದು. ಹೆಚ್ಚಿನವರು ಇವೆರಡರಲ್ಲೂ ಸೋಲುವುದುಂಟು. ಪತಿಗೆ ನಿಷ್ಠೆಯಿಂದಿರುವಲ್ಲಿ ಯಶಸ್ಸು ಸಾಧಿಸುವ ಅನೇಕರು, ಪತಿಗೆ ಹಿತವೆನ್ನಿಸುವ ಇತರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಲ್ಲಿ ಮಾತ್ರ ವಿಫಲರಾಗುವರು. ಆದರೆ, ಎರಡರಲ್ಲೂ ಸಹ ಯಶಸ್ಸನ್ನು ಗಳಿಸುವುದು ಪಾತಿವ್ರತ್ಯದ ನಿಜವಾದ ಅರ್ಥ. ಸತ್ಯಭಾಮಾದೇವಿಯ ಪ್ರಸಂಗ ದ್ರೌಪದಿಯ ಹಿರಿಮೆಯನ್ನು ಲೋಕಕ್ಕೆ ಸಾರುವುದು.

---

ಸರ್ವಂ ರಾಜ್ಞಃ ಸಮುದಯಮಾಯಂ ಚ ವ್ಯಯಮೇವ ಚ ।
ಏಕಾಹಂ ವೇದ್ಮಿ ಕಲ್ಯಾಣಿ ಪಾಂಡವಾನಾಂ ಯಶಸ್ವಿನಿ ॥
ಮಯಿ ಸರ್ವಂ ಸಮಾಸಜ್ಯ ಕುಟುಂಬಂ ಭರತರ್ಷಭಾಃ ।
ಉಪಾಸನರತಾಃ ಸರ್ವೇ ಘಟಯಂತಿ ವರಾನನೇ ॥
ತಮಹಂ ಭಾರಮಾಸಕ್ತಮನಾಧೃಷ್ಯಂ ದುರಾತ್ಮಭಿಃ ।
ಸುಖಂ ಸರ್ವಂ ಪರಿತ್ಯಜ್ಯ ರಾತ್ರ್ಯಹಾನಿ ಘಟಾಮಿ ವೈ ॥
ಅಧೃಷ್ಯಂ ವರುಣಸ್ಯೇವ ನಿಧಿಪೂರ್ಣಮಿವೋದಧಿಮ್ ।
ಏಕಾऽಹಂ ವೇದ್ಮಿ ಕೋಶಂ ವೈ ಪತೀನಾಂ ಧರ್ಮಚಾರಿಣಾಮ್ ॥
ಅನಿಶಾಯಾಂ ನಿಶಾಯಾಂ ಚ ಸಹಾಯಾ ಕ್ಷುತ್ಪಿಪಾಸಯೋಃ ।
ಆರಾಧಯಂತ್ಯಾಃ ಕೌರವ್ಯಾಂಸ್ತುಲ್ಯಾ ರಾತ್ರಿರಹಶ್ಚ ಮೇ ॥
ಪ್ರಥಮಂ ಪ್ರತಿಬುಧ್ಯಾಮಿ ಚರಮಂ ಸಂವಿಶಾಮಿ ಚ ।
ನಿತ್ಯಕಾಲಮಹಂ ಸತ್ಯೇ ಏತತ್ ಸಂವನನಂ ಮಮ ॥
ಏತಜ್ಜಾನಾಮ್ಯಹಂ ಕರ್ತುಂ ಭರ್ತುಸಂವನನಂ ಮಹತ್ ।
ಅಸತ್ಸ್ತ್ರೀಣಾಂ ಸಮಾಚಾರಂ ನಾಹಂ ಕುರ್ಯಾಂ ನ ಕಾಮಯೇ ॥
– ಮ.ಭಾ.(ವನಪರ್ವ/೨೩೩/೧೭–೨೧,೨೪–೪೧,೫೧–೫೯)

ಸತ್ಯಭಾಮೆಯು ಮಹಾಲಕ್ಷ್ಮಿಯಾದರೆ, ದ್ರೌಪದೀ ಭಾವಿಸರಸ್ವತಿ. ಸಾಮಾನ್ಯವಾಗಿ ಲಕ್ಷ್ಮೀ-ಸರಸ್ವತಿಯರಿಗೆ ನಡೆಯುವುದು ಸದಾ ವಿವಾದ ಎಂಬುದು ಜನರ ಕಲ್ಪನೆ. ಸಂಪತ್ತು ಇದ್ದವರಿಗೆ ವಿದ್ಯೆ ಇಲ್ಲದಿರುವುದು, ವಿದ್ಯಾವಂತರಿಗೆ ಸಂಪತ್ತಿಲ್ಲದಿರುವುದು ಲೋಕದಲ್ಲಿ ಕಂಡಿದೆ. ಆದರಿಂದಾಗಿ ವಿದ್ಯೆ, ಸಂಪತ್ತು ಎರಡೂ ಸಹ ಒಂದೆಡೆ ಸೇರಲಾರವು ಎಂಬದು ಸಾಮಾನ್ಯ ತಿಳುವಳಿಕೆ. ಆದರೆ, ಮಹಾಭಾರತದ ವನಪರ್ವದ ಈ ದ್ರೌಪದಿ-ಸತ್ಯಭಾಮಾಸಂವಾದ ಪರ್ವವು ನ್ಯಾಯಾರ್ಜಿತವಾದ ಸಂಪತ್ತು, ಗುರುಗಳಿಂದ ಲಭಿಸುವ ವಿದ್ಯೆ ಎರಡೂ ಸಹ ಎಂದೂ ವಿವಾದಕ್ಕೆ ಎಡೆ ನೀಡದೇ ಸಂವಾದದ ಹಬ್ಬವನ್ನೇ ಉಂಟುಮಾಡುವವು ಎಂಬ ತತ್ತ್ವವನ್ನು ತಿಳಿಸಿದೆ.

## ದುರ್ವಾಸಾತಿಥ್ಯ

ದುರ್ವಾಸರು, ಶಿವನ ಅವತಾರ. ತುಂಬಾ ಶಿಸ್ತಿಗೆ ಹೆಸರಾದವರು. ಆದ್ದರಿಂದಲೇ ಅವರದು ಸ್ವಲ್ಪ ನಿಷ್ಠುರವಾದ ಪ್ರವೃತ್ತಿ. ಅವರಿಗೆ ಪ್ರಿಯವಾಗುವಂತೆ ನಡೆದುಕೊಂಡು, ಅವರನ್ನು ಮೆಚ್ಚಿಸುವುದು ತುಂಬಾ ದುಸ್ತರವಾದ ಕಾರ್ಯ. ರಾಮಾಯಣದಲ್ಲಿ ಶ್ರೀರಾಮ, ಶ್ರೀಮನ್ಮಹಾಭಾರತದಲ್ಲಿ ಶ್ರೀಕೃಷ್ಣ ಈ ಇಬ್ಬರ ಹೊರತು ದುರ್ವಾಸರ ಬೇಕುಬೇಡುಗಳನ್ನು ಪೂರೈಸಿದವರು ಬೇರೆ ಯಾರೂ ಇಲ್ಲ. ಕುಂತಿಯು ದೂರ್ವಾಸರನ್ನು ಮೆಚ್ಚಿಸಿದ್ದು ಅವಳ ಸಾಕುತಂದೆಯಾದ ಕುಂತಿಭೋಜನು ಅವನ ಬಳಿ ನೆಲೆಸಲು ಬಯಸಿದ ದುರ್ವಾಸರಿಗೆ ಚಿಕ್ಕವಳಾದ ಕುಂತಿಯು ಮಾಡಬಹುದಾದ ಅಪಚಾರವನ್ನು ಕ್ಷಮಿಸಿ ಅನುಗ್ರಹಿಸಬೇಕು ಎಂದು ಪ್ರಾರ್ಥನೆ ಮಾಡಿ ವರ ಪಡೆದಿದ್ದರ ಫಲ.

ಅಂತಹ ದುರ್ವಾಸರು ಒಮ್ಮೆ ದುರ್ಯೋಧನನ ಬಳಿ ತೆರಳಿದ್ದರು. ಅವರನ್ನು ತನ್ನ ಕುತಂತ್ರದಿಂದ ವಶಪಡಿಸಿಕೊಂಡ ದುರ್ಯೋಧನ ಅವರು ಆ ಸಂಚಿಗೆ ಬಲಿಯಾಗಿ ವರ ಕೇಳಿಕೋ ಎಂದು ನುಡಿದಾಗ, ಅವನು ಕೇಳಿದ ವರ ಹೀಗಿತ್ತು; 'ಅವರು ತಮ್ಮ ಪರಿವಾರ ಸಮೇತ ವನವಾಸದಲ್ಲಿರುವ ಪಾಂಡವರ ಬಳಿಗೆ ತೆರಳಬೇಕು. ಅದು ಪಾಂಡವರ ಹಾಗೂ ದ್ರೌಪದಿಯ ಭೋಜನ ಪೂರೈಸಿದ ಬಳಿಕ ಮಾತ್ರವೇ. ತಮ್ಮ ಶಿಷ್ಯವೃಂದಕ್ಕೂ ತಮಗೂ ಆತಿಥ್ಯ ನೀಡಬೇಕೆಂದು ಯುಧಿಷ್ಠಿರನನ್ನು ಕೇಳಿಕೊಳ್ಳಬೇಕು'. ಆ ವೇಳೆಗೆ ಅಕ್ಷಯಪಾತ್ರೆ ಹೇಗೂ ಬರಿದಾಗಿರುತ್ತದೆ. ಅದನ್ನು ಅವರು ಪೂರೈಸದೆ ವ್ಯಥೆ ಪಡಬೇಕು, ಅವರ ಶಾಪಕ್ಕೆ ಗುರಿಯಾಗಬೇಕು ಎಂಬುದು ದುರ್ಯೋಧನನ ಆಶಯವಾಗಿತ್ತು.

ದುರ್ವಾಸರು ಅಂತೆಯೇ ಮಾಡಿದರು. ಯುಧಿಷ್ಠಿರ ಅವರನ್ನು ಭೋಜನಕ್ಕೆ ಎಬ್ಬಿಸಿದ. ಅವರು ಬಳಿಯಲ್ಲಿದ್ದ ಗಂಗೆಯಲ್ಲಿ ಮಿಂದು ಬರುವುದಾಗಿ ಪರಿವಾರ ಸಮೇತ ತೆರಳಿದರು. ಆ ವೇಳೆಗೆ ದ್ರೌಪದಿಯ ಭೋಜನವು ಸಹ ಪೂರೈಸಿ ಅಕ್ಷಯಪಾತ್ರೆ ಬರಿದಾಗಿತ್ತು. ವಿಷಯ

ತಿಳಿದ ಯುಧಿಷ್ಠಿರ ಚಿಂತೆಗೀಡಾದ. ಕೂಡಲೆ ದ್ರೌಪದಿಯು ಶ್ರೀಕೃಷ್ಣನನ್ನು ಸ್ಮರಿಸಿದಳು. ಭಕ್ತವತ್ಸಲನಾದ ಅವನು ಕೂಡಲೇ ಅಲ್ಲಿಗೆ ಆಗಮಿಸಿದ. ಹಾಗೆ ಬಂದವನೇ, ದ್ರೌಪದಿಯನ್ನು ''ನನಗೆ ತುಂಬಾ ಹಸಿವು, ಕೂಡಲೇ ಆಹಾರ ಬೇಕು'' ಎಂದು ಕೇಳಿದ. ದ್ರೌಪದಿ ವಿಷಯ ತಿಳಿಸಿದಳು, ಶ್ರೀಕೃಷ್ಣ ಬಿಡಲಿಲ್ಲ. ''ಆ ಪಾತ್ರೆಯನ್ನೇ ತೆಗೆದುಕೊಂಡು ಬಾ ನೋಡೋಣ'' ಎಂದ. ದ್ರೌಪದಿಯು ಪಾತ್ರೆಯನ್ನು ತಂದಿರಿಸಿದಳು. ಶ್ರೀಕೃಷ್ಣ ಆ ಪಾತ್ರೆಯಲ್ಲಿ ಹುಡುಕಿ ಒಂದು ಶಾಕದ ತುಂಡನ್ನು ಕಂಡ[೧]. ಕೂಡಲೇ ಅದನ್ನು ತಾನು ಬಾಯಲ್ಲಿ ಹಾಕಿಕೊಂಡು ಹೊಟ್ಟೆ ತುಂಬಿತೆಂದು ತೇಗಿದ. ತಾವು ಅವನನ್ನು ಕರೆದದ್ದು ತಮ್ಮ ಸಮಸ್ಯೆ ಪರಿಹರಿಸಲೆಂದು. ಶ್ರೀಕೃಷ್ಣ ಹೊಸದಾದ ಸಮಸ್ಯೆಯನ್ನು ಹುಟ್ಟುಹಾಕುವವನಂತೆ ನಡೆದುಕೊಂಡ. ಅದರ ಗುಟ್ಟು ರಟ್ಟಾದದ್ದು ಆ ಬಳಿಕವೇ.

ಶ್ರೀಕೃಷ್ಣನು ಭೀಮಸೇನನನ್ನು ಕರೆದು ಸ್ನಾನಕ್ಕೆ ತೆರಳಿದ ದೂರ್ವಾಸರನ್ನು ಭೋಜನ ಸಿದ್ಧವಾಗಿದೆ ಎಂದು ಆಹ್ವಾನಿಸು ಎಂದು ತಿಳಿಸಿದ. ಭೀಮಸೇನ ಗದಾಪಾಣಿಯಾಗಿ ನಡೆದೇ ಬಿಟ್ಟ. ಅಲ್ಲಿ ನಡೆದದ್ದು ಮಾತ್ರ ಬೇರೆಯೇ ಆಗಿತ್ತು. ಶ್ರೀಕೃಷ್ಣ ಹಾಗೆ ತಿಂದು ತೇಗಿದಾಗಲೇ ದೂರ್ವಾಸರ ಹಾಗೂ ಅವರ ಶಿಷ್ಯವೃಂದದ ಹೊಟ್ಟೆ ಪೂರ್ಣವಾಗಿ ತುಂಬಿ ಹೋಗಿತ್ತು. ಅವರು ಏನನ್ನೂ ತಿನ್ನುವ ಸ್ಥಿತಿಯಲ್ಲಿ ಇರಲಿಲ್ಲ. ಭೀಮಸೇನ ಹಾಗೆ ಕರೆಯಲು ಬರುತ್ತಿರುವುದನ್ನು ಕಂಡು ಭೀತರಾದ ಅವರೆಲ್ಲ ಕೂಡಲೇ ಅಲ್ಲಿಂದ ಕಾಲ್ಕಿತ್ತಿದರು.

ದ್ರೌಪದಿಯ ಅನನ್ಯ ಕೃಷ್ಣಭಕ್ತಿಯನ್ನು ಅಪೂರ್ವರೀತಿಯಲ್ಲಿ ನಿರೂಪಿಸುವ ವಿಶಿಷ್ಟ ಪ್ರಸಂಗ ಇದಾಗಿದೆ. ಮೇಲ್ನೋಟಕ್ಕೆ ಇದು ದೂರ್ವಾಸರ ಪರಾಭವ. ವಾಸ್ತವವಾಗಿ ಇದು ಶಿವಾದಿ ದೇವತೆಗಳಿಗಿಂತ ಶ್ರೀಹರಿ ಮಿಗಿಲು ಎಂಬ ತತ್ತ್ವಕ್ಕೆ ನಿದರ್ಶನ. ಇನ್ನೂ ಮುಖ್ಯವಾಗಿ ದುರ್ಯೋಧನನಿಗೆ ಆದ ಮುಖಭಂಗ ಇದಾಗಿದೆ. ಕಲಿಯ ಅವತಾರನಾದ ಅವನು

---

೧ ಅಕ್ಷಯಪಾತ್ರೆಯಂತಹ ದೈವಿಕ ಪಾತ್ರೆಯಲ್ಲಿ ಹಾಗೆ ಒಂದು ಶಾಕದ ತುಂಡು ಉಳಿದುಕೊಂಡಿದ್ದು ಮೇಲ್ನೋಟಕ್ಕೆ ನಂಬಲಸಾಧ್ಯವೆನ್ನಿಸುವಂತಹ ಸಂಗತಿ. ದ್ರೌಪದಿಯ ಮೇಲ್ವಿಚಾರಣೆಯಲ್ಲಿ ನಡೆಯುತ್ತಿದ್ದ ಶುದ್ಧೀಕರಣದಲ್ಲಿ ಅಂತಹ ಲೋಪವಿರಲು ಸಾಧ್ಯವೇ ಎಂಬ ಪ್ರಶ್ನೆಗೂ ಅವಕಾಶವಿದೆ. ಆದರೆ, ವಾಸ್ತವವಾಗಿ ಇದರಲ್ಲಿ ಅಸಂಭಾವಿತವಾದದ್ದೇನೂ ಇಲ್ಲ. ಇಲ್ಲಿ ಶಾಕ ಉಳಿದುಕೊಂಡಿತ್ತು ಎಂಬುದಕ್ಕೆ ಅದರ ಸೂಕ್ಷ್ಮಾತಿಸೂಕ್ಷ್ಮವಾದ ಅಂಶ ಇದ್ದಿತು ಎಂದಷ್ಟೇ ಭಾವ. ಅದು ವಾಸ್ತವವೂ ಹೌದು. ಪ್ರತಿನಿತ್ಯ ಮೊಸರನ್ನು ಹಾಕಿಡುವ ಪಾತ್ರೆಯಲ್ಲಿ ಹಾಲನ್ನು ಹಾಕಿಟ್ಟಾಗ, ಅದು ಬಲು ಬೇಗನೆ ವಿಕಾರ ಹೊಂದುವುದು. ಅದನ್ನು ಎಷ್ಟೇ ತೊಳೆದಿದ್ದರೂ ಸಹ ಹಾಗಾಗುವುದನ್ನು ತಪ್ಪಿಸಲು ಸಾಧ್ಯವಿಲ್ಲ. ಇದರಲ್ಲಿ ಶುದ್ಧೀಕರಣದ ವ್ಯವಸ್ಥೆಯ ಲೋಪ ಕಾರಣವಾಗಿರದೇ, ಅದರಲ್ಲಿನ ಸೂಕ್ಷ್ಮಾಂಶವೇ ಕಾರಣ. ಹುಳಿ ಇರುವ ಪಾತ್ರೆಯಲ್ಲಿ ಉಳಿದುಕೊಳ್ಳುವ ಅತ್ಯಂತ ಸೂಕ್ಷ್ಮ ಭಾಗವೂ ಸಹ ಹಾಲಿನ ಸ್ವರೂಪವನ್ನು ಕೆಡಿಸುವಂತೆ, ಅಕ್ಷಯಪಾತ್ರೆಯ ಪ್ರಸಂಗದಲ್ಲೂ ಸಹ ನಡೆದದ್ದು ಹಾಗೆಯೇ. ಅದು ಇತರರಿಗೂ ಸಹ ಗುರುತಿಸಲು ಅಸಾಧ್ಯವಾದಷ್ಟು ಸೂಕ್ಷ್ಮವಾಗಿತ್ತು. ಅಂತಹುದನ್ನು ಗುರುತಿಸಿದ್ದುದರಲ್ಲಿ ಶ್ರೀಕೃಷ್ಣನ ಹಿರಿಮೆ ಇದೆ. ಅದರಂತೆ, ಅದನ್ನು ಅಪರಿಮಿತವನ್ನಾಗಿಸುವ ಸಾಮರ್ಥ್ಯವೂ ಸಹ ಅವನದ್ದೇ ಹಿರಿಮೆ.

ಮಾಡಿದ ಸಂಚನ್ನು ಶ್ರೀಕೃಷ್ಣ ಕೇವಲ ಒಂದು ಶಾಕದ ತುಂಡಿನ ಮೂಲಕ ಭಗ್ನಗೊಳಿಸಿದನು. ದ್ರೌಪದಿಯ ಮೇಲೆ ಶ್ರೀಕೃಷ್ಣ ತೋರಿದ ಈ ಅನುಗ್ರಹ ದ್ರೌಪದಿಯ ನಿರ್ಮಲಭಕ್ತಿಗೆ ಅತ್ಯುತ್ತಮ ನಿದರ್ಶನ. ದ್ರೌಪದಿಯ ಪಾವಿತ್ರ್ಯ ಶಂಕಾತೀತ ಎಂಬುದನ್ನು ಇದು ರುಜುವಾತು ಪಡಿಸುವುದು. ವಿದ್ಯೆಯ ಸಂಕೇತವಾದ ದ್ರೌಪದಿಯ ಮೇಲೆ ಶ್ರೀಕೃಷ್ಣ ತೋರಿದ ಈ ಅನುಗ್ರಹ[೧], ವಿದ್ಯೆಯ ಅನನ್ಯವಾದ ಹಿರಿಮೆಗೂ ಸಂಕೇತ.

ದ್ರೌಪದಿಯ ಹಿರಿಮೆಯ ಸಾರಸರ್ವಸ್ವ ಅಡಗಿರುವುದೇ ಇಂತಹ ನಿರ್ಮಲವಾದ ಭಗವದ್ಭಕ್ತಿಯಲ್ಲಿ. ಇತರ ಸಕಲಗುಣಗಳೂ ಸಹ ಭಕ್ತಿಗೆ ಪೋಷಕವಾಗಿರಬೇಕೇ ಹೊರತು, ಅದರ ಹ್ರಾಸಕ್ಕೆ ಕಾರಣವಾಗಕೂಡದು. ಇತರ ಗುಣಗಳು ಗೌಣವಾಗಿದ್ದು ಭಕ್ತಿಯು ಪ್ರಧಾನವಾಗಿದ್ದರೆ, ಅದೇ ನಿಜವಾದ ಸಾಧನೆ. ದ್ರೌಪದಿಯದು ಹಾಗಲ್ಲ. ವಾಯುದೇವರಲ್ಲಿ ಹೇಗೆ ಸಕಲಗುಣಗಳ ಪೂರ್ಣತೆಯು ಕಂಡುಬರುವುದೋ, ಅದರಂತೆ ಭಾರತೀ ಅವತಾರಳಾದ ದ್ರೌಪದಿಯು ಸಹ ಸಕಲಗುಣಗಳ ಖಣಿ. ಅದರಲ್ಲಿ ಕಿರೀಟಪ್ರಾಯವಾದ ಗುಣ ಭಗವದ್ಭಕ್ತಿ. ಅಂತಹ ನಿರ್ಮಲಭಕ್ತಿಯಿಂದಾಗಿಯೇ ಶ್ರೀಕೃಷ್ಣನಿಗೆ ಪರಮಪ್ರಿಯಳೆನ್ನಿಸಿದ ಮಹಾಮಹಿಳೆ. ಈ ಕಾರಣದಿಂದಾಗಿಯೇ ಕುಂತಿ ಮೊದಲಾದ ಮಹಿಳೆಯರಿಗಿಂತಲೂ ಸಹ ಹೆಚ್ಚಿನ ಹಿರಿಮೆಯನ್ನು ದ್ರೌಪದಿಯು ಹೊಂದಿರುವಳು[೨].

---

೧ ತ್ವಯಾ ನಾಥೇನ ಗೋವಿಂದ ದುಸ್ತರಾಮಾಪದಂ ವಿಭೋ।
ತೀರ್ಣಾಃ ಪ್ಲವಮಿವಾಸಾದ್ಯ ಮಜ್ಜಮಾನಾ ಮಹಾರ್ಣವೇ॥ -ಮ.ಭಾ.(ವ.ಪ./೨೬೩/೪೩)

೨ ಪಾಂಡವರು ವನವಾಸದಲ್ಲಿದ್ದಾಗ ಒಮ್ಮೆ ಗಜಗಾತ್ರದಂತಹ ಒಂದು ಜಂಬೂಫಲವನ್ನು ಭೀಮಸೇನ ಕಣ್ವಮುನಿಗಳ ಆಶ್ರಮದ ಬಳಿಯಲ್ಲಿ ಕಂಡು ಅದನ್ನು ಕಿತ್ತು ತರುತ್ತಾನೆ. ಅದರ ಬಗ್ಗೆ ಜಿಜ್ಞಾಸೆಗೊಳಗಾದ ಯುಧಿಷ್ಠಿರ ಶ್ರೀಕೃಷ್ಣನನ್ನು ಸ್ಮರಿಸಿದಾಗ, ಅವನು ಬಂದು ಆ ಜಂಬೂಫಲದ ಹಿನ್ನೆಲೆಯನ್ನು ತಿಳಿಸುತ್ತಾನೆ. ಅದರಂತೆ ಅದು ಕಣ್ವಮುನಿಗಳ ತಪಸ್ಸಿನ ಸಿದ್ಧಿಯಾಗಿ ವರ್ಷಕ್ಕೊಮ್ಮೆ ಮಾತ್ರ ಬಿಡುವ ಒಂದೇ ಒಂದು ಹಣ್ಣು. ವರ್ಷಕ್ಕೊಮ್ಮೆ ಕಣ್ತೆರೆಯುವ ಕಣ್ವರು ಅದನ್ನು ಆಹಾರವನ್ನಾಗಿ ಸ್ವೀಕರಿಸಿ ಪುನಃ ತಪಸ್ಸನ್ನು ಮುಂದುವರೆಸುವರು. ಅಂದು ಕಣ್ವರು ಕಣ್ಣು ತೆರೆಯುವ ದಿವಸ. ಆ ಹಣ್ಣು ಕಾಣದೇ ಹೋದಾಗ ಅವರ ಶಾಪಕ್ಕೆ ಗುರಿಯಾಗಿ ಅದನ್ನು ಕಿತ್ತಿದವರು ನಾಶ ಹೊಂದುವರು. ಆದ್ದರಿಂದ ಅವರು ಕಣ್ಣು ತೆರೆಯುವ ಮುನ್ನ ಆ ಹಣ್ಣನ್ನು ಮರಕ್ಕೆ ಮರಳಿ ಅಂಟಿಸುವ ಕಾರ್ಯ ನಡೆಯಬೇಕು. ಶ್ರೀಕೃಷ್ಣನ ಆದೇಶದಂತೆ ಪಾಂಡವರು ಹಾಗೂ ದ್ರೌಪದೀ ಅದರ ಬಳಿಗೆ ತೆರಳುತ್ತಾರೆ. ಶ್ರೀಕೃಷ್ಣನು "ಪಾಂಡವರು ಹಾಗೂ ದ್ರೌಪದಿ ತಮ್ಮ ಮನಸ್ಸಿನ ಭಾವನೆಗಳನ್ನು ಪ್ರಾಮಾಣಿಕವಾಗಿ ಹೊರಹಾಕಿದ್ದಲ್ಲಿ ಆ ಹಣ್ಣು ಪುನಃ ಸ್ವಸ್ಥಾನಕ್ಕೆ ಅಂಟಿಕೊಳ್ಳುವುದು" ಎಂದು ತಿಳಿಸಿದನು. ಅದರಂತೆ, ಯುಧಿಷ್ಠಿರಾದಿ ಪಾಂಡವರು ತಮ್ಮ ಮನೋಗತವನ್ನು ಹೇಳಿಕೊಳ್ಳುವರು. ಒಬ್ಬೊಬ್ಬರ ಮನೋಭಾವ ಪ್ರಕಟವಾಗುತ್ತಿದ್ದಂತೆ ಆ ಹಣ್ಣು ಆರನೇ ಒಂದು ಭಾಗದಷ್ಟು ಮೇಲಕ್ಕೆ ಸಾಗುತ್ತಿತ್ತು. ದ್ರೌಪದಿಯ ಸರದಿ ಬಂದಾಗ ದ್ರೌಪದಿಯು ಹೇಳಿದ ಮಾತಿಗೆ ಅದು ಮೇಲೆರುವುದಿಲ್ಲ. ಶ್ರೀಕೃಷ್ಣ ಆಗ ದ್ರೌಪದಿಗೆ ಸತ್ಯಸಂಗತಿಯನ್ನೇ ತಿಳಿಸುವಂತೆ ಆಗ್ರಹಪಡಿಸುತ್ತಾನೆ. ದ್ರೌಪದಿಯು ಆಗ ತನಗೆ ಐವರು ಪತಿಗಳಿದ್ದರೂ ಆರನೆ ಪತಿ ಬೇಕು ಎನ್ನಿಸುವುದು, ಆ ಆರನೆಯವನೇ ಕರ್ಣ ಎಂದಳಂತೆ. ಕೂಡಲೇ ಅದು ತನ್ನ ಸ್ವಸ್ಥಾನಕ್ಕೆ ಸೇರಿಕೊಳ್ಳುವುದು. ಮುಂದೆ

# ಘೋಷಯಾತ್ರಾ ಪ್ರಸಂಗ

ಒಮ್ಮೆ ದುರ್ಯೋಧನ ತನ್ನ ವೈಭವದ ಪ್ರದರ್ಶನದ ಮೂಲಕ ಪಾಂಡವರಿಗೆ ಅದರಲ್ಲೂ ದ್ರೌಪದಿಗೆ ಹೊಟ್ಟೆ ಉರಿಸುವ ಕಾರ್ಯ ಮಾಡಲು ಉದ್ಯುಕ್ತನಾದ. ಅದಕ್ಕಾಗಿ ಅವನು ಆರಿಸಿಕೊಂಡಿದ್ದು ಘೋಷಯಾತ್ರೆ ನೆಪವನ್ನು. ಘೋಷಯಾತ್ರೆ ಎಂದರೆ, ಗೋಶಾಲೆಗಳನ್ನು ಸಂದರ್ಶಿಸಿ ಅವುಗಳ ಯೋಗಕ್ಷೇಮದ ಬಗ್ಗೆ, ವ್ಯವಸ್ಥೆಯ ಬಗ್ಗೆ ಪರಿಶೀಲನೆ ನಡೆಸುವ ಕಾರ್ಯ. ಮಹಾರಾಜನಾದವನು ಜನರಂತೆ ದನಗಳನ್ನು ಸಹ ಉತ್ತಮ ರೀತಿಯಲ್ಲಿ ಸಂರಕ್ಷಿಸುವ ಹೊಣೆಯನ್ನು ಹೊರಬೇಕು ಎಂಬುದನ್ನು ತಿಳಿಸುವ ವಿಶಿಷ್ಟವಾದ ಕಾರ್ಯ ಅದು. ಆದರೆ, ದುರ್ಯೋಧನನಿಗೆ ಬೇಕಿದ್ದುದು ಗೋವುಗಳಲ್ಲ, ಗೋಸಂರಕ್ಷಣೆಯೂ ಅಲ್ಲ. ಅವನಿಗೆ ಬೇಕಿದ್ದುದು ಕೇವಲ ಪಾಂಡವರ ಮುಂದೆ ತನ್ನ ವೈಭವವನ್ನು ಮೆರೆಸುವುದಷ್ಟೇ. ಅದಕ್ಕೆ ಸೂಕ್ತ ಶಿಕ್ಷೆಯನ್ನಾಗಿ ಇಂದ್ರನು ಚಿತ್ರರಥ ಎಂಬ ಗಂಧರ್ವನ ಮೂಲಕ ಕೌರವರನ್ನು ಪರಾಭವಗೊಳಿಸಿ ಸೆರೆ ಹಿಡಿಸಿದ. ಅದಕ್ಕಾಗಿ ಶ್ರೀಹರಿ ಆ ಗಂಧರ್ವಸೇನೆಗೆ ಅಪಾರವಾದ, ಅಪೂರ್ವ ಶಕ್ತಿಯನ್ನು ಕರುಣಿಸಿದ. ಅದರಿಂದಾಗಿ ದುರ್ಯೋಧನಾದಿಗಳು ಸೆರೆ ಸಿಕ್ಕಿ ಬವಣೆಪಡುವಂತಾಗುತ್ತದೆ. ಕೊನೆಗೆ ಅವನ ಮಂತ್ರಿಗಳ ಕೋರಿಕೆಯಂತೆ ಯುಧಿಷ್ಠಿರ ಆದೇಶ ನೀಡಿದಾಗ, ಭೀಮಾರ್ಜುನರು ಗಂಧರ್ವರನ್ನು ಪರಾಭವಗೊಳಿಸಿ ದುರ್ಯೋಧನಾದಿಗಳನ್ನು ಬಿಡುಗಡೆ ಮಾಡಿಸುತ್ತಾರೆ. ಪಾಂಡವರಿಗೆ ಅಪಮಾನ ಮಾಡಲು ಹೊರಟ ದುರ್ಯೋಧನ ತಾನೇ ಇನ್ನಿಲ್ಲದಂತೆ ಅಪಮಾನಕ್ಕೊಳಗಾಗುತ್ತಾನೆ. ಪ್ರಾಯೋಪವೇಶದ ಮೂಲಕ ಪ್ರಾಣತೊರೆಯುವ ಹಂತದವರೆಗೆ ಹತಾಶೆ ಮುಂದುವರೆಯುತ್ತದೆ. ಆದರೆ, ದೈತ್ಯ ಶಕ್ತಿಗಳ ಪ್ರಚೋದನೆಯಿಂದ ಮನಸ್ಸು ಬದಲಾಯಿಸಿ ಹಸ್ತಿನಾಪುರಕ್ಕೆ ಮರಳುತ್ತಾನೆ.

---

ಪ್ರಸ್ತುತ ಕಥೆಯಂತೆ ದ್ರೌಪದಿಗೆ ಕರ್ಣನ ಮೇಲೆ ಮನಸ್ಸಿತ್ತು ಎಂದು ತಿಳಿಯುವಂತಿದೆ. ಆ ಮೂಲಕ ದ್ರೌಪದಿಯ ಪಾವಿತ್ರ್ಯಕ್ಕೆ ಧಕ್ಕೆ ತರುವ ಕಥೆ ಇದಾಗಿದೆ. ವಾಸ್ತವವಾಗಿ ಇದೊಂದು ಕುಮಾರವ್ಯಾಸ ಕಲ್ಪನಾವಿಲಾಸ ಮಾತ್ರ. ಮಹಾಭಾರತದ ಯಾವ ಪಾಠಗಳಲ್ಲೂ ಇದು ಕಂಡುಬರುವುದಿಲ್ಲ. ಯಾರೋ ಕಲ್ಪಿಸಿದ ಕಥೆಯನ್ನು ಕುಮಾರವ್ಯಾಸ ಸತ್ಯವೆಂದು ಭಾವಿಸಿ ತನ್ನ ಕೃತಿಯಲ್ಲಿ ಸೇರಿಸಿಬಿಟ್ಟಿದ್ದಾನೆ. ಇಂತಹ ಕಲ್ಪನೆಗಳಿಂದ ಉದಾತ್ತ ಪಾತ್ರಗಳ ಬಗ್ಗೆ ಸಲ್ಲದ ಗೊಂದಲವನ್ನು ಜಿಜ್ಞಾಸುಗಳಲ್ಲಿ ಮೂಡುವಂತೆ ಮಾಡುವುದು ಇದು ಎಂದಿಗೂ ಶ್ಲಾಘ್ಯವಲ್ಲ. ಅನೇಕರು ಇಂತಹ ಕಥೆಗಳನ್ನೇ ವಾಸ್ತವ ಸಂಗತಿಗಳೆಂದು ಭಾವಿಸಿ ಮಹಾಭಾರತ, ರಾಮಾಯಣ ಹಾಗೂ ಪುರಾಣಗಳ ಪಾತ್ರಗಳ ಬಗ್ಗೆ ಕೆಟ್ಟ ಭಾವ ಬರುವಂತೆ ವಿಮರ್ಶಿಸುವುದುಂಟು. ಮೂಲಗ್ರಂಥಗಳ ಪರಿಚಯವಿಲ್ಲದ ಜನ ಇಂತಹ ವಿಮರ್ಶೆಗಳನ್ನೇ ಪ್ರಾಮಾಣಿಕ ಎಂದು ನಂಬಿ ಮೂಲಗ್ರಂಥಗಳ ಬಗ್ಗೆ ಅವಜ್ಞಾ ಭಾವವನ್ನು ತಳೆಯುವುದುಂಟು. ಇಂದಿನ ಜನತೆಯಲ್ಲಿ ವಿಶೇಷವಾಗಿ ಯುವಜನತೆಯಲ್ಲಿ ಪೌರಾಣಿಕ ಕಥೆಗಳ ಬಗ್ಗೆ ಅಪನಂಬಿಕೆ ಉಂಟಾಗಲು ಅಪಹಾಸ್ಯದ ಪ್ರವೃತ್ತಿ ಬೆಳೆಯಲು ಇಂತಹ ಕೆಟ್ಟ ಕಲ್ಪನೆಗಳೇ ಕಾರಣವಾಗಿವೆ. ಬಲ್ಲವರು ಸೂಕ್ತ ರೀತಿಯಲ್ಲಿ ಇಂತಹವುಗಳಿಗೆ ಪ್ರತಿಕ್ರಿಯಿಸದಿದ್ದಲ್ಲಿ ಜನತೆ ಅಮೂಲ್ಯವಾದ ತಾತ್ವಿಕ ಚಿಂತನೆಯಿಂದ ದೂರಾಗುವುದು ನಿಶ್ಚಿತ.

ದ್ರೌಪದಿಯನ್ನು ಕೆಣಕಲು ಹೊರಟಿದ್ದಕ್ಕೆ ಅವನಿಗೆ ತಕ್ಕ ಶಾಸ್ತಿಯಾಯಿತು. ವಿದ್ಯೆಯನ್ನು ಕೆಣಕುವವರಿಗೆ ಘೋರ ಅಪಮಾನ ಕಾದಿದೆ ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

## ವಿರಾಟನಗರಿಯಲ್ಲಿ ದ್ರೌಪದಿ

ವನವಾಸ ಪೂರೈಸಿ ಪಾಂಡವರು ಅಜ್ಞಾತವಾಸವನ್ನು ಕೈಗೊಳ್ಳುತ್ತಾರೆ. ಆ ಸಮಯದಲ್ಲಿ ಅವರು ತಮ್ಮ ವಾಸಸ್ಥಾನವನ್ನಾಗಿ ಆರಿಸಿಕೊಂಡ ಸ್ಥಳ ವಿರಾಟನಗರ. ವಿರಾಟನು ಶ್ರೀವೇದವ್ಯಾಸರ ತಾಯಿ ಎನ್ನಿಸಿಕೊಂಡ ಸತ್ಯವತಿಯ ಸೋದರ. ಶ್ರೀವೇದವ್ಯಾಸರ ಅನುಗ್ರಹದಿಂದ ಜನ್ಮ ತಳೆದ ಪಾಂಡುವಿನ ಪುತ್ರರೇ ಪಾಂಡವರು. ಹೀಗೆ ಸಂಬಂಧಿಯೂ, ಸಾತ್ವಿಕನೂ ಆಗಿದ್ದುದು ವಿರಾಟನ ಭಾಗ್ಯವಾಗಿತ್ತು.

ಯುಧಿಷ್ಠಿರನು ಕಂಕಯತಿಯಾಗಿ, ಭೀಮಸೇನನು ಮಹಾನಸದ ಅಧ್ಯಕ್ಷನಾಗಿ, ಅರ್ಜುನನು ಬೃಹನ್ನಳೆಯಾಗಿ, ನಕುಲ ಅಶ್ವಪಾಲಕನಾಗಿ, ಸಹದೇವ ಗೋಪಾಲಕನಾಗಿ ವಿರಾಟನ ಆಸ್ಥಾನದಲ್ಲಿ ನೆಲೆಸಿದರು. ದ್ರೌಪದಿಯು ಸ್ವೀಕರಿಸಿದ್ದು ಸೈರಂಧ್ರೀ ವೇಷವನ್ನು. ಸೈರಂಧ್ರೀ ಎಂದರೆ ರಾಜನಿಗೆ ಅಗತ್ಯವೆನ್ನಿಸುವ ಗಂಧ ಮೊದಲಾದ ದ್ರವ್ಯಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಮಾಡುವವಳು. ಅದು ಕ್ಷತ್ರಿಯಸ್ತ್ರೀಯ ವೇಷವಾಗಿರದೇ ಶೂದ್ರಸ್ತ್ರೀಯ ವೇಷವಾಗಿತ್ತು. ಭೀಮಸೇನ ಅಡುಗೆಯ ಕಾರ್ಯಕ್ಕೆಂದು ಸೂದವೇಷವನ್ನು ಧರಿಸಿದ್ದ. ಆ ಕಾಲದಲ್ಲಿ ಅಡುಗೆಯವರು ಶೂದ್ರರೇ ಆಗಿದ್ದರು. ಅವರು ಸಚ್ಛೂದ್ರರು. ಎಂದರೆ, ಭಗವದ್ಭಕ್ತರಾಗಿ, ಸದಾಚಾರಿಗಳೂ, ಗುಣವಂತರೂ ಆಗಿರುತ್ತಿದ್ದರಿಂದ ಅವರು ಮಾಡಿದ ಅಡುಗೆ ಸರ್ವರಿಗೂ ಗ್ರಾಹ್ಯವೆನ್ನಿಸುತ್ತಿತ್ತು. ಭೀಮಸೇನ ಶೂದ್ರವೇಷದಲ್ಲಿದ್ದುದರಿಂದ ಪತಿಗೆ ಅನುಗುಣವಾಗಿ ಸತಿಯು ನಡೆದುಕೊಳ್ಳಬೇಕು ಎಂಬ ಶಾಸ್ತ್ರನಿಯಮದಂತೆ, ಮುಖ್ಯವಾಗಿ ಭೀಮಪತ್ನಿಯಾದ ದ್ರೌಪದಿಯು ಸಹ ಸೈರಂಧ್ರೀರೂಪದಲ್ಲಿ ಶೂದ್ರವೇಷವನ್ನೇ ಧರಿಸಿದಳು[೧].

ಸೈರಂಧ್ರಿಯ ವೇಷದಲ್ಲಿದ್ದ ದ್ರೌಪದಿಯು ಉಟ್ಟಿದ್ದು ಒಂದು ಸಾಧಾರಣವಾದ ವಸ್ತ್ರವನ್ನು. ಅಲಂಕಾರಗಳನ್ನಂತೂ ಧರಿಸುವಂತೆಯೇ ಇರಲಿಲ್ಲ. ನಿಜವಾದ ಅರ್ಥದಲ್ಲಿ ನಿರಾಭರಣಸುಂದರಿಯಾಗಿ ವಿರಾಟನಗರವನ್ನು ಪ್ರವೇಶಿಸಿದಳು. ಆ ಕಾಲದಲ್ಲಿ ಅವಳ ಸೌಂದರ್ಯಕ್ಕೆ ಊರಿನ ಸಮಸ್ತ ಜನರೂ ಬೆರಗಾದರು.

''ಇವಳೇನು ಮಹಾಲಕ್ಷ್ಮಿಯೋ, ಶಚಿಯೋ, ಶ್ಯಾಮಲೆಯೋ, ಸ್ವರ್ಗಲೋಕದ ಅಪ್ಸರೆಯೋ? ಮನುಷ್ಯಮಾತ್ರಳಂತೂ ಸರ್ವಥಾ ಅಲ್ಲ'' ಎಂಬ ಉದ್ಗಾರ ಮಹಾರಾಣಿಯಾದ

---

೧ ಭೀಮಸೇನಸಧರ್ಮಾರ್ಥಂ ಶೂದ್ರಾ ಸೈರಂಧ್ರಿಕಾಽಭವತ್।
ದ್ರೌಪದೀ ಭರ್ತೃಸಾಧರ್ಮ್ಯಂ ಸ್ತ್ರೀಣಾಂ ಧರ್ಮೋ ಯತಃ ಸದಾ ॥ -ಮ.ಭಾ.ತಾ.ನಿ.(೨೩/೧೦)

ಸುದೇಷ್ಣೆಯ ಬಾಯಿಂದ ಬಂದಿತು. ಮನುಷ್ಯರಿರಲಿ, ಬೆಳೆದು ನಿಂತಿದ್ದ ಮರಗಿಡಗಳು ಸಹ ದ್ರೌಪದಿಯತ್ತ ವಾಲತೊಡಗಿದ್ದವಂತೆ[೧]. ಈ ಮುನ್ನವೇ ತಿಳಿಸಿರುವಂತೆ ೬೦ ವರ್ಷದ ಆಸುಪಾಸಿನ ಹಿರಿ ವಯಸ್ಸಿನಲ್ಲೂ ದ್ರೌಪದಿಯ ಆ ಸೌಂದರ್ಯ ದೇವಲೋಕದ ಸೌಂದರ್ಯವಾಗಿತ್ತು. ತಾನು ಒಬ್ಬ ಸೈರಂಧ್ರೀ ಎಂದು ಹೇಳಿಕೊಂಡಾಗ ಸುದೇಷ್ಣೆ ಅದನ್ನು ನಂಬಲು ಸರ್ವಥಾ ಸಿದ್ಧವಿರಲಿಲ್ಲ. ಅವರಿವರಿರಲಿ, ವಿರಾಟನು ಸಹ ತನ್ನನ್ನು ಪರಿತ್ಯಾಗ ಮಾಡಿ ಇವಳನ್ನು ಸ್ವೀಕರಿಸಿಯಾನು ಎಂಬ ಚಿಂತೆಗೆ ಸುದೇಷ್ಣೆ ಒಳಗಾಗುತ್ತಾಳೆ.

ದ್ರೌಪದಿಯು ತಾನು ಸೈರಂಧ್ರಿಯೇ, ತನ್ನ ಪತಿಗಳು ಗಂಧರ್ವರು ಅದರಲ್ಲಿ ಒಬ್ಬನಂತೂ ದೇವತೆಗಳನ್ನೂ ಸಹ ಸದೆಬಡಿಯಬಲ್ಲ ಮಹಾವೀರ. ಕಾರಣಾಂತರದಿಂದ ಒಂದು ವರ್ಷದ ಮಟ್ಟಿಗೆ ಮಾತ್ರವೇ ಅವಳ ವಾಸ ಅಲ್ಲಿ. ತನ್ನ ರಕ್ಷಣೆಯ ಜವಾಬ್ದಾರಿಯೂ ಸಹ ತನ್ನದೇ ತನ್ನ ಪತಿಗಳದೇ ಎಂದು ವಿವರಿಸುತ್ತಾಳೆ. ಪಾದ ಒತ್ತುವುದು ಮೊದಲಾದ ಕಾರ್ಯಗಳನ್ನು ಹೊರತುಪಡಿಸಿ ಉಳಿದಂತೆ ಸೇವೆ ಮಾಡುವ ಭರವಸೆಯನ್ನು ನೀಡುತ್ತಾಳೆ[೨].

ಸುದೇಷ್ಣೆ ಅದಕ್ಕೆ ಒಪ್ಪುವಳು. ದ್ರೌಪದಿಯ ಅಜ್ಞಾತವಾಸ ಅಲ್ಲಿ ಹಾಗೆ ಪ್ರಾರಂಭವಾಯಿತು.

## ಕೀಚಕನ ನೀಚಕಾರ್ಯ

ಅಜ್ಞಾತವಾಸ ಪ್ರಾರಂಭವಾಗಿ ಹತ್ತು ತಿಂಗಳುಗಳು ಪೂರೈಸಿದ್ದವು. ಆ ವೇಳೆಗೆ ದಿಗ್ವಿಜಯಕ್ಕೆಂದು ಹೋಗಿದ್ದ ಕೀಚಕ ವಿರಾಟ ನಗರಕ್ಕೆ ಹಿಂದಿರುಗಿದ. ಸುದೇಷ್ಣೆಯ ಮನೆಗೆ ಬಂದಿದ್ದ ಅವನು ಅಲ್ಲಿ ದ್ರೌಪದಿಯನ್ನು ಕಂಡ. ಅವನಿಗೆ ದಿಗ್ಭ್ರಾಂತಿ ಉಂಟಾಯಿತು. ಅಂತಹ ಅಪೂರ್ವ ಸೌಂದರ್ಯವನ್ನು ಅವನು ಕಂಡಿರುವುದಿರಲಿ, ಕೇಳಿಯೂ ಇರಲಿಲ್ಲ. ಅವಳನ್ನು ಪಡೆಯಲು ನಿಶ್ಚಯಿಸಿದ. ಅದಕ್ಕಾಗಿ ಪರಿಪರಿಯ ಪ್ರಯತ್ನ ಮಾಡತೊಡಗಿದ. ಅಲ್ಲಿಗೆ ಮತ್ತೊಂದು ತಿಂಗಳು ಕಳೆಯಿತು. ಪ್ರತಿಬಾರಿ ದ್ರೌಪದಿಯನ್ನು ಸಂಪರ್ಕಿಸಿ ತನ್ನನ್ನು ಮೆಚ್ಚಲು ಅವನು ಕೇಳಿಕೊಂಡಾಗಲೂ ದ್ರೌಪದಿಯ ಉತ್ತರ ಸಿದ್ಧವಾಗಿರುತ್ತಿತ್ತು. "ನಿನ್ನದು ಅವಿವೇಕದ ಪರಾಕಾಷ್ಠೆ. ನಾನು ಈಗಾಗಲೇ ವಿವಾಹಿತೆ. ತನ್ನ ಪತಿಗಳು ಗಂಧರ್ವರು. ಅವರಿಂದ ನೀನು ಬದುಕುವುದು ಸಾಧ್ಯವೇ ಇಲ್ಲ. ಸಲ್ಲದ ಆಸೆಗೆ ಮನಸ್ಸು ಹಾಕಿ ಪ್ರಾಣ ಕಳೆದುಕೊಳ್ಳಬೇಡ" ಎಂದು ಎಚ್ಚರಿಸಿದಳು. ಕೀಚಕನು ಬಾಣಾಸುರ ಎಂಬ ದೈತ್ಯನ ಅವತಾರ. ವಿಷ್ಣುಭಕ್ತನಾದ ಬಾಣಾಸುರನ ಒಳಗೆ ಪ್ರವೇಶ ಮಾಡಿ ಅವನ ಬುದ್ಧಿಯನ್ನು ಕೆಡಿಸುತ್ತಿದ್ದ ಅದೇ ಹೆಸರಿನ ಅಸುರ ಇವನು. ಬಲ, ಅಧಿಕಾರ ಎಲ್ಲಕ್ಕಿಂತ ಮಿಗಿಲಾಗಿ ಶಿವನ ವರ ಮತ್ತು ಉಪಕೀಚಕರೆಂಬ

---

೧ ವೃಕ್ಷಾಂಶ್ಚಾವಸ್ಥಿತಾನ್ ಪಶ್ಯ ಯ ಇಮೇ ಮಮ ವೇಶ್ಮನಿ।
ತೇಽಪಿ ತ್ವಾಂ ಸನ್ನಮಂತೀವ ಪುಮಾಂಸಂ ಕಂ ನ ಮೋಹಯೇಃ॥ – ಮ.ಭಾ.(ವಿ.ಪ./೯/೨೪)

೨ ಯೋ ಮೇ ನ ದದ್ಯಾದುಚ್ಛಿಷ್ಟಂ ನ ಚ ಪಾದೌ ಪ್ರಧಾವಯೇತ್। –ಮ.ಭಾ.(ವಿ.ಪ./೯/೩೨)

ನೂರು ಜನ ತಮ್ಮಂದಿರ ಸಹಕಾರ ಮೊದಲಾದ ಅನೇಕ ಕಾರಣಗಳಿಂದ ಅವನ ಸಹಜ ದುಷ್ಟತನ ಮತ್ತಷ್ಟು ಗಟ್ಟಿಗೊಂಡಿತ್ತು. ಕೊನೆಗೂ ತನ್ನ ತಂಗಿ[೧] ಸುದೇಷ್ಣೆಯನ್ನು ಒತ್ತಾಯ ಮಾಡಿ ಅವಳನ್ನು ಒಮ್ಮೆ ಯಾವುದಾದರೂ ನೆಪಮಾಡಿ ತನ್ನ ಮನೆಗೆ ಕಳುಹಿಸಿಕೊಡಬೇಕೆಂದು ಆಗ್ರಹಿಸಿದ. ಅದೊಂದು ದಿನ ಅವನ ಮನೆಯಿಂದ ಸುರೆಯನ್ನು ತರುವ ಕಾರ್ಯಕ್ಕೆ ಸುದೇಷ್ಣೆ ದ್ರೌಪದಿಯನ್ನು ಒತ್ತಾಯದಿಂದ ನಿಯೋಜಿಸಿದಳು. ದ್ರೌಪದಿ ಆಗಲೇ ಎಚ್ಚರಿಸಿದಳು. ಕೀಚಕ ಪರಮದುಷ್ಟ ಅವನಿಂದ ಅಪಚಾರವಾದಲ್ಲಿ ಅವನ ಆಯುಷ್ಯ ಮುಗಿದಂತೆಯೇ. ಆದರೆ ಸುದೇಷ್ಣೆ ತನ್ನ ಆಗ್ರಹವನ್ನು ಬಿಡಲಿಲ್ಲ. ಅವಳ ಒತ್ತಾಯಕ್ಕೆ ಮಣಿದು ಕೀಚಕನ ಮನೆಗೆ ತೆರಳಿದಳು. ಕೀಚಕ ಪೂರ್ವದಲ್ಲೇ ನಿಶ್ಚಯಿಸಿದಂತೆ ಅವಳನ್ನು ಬಲಾತ್ಕರಿಸಲು ಯತ್ನಿಸಿದ. ದ್ರೌಪದಿಯ ಕೈಯ ಎಳೆತಕ್ಕೆ ಎಚ್ಚರ ತಪ್ಪಿ ನೆಲಕ್ಕೆ ಉರುಳಿದ. ಸಭೆಯತ್ತ ಸಾಗಿದ ದ್ರೌಪದಿಯನ್ನು ಹಿಂಬಾಲಿಸಿ ಕಾಲಿನಿಂದ ಒದ್ದ. ಸೂರ್ಯ ಕಳುಹಿಸಿದ್ದ ಹೇತಿ ಎಂಬ ರಾಕ್ಷಸನ ಒಳಗೆ ಪ್ರವೇಶಿಸಿ ವಾಯುದೇವರು ಅವನನ್ನು ಒದ್ದು ಬೀಳಿಸಿದರು. ಅದನ್ನೆಲ್ಲ ಕಣ್ಣಾರೆ ಕಂಡರೂ ವಿರಾಟ ರಾಜ ಕೀಚಕನ ಭಯದಿಂದಾಗಿ ಯಾವುದೇ ರೀತಿಯ ಸಹಾಯಕ್ಕೂ ಮುಂದಾಗಲಿಲ್ಲ. ಯುಧಿಷ್ಠಿರನು ಸಹ ಆ ಸಮಯದಲ್ಲಿ ಸೂಕ್ತವಾಗಿ ಸ್ಪಂದಿಸಲಿಲ್ಲ. ಅವನ ನಿಗ್ರಹಕ್ಕೆ ದೊಡ್ಡ ಮರವೊಂದನ್ನು ಕೈಗೆತ್ತಿಕೊಳ್ಳಲು ನೋಡುತ್ತಿದ್ದ ಭೀಮನಿಗೆ ಊರ ಹೊರಗಿನ ಮರಗಳನ್ನು ಉಪಯೋಗಿಸುವುದು ಸೂಕ್ತ ಎಂದು ಹೇಳುವ ಮೂಲಕ ಅವನ ನಿಗ್ರಹಕ್ಕೆ ಪರೋಕ್ಷವಾಗಿ ಅನುಮತಿ ನೀಡಿದ. ದ್ರೌಪದೀ ಸುದೇಷ್ಣೆಯ ಬಳಿಗೆ ಹಿಂದಿರುಗಿದಳು.

ದ್ರೌಪದಿಯ ಸ್ಥಿತಿಯನ್ನು ಕಂಡ ಸುದೇಷ್ಣೆ ನಡೆದ ವಿಷಯವನ್ನು ತಿಳಿಯಲು ಕಾತರಿಸಿದಳು. ಅದಕ್ಕೆ ದ್ರೌಪದಿಯ ಉತ್ತರ ನಿನ್ನ ಸೋದರನ ಆಯುಷ್ಯ ಮುಗಿದಿದೆ ಎಂಬುದಷ್ಟೇ[೨] ಆಗಿತ್ತು.

## ಕೀಚಕ ವಧೆ

ಆ ದಿನ ರಾತ್ರಿ ದ್ರೌಪದಿಯು ಭೀಮಸೇನನ ಬಳಿಗೆ ತೆರಳಿದಳು. ಯತಿರೂಪದಲ್ಲಿದ್ದ ಯುಧಿಷ್ಠಿರನಿಂದ ತನ್ನ ರಕ್ಷಣೆ ಸಾಧ್ಯವಿಲ್ಲ; ಅರ್ಜುನನಂತೂ ಷಂಡ ವೇಷದಲ್ಲಿದ್ದು

೧ ಕುಮಾರವ್ಯಾಸಭಾರತ ಮೊದಲಾದ ಅನೇಕ ಕೃತಿಗಳಲ್ಲಿ ಸುದೇಷ್ಣೆಯನ್ನು ಕೀಚಕನ ಅಕ್ಕ ಎಂಬುದಾಗಿ ಚಿತ್ರಿಸಿರುವುದುಂಟು. ಆದರೆ ಅದು ಸರಿಯಲ್ಲ. ಮಹಾಭಾರತದಲ್ಲಿ ಸ್ಪಷ್ಟವಾಗಿ ಬಂದಿರುವಂತೆ ಅವಳು ತಂಗಿಯೇ ಹೊರತು ಅಕ್ಕನಲ್ಲ. ಅಕ್ಕನಾಗಿದ್ದರೆ, ಕೀಚಕನನ್ನು ನಿಯಂತ್ರಿಸುವ ಅಧಿಕಾರ ಅವಳಿಗೆ ಸ್ವಲ್ಪವಾದರೂ ಇರುತ್ತಿತ್ತು. ತಂಗಿಯಾದ್ದರಿಂದ ತನಗೆ ಒಪ್ಪಿಗೆಯಾಗದಿದ್ದರೂ, ಅವನ ಮಾತನ್ನು ಕೇಳುವ ಅನಿವಾರ್ಯತೆ ಅವಳಿಗೆ ಉಂಟಾಗಿತ್ತು. ಇದು ಸ್ವಭಾವತಃ ಸಾತ್ವಿಕ ಚೇತನವಾಗಿದ್ದ ಅವಳು ಕೀಚಕನ ಮಾತನ್ನು ಕೇಳಿದ್ದು ಹೇಗೆ ಎಂಬ ಪ್ರಶ್ನೆಗೆ ಉತ್ತರವೂ ಆಗಿದೆ.

೨ ಮನ್ಯೇ ಚೈವಾದ್ಯ ಸುವ್ಯಕ್ತಂ ಯಮಲೋಕಂ ಗಮಿಷ್ಯತಿ ।
ಭ್ರಾತುಃ ಪ್ರಯಚ್ಛ ತ್ವರಿತಾ ಜೀವಶ್ರಾದ್ಧಂ ತ್ವಮದ್ಯ ವೈ ॥ – ಮ.ಭಾ.(ವಿ.ಪ./೧೬/೫೧,೫೨)

ಬೃಹನ್ನಳೆಯಾಗಿದ್ದಾನೆ. ನಕುಲ, ಸಹದೇವರಿಗೆ ಅದು ಆಗದ ಕಾರ್ಯ. ಭೀಮನೊಬ್ಬನೇ ಎಲ್ಲ ಕಾಲಕ್ಕೂ ತನಗೆ ಸೂಕ್ತ ರಕ್ಷಣೆ ನೀಡಬಲ್ಲ ಮಹಾಪುರುಷ ಎಂದು ಬಗೆದು ದ್ರೌಪದಿಯು ಅವನ ಬಳಿಗೆ ತೆರಳಿದಳು.

ಭೀಮ ದ್ರೌಪದಿಯರ ಸಂಬಂಧದ ಬಗ್ಗೆ ಅಪೂರ್ವ ಬೆಳಕು ಚೆಲ್ಲುವ ಪ್ರಸಂಗ ಇದು. ಹಾಗೆ ನೋಡಿದರೆ ಪ್ರತಿಯೊಂದು ಆಪತ್ತಿನಲ್ಲೂ ದ್ರೌಪದಿಯ ಬಗ್ಗೆ ಕೂಡಲೇ ಸ್ಪಂದಿಸಿ ಅದಕ್ಕೆ ಸೂಕ್ತ ಪರಿಹಾರ ನೀಡುತ್ತಿದ್ದ ಹಿರಿಮೆ ಭೀಮಸೇನನದಾಗಿತ್ತು. ನಿಜಕ್ಕೂ ಭಾರತೀಪತಿ ವಾಯುವೇ ಅಲ್ಲವೆ? ಇವನು ವಾಯುಪುತ್ರನಾದರೆ, ಅವಳು ಅಗ್ನಿಕನ್ಯೆ. ಅಗ್ನಿಗೆ ಸಹಕಾರಿ ಸದಾ ವಾಯುವೇ ಅಲ್ಲವೇ?

ಆ ಮಧ್ಯರಾತ್ರಿಯ ಸಮಯದಲ್ಲಿ ಭೀಮ ನೆಲೆಸಿದ್ದ ವಿರಾಟನ ಅಡುಗೆ ಮನೆಗೆ ದ್ರೌಪದಿಯು ಪ್ರವೇಶಿಸಿದಾಗ ಆಕೆಯ ದೇಹದ ಪ್ರಕಾಶಕ್ಕೆ ಅಡುಗೆಮನೆ ಥಳಥಳಿಸುತ್ತಿತ್ತು ಎಂದಿದೆ ಮಹಾಭಾರತ. ಅದಕ್ಕೆ ಭೀಮನ ಮೈಕಾಂತಿಯು ಸೇರಿ ಆ ಪ್ರದೇಶವೇ ದೇದೀಪ್ಯಮಾನವಾಗಿ ಕಂಗೊಳಿಸುತ್ತಿತ್ತು[೧]. ಅವರಿಬ್ಬರ ತೇಜೋಮಯ ವ್ಯಕ್ತಿತ್ವದ ಬಗ್ಗೆ ಮಹಾಭಾರತದ ಈ ಪ್ರಸಂಗ ಅಪೂರ್ವ ದಾಖಲೆಯಾಗಿ ನಿಲ್ಲುತ್ತದೆ.

ದ್ರೌಪದಿಯು ತನ್ನ ಪರಿಸ್ಥಿತಿಯನ್ನು ಭೀಮನ ಮುಂದೆ ನಿವೇದಿಸಿದಳು. ಜೀಮೂತ-ನೆಂಬ ಶಿವವರದಿಂದ ಉನ್ಮತ್ತನಾಗಿದ್ದ ಅಸುರನನ್ನು ಭೀಮಸೇನ ಅನಾಯಾಸವಾಗಿ ಯಮಪುರಿಗೆ ಅಟ್ಟಿದ ಮೇಲೆ ವಿರಾಟನ ಆಸ್ಥಾನದಲ್ಲಿ ಮಲ್ಲಯುದ್ಧವೇ ನಿಂತುಹೋಗಿತ್ತು. ಭೀಮನನ್ನು ಎದುರಿಸುವ ಪ್ರತಿಮಲ್ಲರೇ ಇಲ್ಲದಂತಾಗಿದ್ದರು. ಆದರಿಂದಾಗಿ ವಿರಾಟರಾಜ ಸಿಂಹ, ಹುಲಿಗಳೊಂದಿಗೆ ಭೀಮಸೇನನ ಕಾದಾಟವನ್ನು ಏರ್ಪಡಿಸಿ ಮನಸ್ಸನ್ನು ರಂಜಿಸಿಕೊಳ್ಳುತ್ತಿದ್ದನಂತೆ[೨]. ಅದನ್ನು ತಿಳಿಸುತ್ತಾ ದ್ರೌಪದಿಯು ಭೀಮನ ಆ ಅದ್ಭುತಪರಾಕ್ರಮವನ್ನು ಬಿಡುಗಣ್ಣುಗಳಿಂದ ನೋಡುತ್ತಿದ್ದಾಗ ಜನ ಮಾತನಾಡಿಕೊಳ್ಳುತ್ತಿದ್ದರಂತೆ "ಸೈರಂಧ್ರೀ ಇವನ ಕಡೆಗೆ ನೆಟ್ಟನೋಟ ಬೀರುತ್ತಿರುವಳು ಆ ಬಲ್ಲವನು ಇವಳನ್ನೇ ನೋಡುತ್ತಿರುವನು. ಇವರಿಬ್ಬರ ಮಧ್ಯೇ ಏನೋ ಸಂಬಂಧವಿರಬೇಕು". ಇದನ್ನು ತಿಳಿಸುತ್ತಾ ದ್ರೌಪದೀ ಹೇಳುತ್ತಾಳೆ. ನಾವಿಬ್ಬರು ಸತಿ-ಪತಿಗಳೆಂಬುದನ್ನು ಅರಿಯದ ಜನ ಹೀಗೆ ಮಾತನಾಡುವುದನ್ನು ಕೇಳಿ ತನಗಾಗುವ ನೋವು ಅಪಾರ ಎಂದಳು. ಕೀಚಕನಿಂದಾಗುವ ಉಪಟಳವನ್ನು ಹೇಳಿಕೊಂಡಳು. ಕೊನೆಗೆ ಭೀಮ ಮಾರನೆ ದಿನ ರಾತ್ರಿ

---

೧ ತಸ್ಯಾ ರೂಪೇಣ ಸಾ ಶಾಲಾ ಭೀಮಸ್ಯ ಚ ಮಹಾತ್ಮನಃ।
ಸಮ್ಮೂರ್ಛಿತೇವ ಕೌರವ್ಯ ಪ್ರಜಜ್ವಾಲ ಚ ತೇಜಸಾ ॥ – ಮ.ಭಾ (ವಿ.ಪ./೧೭/೯,೧೦)

೨ ಶಾರ್ದೂಲೈರ್ಮಹಿಷೈಃ ಸಿಂಹೈರಾಗಾರೇ ಯೋಧ್ಯಸೇ ಯದಾ।
ಕೈಕೇಯ್ಯಾಃ ಪ್ರೇಕ್ಷಮಾಣಾಯಾಸ್ತದಾ ಮೇ ಕಶ್ಮಲಂ ಭವೇತ್ ॥ –ಮ.ಭಾ.(ವಿ.ಪ./೧೯/೬)

ನಗರದ ಹೊರವಲಯದಲ್ಲಿದ್ದ ನರ್ತನಶಾಲಾ ಎಂಬ ಸ್ಥಳಕ್ಕೆ ಕೀಚಕನನ್ನು ಬರಲು ತಿಳಿಸುತ್ತಾನೆ. ಹಾಗೆ ಬರುವ ಅವನನ್ನು ಕೊಲ್ಲುವುದಾಗಿ ತಿಳಿಸುತ್ತಾನೆ. ಅಜ್ಞಾತವಾಸವಾದ್ದರಿಂದ ಎಲ್ಲರಿಗೂ ತಿಳಿಯುವಂತೆ ಕೊಲ್ಲುವುದು ಅನುಚಿತ ಎಂಬುದು ಅದರ ಉದ್ದೇಶವಾಗಿತ್ತು.

ಮುಂದೆ ಅದರಂತೆಯೇ ನಡೆಯಿತು. ನರ್ತನಶಾಲೆಗೆ ತನ್ನನ್ನು ದ್ರೌಪದಿಯು ಬರಹೇಳಿದ್ದನ್ನು ಕೇಳಿದ ಕೀಚಕ ತನ್ನ ಬಯಕೆ ಈಡೇರುವುದು ಎಂದು ಭ್ರಮಿಸಿ ಅಲ್ಲಿಗೆ ತೆರಳುತ್ತಾನೆ. ಭೀಮ ಅವನನ್ನು ಮಲ್ಲಯುದ್ಧದಲ್ಲಿ ಸಂಹರಿಸಿ ಅವನ ತಲೆ, ಕೈಕಾಲುಗಳನ್ನು ಮುರಿದು ಗುದದ ಮೂಲಕ ಅವನ್ನೆಲ್ಲ ಅದರೊಳಗೆ ಸೇರಿಸಿ ಅವನನ್ನು ಮಾಂಸದ ಮುದ್ದೆಯನ್ನಾಗಿ ಮಾಡಿ ಕಾಲಿನಿಂದ ಒದ್ದು ಕಾಲ್ಚೆಂಡನ್ನಾಗಿ ಮಾಡುತ್ತಾನೆ; ದೀಪದ ಬೆಳಕಿನಲ್ಲಿ ಅವನ ಶವವನ್ನು ದ್ರೌಪದಿಗೆ ತೋರಿಸುತ್ತಾನೆ.

## ಉಪಕೀಚಕರ ವಧೆ

ಆಗ ದ್ರೌಪದಿಯು ಜೋರಾಗಿ ಕೂಗಿಕೊಂಡು ತನ್ನನ್ನು ಕೆಣಕಿದ ಕೀಚಕನಿಗೆ ಒದಗಿದ ದುರ್ಗತಿಯನ್ನು ತಿಳಿಸುತ್ತಾಳೆ. ಕೂಡಲೇ ಅಲ್ಲಿಗೆ ಆಗಮಿಸಿದ ಉಪಕೀಚಕರು ಕೀಚಕನ ಶವದೊಂದಿಗೆ ದ್ರೌಪದಿಯನ್ನು ದಹನ ಮಾಡಲು ಉದ್ಯುಕ್ತರಾಗುತ್ತಾರೆ. ದ್ರೌಪದಿಯ ಕೂಗನ್ನು ಕೇಳಿಸಿಕೊಂಡು ಕೂಡಲೇ ಅಲ್ಲಿಗೆ ಆಗಮಿಸಿದ ಭೀಮಸೇನ, ಉಪಕೀಚಕರನ್ನು ಮರವೊಂದನ್ನು ಕಿತ್ತಿ ಅದರಿಂದ ಕೊಂದುಹಾಕಿದ. ಮಾರನೇ ದಿನ ಬೆಳಿಗ್ಗೆ ಸ್ನಾನಾದಿಗಳನ್ನು ಪೂರೈಸಿ ದ್ರೌಪದಿಯು ರಾಜಬೀದಿಯಲ್ಲಿ ನಡೆಯುತ್ತಾ ಬಂದಾಗ ಭೀಮಸೇನನ್ನು ಕಂಡು ನನ್ನನ್ನು ಆಪತ್ತಿನಿಂದ ಪಾರುಮಾಡಿದ ಗಂಧರ್ವರಾಜನಿಗೆ ''ನಮಸ್ಕಾರ'' ಎಂದು ವಂದಿಸುತ್ತಾಳೆ[೧]. ವಿಷಯವನ್ನು ತಿಳಿಯಬಯಸಿ ದ್ರೌಪದಿಯನ್ನು ಕೇಳಿದ ಅರ್ಜುನನಿಗೆ ಇದೆಲ್ಲ ಬೃಹನ್ನಳೆಗೆ ಅರ್ಥವಾಗುವಂತಹ ವಿಚಾರವಲ್ಲ ಎಂಬಂತೆ ನುಡಿದು ಮುಂದೆ ಸಾಗುತ್ತಾಳೆ[೨]. ಅವರೆಗೂ ಕೀಚಕನ ಕಾಟದಿಂದ ಬಹಳವಾಗಿ ನೊಂದಿದ್ದ ವಿರಾಟರಾಜ ಅವನ ವಧೆಯಿಂದ ನೆಮ್ಮದಿ ಕಂಡನು. ದ್ರೌಪದಿಯನ್ನು ಕಣ್ಣೆತ್ತಿ ನೋಡಿದರೆ ಗಂಧರ್ವರಿಂದ ತಮಗೆ ಆಪತ್ತು ಖಚಿತ ಎಂದು ಭಾವಿಸಿದ ಜನ, ಅವಳೆಡೆಗೆ ನೋಡಲು ಸಹ ಅಂಜತೊಡಗಿದರು. ಇನ್ನು ಅಲ್ಲಿರುವುದು ಬೇಡ ಎಂದು ಸುದೇಷ್ಣೆ ನುಡಿದಾಗ, ದ್ರೌಪದಿಯು 'ನಮ್ಮ ಒಂದು

---

೧ ಗಂಧರ್ವರಾಜಾಯ ನಮೋ ಯೇನಾಸ್ಮಿ ಪರಿಮೋಚಿತಾ। – ಮ.ಭಾ.(ವಿ.ಪ./೧೭/೧೫)

೨ ಬೃಹನ್ನಲೇ ಕಿಂ ನು ತವ ಸೈರಂಧ್ರ್ಯಾ ಕಾರ್ಯಮದ್ಯ ವೈ।
ಯಾ ತ್ವಂ ವಸಸಿ ಕಲ್ಯಾಣಿ ಸದಾ ಕನ್ಯಾಪುರೇ ಸುಖಮ್ ॥
ನ ಹಿ ದುಃಖಂ ಸಮಾಪ್ನೋಷಿ ಸೈರಂಧ್ರೀ ಯದುಪಾಶ್ನುತೇ।
ತೇನ ಮಾಂ ದುಃಖಿತಾಮೇವಂ ಪೃಚ್ಛಸೇ ಪ್ರಹಸನ್ನಿವ ॥ –ಮ.ಭಾ.(ವಿ.ಪ./೨೪/೨೧,೨೨)

ವರ್ಷ ಅವಧಿ ಮುಗಿಯುತ್ತಾ ಬಂದಿದೆ. ನಮ್ಮ ವಾಸ ಎನಿದ್ದರೂ ಇನ್ನು ಹದಿಮೂರು ದಿನಗಳು ಮಾತ್ರ' ಎಂದು ಸಮಾಧಾನ ಪಡಿಸಿದಳು.

ಅಂತೂ, ಭೀಮನಿಂದ ಕೀಚಕನ ವಧೆ ನಡೆಯಿತು, ಅದಕ್ಕೆ ದ್ರೌಪದಿ ನಿಮಿತ್ತವಾದಳು. ಶಿವನ ವರವಿದ್ದ ಕೀಚಕನ ಸಂಹಾರ ಭೀಮಸೇನನಿಂದ ಅನಾಯಾಸವಾಗಿ ನಡೆದು ಅವನ ಲೋಕೋತ್ತರವಾದ ಹಿರಿಮೆ ಬೆಳಕಿಗೆ ಬರುವುದು. ವಿರಾಟರಾಜ ತನ್ನನ್ನು ಹೆಸರಿಗೆ ಮಾತ್ರ ರಾಜನನ್ನಾಗಿ ಮಾಡಿ ತನ್ನನ್ನು ತನ್ನ ಕೈಗೊಂಬೆಯನ್ನಾಗಿಸಿಕೊಂಡಿದ್ದ ಕೀಚಕನಿಂದ ಬಿಡುಗಡೆ ಹೊಂದಿ ನೆಮ್ಮದಿಯನ್ನು ಕಂಡನು[೧]. ಜಗತ್ತನ್ನು ಕಾಡುತ್ತಿದ್ದ ಮತ್ತೊಬ್ಬ ಮಹಾದುಷ್ಟನ ಅಂತ್ಯ ಹೀಗೆ ನಡೆದು ಲೋಕ ಆನಂದದಿಂದ ನಲಿಯಿತು.

ಇಲ್ಲಿ ಆಧುನಿಕರು ದ್ರೌಪದಿಯ ಬಗ್ಗೆ ಒಂದು ಆಕ್ಷೇಪ ಮಾಡುವುದುಂಟು. ಕೀಚಕನು ಸತ್ತ ಮೇಲೆ ದ್ರೌಪದಿ ತನ್ನ ವಾಸಸ್ಥಾನಕ್ಕೆ ತೆರಳುವ ಬದಲು ಜೋರಾಗಿ ಕೂಗಿಕೊಂಡಿದ್ದಕ್ಕೆ ಉಪಕೀಚಕರಿಗೆ ಆ ವಿಷಯ ತಿಳಿಯುವಂತಾಗಿ, ಅವರೆಲ್ಲ ಒಟ್ಟಾಗಿ ನುಗ್ಗಿ ದ್ರೌಪದಿಯನ್ನು ಕೀಚಕನ ಶವದೊಂದಿಗೆ ದಹನ ಮಾಡಲು ಉದ್ಯುಕ್ತರಾಗುತ್ತಾರೆ. ಇದು ದ್ರೌಪದಿ ತಾನಾಗಿಯೇ ತಂದುಕೊಂಡ ಆಪತ್ತು; ಒಂದು ಬಗೆಯ ಅವಿವೇಕವೇ ಸರಿ ಎಂಬುದು ಅವರ ವಾದ.

ಇದು ಸರಿಯಲ್ಲ. ದ್ರೌಪದಿ ಹಾಗೆ ಕೂಗಿಕೊಂಡದ್ದು ಉಪಕೀಚಕರು ಸಹ ಹಾಗೆ ಬರಲೇಬೇಕು, ಅವರೆಲ್ಲರನ್ನು ಭೀಮಸೇನ ಸಂಹರಿಸಿ ಲೋಕಕ್ಕೆ ಕಲ್ಯಾಣವಾಗಬೇಕು ಎಂಬ ಉದ್ದೇಶದಿಂದಲೇ. ದ್ರೌಪದಿಗೆ ಅದರಿಂದ ಆಪತ್ತು ಬರುವ ಸಂಭವ ಸರ್ವಥಾ ಇಲ್ಲ. ಭೀಮಸೇನನಿಂದ ಅವರೆಲ್ಲ ಹತರಾಗುವುದು ನಿಶ್ಚಿತ ಎಂಬ ಜ್ಞಾನ ಅವಳಿಗೆ ದೃಢವಾಗಿದ್ದುದೇ ಅದಕ್ಕೆ ಕಾರಣ. ನಿಜಕ್ಕೂ ಇದು ದ್ರೌಪದಿಯ ವಿವೇಕವನ್ನು ತೋರಿಸುವುದೇ ಹೊರತು ಅವಿವೇಕವನ್ನಲ್ಲ. ಇದರಿಂದ ದ್ರೌಪದಿಯು ಸಾಮಾನ್ಯಸ್ತ್ರೀಯಾಗಿರದೆ ಲೋಕಕಂಟಕರ ಸಂಹಾರಕ್ಕಾಗಿ ಅವತರಿಸಿ ಬಂದಂತಹ ಶ್ರೇಷ್ಠ ದೇವತಾಸ್ತ್ರೀ ಎಂಬ ವಿಶೇಷಾಂಶ ತಿಳಿಯುವುದು. ದ್ರೌಪದಿಯ ಅವತಾರ ಇಂತಹ ವಿಶೇಷ ಕಾರ್ಯಕ್ಕಾಗಿಯೇ ಎಂಬ ಮಾತು ಅವಳ ಅವತಾರದ ಸಮಯದಲ್ಲಿ ಅಶರೀರವಾಣಿಯೇ ಸ್ಪಷ್ಟಪಡಿಸಿದೆಯಲ್ಲವೆ!

ಅಲ್ಲದೆ ದ್ರೌಪದಿಯು ಹಾಗೆ ಮಾಡಿದ್ದು ಸರಿಯೋ, ತಪ್ಪೋ ಎಂದು ನಿರ್ಣಯಿಸ-ಬೇಕಾದದ್ದು ಈ ಕಾಲದ ವಿಮರ್ಶಕರಲ್ಲ; ಉಪಕೀಚಕರನ್ನು ಸಂಹರಿಸಿದ ಭೀಮಸೇನ. ದ್ರೌಪದಿಯನ್ನು ಪ್ರಶಂಸೆಯ ಧ್ವನಿಯಲ್ಲಿ ಸಾಂತ್ವನ ಪಡಿಸಿದನೆ ಹೊರತು[೨] ಅದೆಲ್ಲ ಅವಳ

೧ ತೇಷಾಂ ತದ್ವಚನಂ ಶ್ರುತ್ವಾ ವಿರಾಟೋ ವಾಹಿನೀಪತಿಃ।
ಅಬ್ರವೀತ್ ಕ್ರಿಯತಾಮೇಷಾಂ ಸೂತಾನಾಂ ಪರಮಕ್ರಿಯಾ ॥ – ಮ.ಭಾ.(ವಿ.ಪ/೨೪/೬)

೨ ಶತಂ ಪಂಚಾಧಿಕಂ ಭೀಮಃ ಪ್ರಾಹಿಣೋದ್ಯಮಸಾದನಮ್ ॥

ಅಚಾತುರ್ಯ ಎಂದು ಹೇಳಿಲ್ಲ. ಭೀಮ-ದ್ರೌಪದಿಯರು ಪರಸ್ಪರ ತಮ್ಮನ್ನು ತಿಳಿದಷ್ಟು ಈ ವಿಮರ್ಶಕರು ತಿಳಿಯಲು ಸಾಧ್ಯವೇ?

ಇದು ದುರ್ಯೋಧನಾದಿಗಳು ಮಯಸಭೆಯಲ್ಲಿ ಹಾಸ್ಯಾಸ್ಪದವಾಗಿ ನಡೆದುಕೊಂಡ ಪ್ರಸಂಗದಲ್ಲಿ ದ್ರೌಪದಿ ನಕ್ಕಿದ್ದುಹೇಗೋ ಹಾಗೆ. ಅದನ್ನುಸಹ ದ್ರೌಪದಿಯ ಅವಿವೇಕ ಎಂದು ಭಾವಿಸಿದ ವಿಮರ್ಶಕರೇ ಇದನ್ನು ಹಾಗೆಂದೇ ತಿಳಿಯುವರು. ಅದು ಸರಿಯಲ್ಲ. ಅಲ್ಲಿಯ ದ್ರೌಪದಿಯ ನಿಶ್ಚಿತವಾದ ವಿವೇಕದಂತೆ ಇದೂ ಸಹ ದುಷ್ಟ ವಿನಾಶಕ್ಕಾಗಿ ಮಾಡಿದ ಕುಶಲ ಕಾರ್ಯ ಎಂದೇ ತಿಳಿಯಬೇಕು.

ವನವಾಸ ಕಾಲದಲ್ಲಿ ಅತಿ ಹೆಚ್ಚು ಜನ ದೈತ್ಯರ ನಾಶವಾಗಿದ್ದು ಭೀಮಸೇನನಿಂದ. ಅದರಲ್ಲಿ ಅತ್ಯಂತ ಮುಖ್ಯವಾದ ಘಟ್ಟಗಳು ಒಂದು ಸೌಗಂಧಿಕಾಪುಷ್ಪದ ಪ್ರಸಂಗವಾದರೆ, ಮತ್ತೊಂದು ಪಂಚವರ್ಣಪುಷ್ಪದ ಪ್ರಸಂಗ. ಅದರಲ್ಲಿ ಮೃತರಾದವರು ಶಿವವರದಿಂದ ಕೊಬ್ಬಿದ್ದ ಕ್ರೋಧವಶರೆಂಬ ಗಣದ ಅಸಂಖ್ಯಾತ ರಾಕ್ಷಸರು. ಮುಖ್ಯವಾಗಿ ಮಣಿಮಂತ ಎಂಬ ಮಹಾದೈತ್ಯ ಹತರಾದವರಲ್ಲಿ ಸೇರಿದ್ದ. ಇಲ್ಲಿಯೂ ಸಹ ಹತರಾದದ್ದು ಅಲ್ಲಿಯಂತೆ ಶಿವನ ವರದಿಂದ ಕೂಡಿದ್ದ ದುಷ್ಟರೆ ಎಂಬುದು ಗಮನಿಸಬೇಕಾದ ಸಂಗತಿ.

## ಗೋಮೋಚನೆಯಲ್ಲಿ ದ್ರೌಪದಿಯ ಪಾತ್ರ

ದಕ್ಷಿಣಗೋಗ್ರಹಣದ ವಿಮೋಚನೆ ಭೀಮನ ನೇತೃತ್ವದ ಯುದಿಷ್ಠಿರಾದಿ ಪಾಂಡವರಿಂದ ನಡೆಯಿತು. ಭೀಮನಿಂದ ವಿರಾಟನ ಮೋಚನೆಯು ಆದದ್ದು ಅದರ ವಿಶೇಷತೆ. ಉತ್ತರಗೋಗ್ರಹಣದ ವಾರ್ತೆಯನ್ನು ಕೇಳಿದ ಉತ್ತರಕುಮಾರ ತಾನು ಗೋಮೋಚನೆಗೆ ಸಿದ್ಧನೇ ಆಗಿದ್ದರೂ, ತನಗೆ ಉತ್ತಮ ಸಾರಥಿಯ ಕೊರತೆ ಇದೆ ಎಂಬುದಾಗಿ ಹೇಳಿಕೊಂಡ. ಅದನ್ನು ಕೇಳಿಸಿಕೊಂಡ ಬೃಹನ್ನಳೆಯ ರೂಪದ ಅರ್ಜುನ ದ್ರೌಪದಿಯನ್ನು ಕರೆದು ಆ ಕಾರ್ಯಕ್ಕೆ ತನ್ನನ್ನು ನಿಯೋಜಿಸಿಕೊಳ್ಳಲು ಉತ್ತರನಿಗೆ ತಿಳಿಸಲು ಕೇಳಿಕೊಂಡ. ಕೂಡಲೆ ದ್ರೌಪದಿಯು ಬೃಹನ್ನಳೆಯು ಅರ್ಜುನನ ಸಾರಥಿಯಾಗಿದ್ದವನು. ಧನುರ್ವಿದ್ಯೆಯಲ್ಲೂ

---

ವೃಕ್ಷೇಣೈತೇನ ರಾಜೇಂದ್ರ ಪ್ರಭಂಜನಸುತೋ ಬಲೀ ।
ತತ ಆಶ್ವಾಸಯತ್ ಕೃಷ್ಣಾಂ ಸ ವಿಮುಚ್ಯ ವಿಶಾಂಪತೇ ॥
ಉವಾಚ ಚ ಮಹಾಬಾಹುಃ ಪಾಂಚಾಲೀಂ ತತ್ರ ದ್ರೌಪದೀಮ್ ।
ಅಶ್ರುಪೂರ್ಣಮುಖೀಂ ದೀನಾಂ ದುರ್ಧರ್ಷಃ ಸ ವೃಕೋದರಃ ॥
ಏವಂ ತೇ ಭೀರು ವಧ್ಯಂತೇ ಯೇ ತ್ವಾಂ ಕ್ಲಿಶ್ಯಂತ್ಯನಾಗಸಮ್ ।
ಪ್ರೈಹಿ ತ್ವಂ ನಗರಂ ಕೃಷ್ಣೇ ನ ಭಯಂ ವಿದ್ಯತೇ ತವ ॥
ಅನ್ಯೇನಾಹಂ ಗಮಿಷ್ಯಾಮಿ ವಿರಾಟಸ್ಯ ಮಹಾನಸಮ್ ॥ -ಮ.ಭಾ.(ವಿ.ಪ./೨೩/೨೭-೩೧)

ಅವನ ಶಿಷ್ಯನಾದವನು[೧] ಎಂದು ತಿಳಿಸಿ ಅವನನ್ನು ಸಾರಥಿಯನ್ನಾಗಿ ಹೊಂದಲು ತಿಳಿಸಿದಳು. ಉತ್ತರನು ಆಗ ಅದಕ್ಕೆ ಸಮ್ಮತಿಸಿದಾಗ, ದ್ರೌಪದಿಯು ಅವನ ತಂಗಿ ಉತ್ತರೆಯನ್ನು ಬೃಹನ್ನಳೆಯನ್ನು ಪ್ರಾರ್ಥಿಸಿ ಕರೆತರಲು ತಿಳಿಸಿ, ಬೃಹನ್ನಳೆಯು ಸಾರಥಿಯಾದಲ್ಲಿ ಉತ್ತರಗೋಗ್ರಹಣದ ಮೋಚನೆ ಅತ್ಯಂತ ಖಚಿತ ಎಂದು ತಿಳಿಸಿದಳು[೨]. ಮುಂದೆ ನಡೆದದ್ದು ಹಾಗೆಯೇ.

ವನವಾಸಕಾಲದಲ್ಲಿ ಹೇಗೋ ಹಾಗೆ, ಅಜ್ಞಾತವಾಸಕಾಲದಲ್ಲೂ ಭೀಮನಿಂದ ನಡೆದ ಅಸುರಸಂಹಾರದ ಕಾರ್ಯವೇ ಪ್ರಧಾನ. ಅದರಲ್ಲಿ ಜೀಮೂತ ವಧೆ ಮೊದಲನೆಯದಾದರೆ, ಕೀಚಕ, ಉಪಕೀಚಕರ ವಧೆ ಆ ಬಳಿಕದ್ದು. ಕೀಚಕರ ವಧೆಯ ಪ್ರಸಂಗದಲ್ಲಂತು ದ್ರೌಪದಿಯದೇ ಮುಖ್ಯ ಪಾತ್ರ. ಹೀಗೆ ದ್ರೌಪದಿಯ ಪಾತ್ರ ಪ್ರತಿ ಹಂತದಲ್ಲೂ ಸಹ ಪ್ರಾಧಾನ್ಯವನ್ನೇ ಪಡೆಯುತ್ತದೆ ಎಂಬುದನ್ನು ಗಮನಿಸಬೇಕು. ಮುಂದೆ, ದಕ್ಷಿಣಗೋಗ್ರಹಣ ಪ್ರಸಂಗದಲ್ಲಿ ಗೋವುಗಳ ಹಾಗೂ ಸೆರೆಸಿಕ್ಕ ವಿರಾಟನ ಮೋಚನೆಯನ್ನು ಮಾಡುವ ಮೂಲಕ ಭೀಮ ಮಾಡಿದ ಭಗವತ್ಕಾರ್ಯ ಸಾಧನೆ ಅಪೂರ್ವವಾಗಿತ್ತು, ಅಪಾರವಾಗಿತ್ತು.

ಮುಂದೆ ನಡೆದ ಅಭಿಮನ್ಯು-ಉತ್ತರೆಯರ ವಿವಾಹ ಮಹೋತ್ಸವದಲ್ಲಿ ನೆರೆದಿದ್ದ ಉಭಯ ಪಕ್ಷದ ಸ್ತ್ರೀವೃಂದದಲ್ಲಿ ಸೌಂದರ್ಯಾದಿ ಗುಣಗಳಿಂದ ಎದ್ದು ಕಾಣುತ್ತಿದ್ದ ವ್ಯಕ್ತಿತ್ವ ದ್ರೌಪದಿಯದಾಗಿತ್ತು[೩]. ಇದು ದ್ರೌಪದಿಯ ಪಾತ್ರದ ವಿಶೇಷತೆಯ ಬಗ್ಗೆ ಬೆಳಕು ಚೆಲ್ಲುವ ಮತ್ತೊಂದು ಪ್ರಸಂಗ.

---

೧ ಅಥೈನಮುಪಸಂಗಮ್ಯ ಸ್ತ್ರೀಮಧ್ಯಾತ್ ಸಾ ತಪಸ್ವಿನೀ।
ವ್ರೀಡಮಾನೇವ ಶನಕೈರಿದಂ ವಚನಮಬ್ರವೀತ್ ॥
ಯೋಽಸೌ ಬೃಹದ್ವಾರಣಾಭೋ ಯುವಾ ಸುಪ್ರಿಯದರ್ಶನಃ।
ಬೃಹನ್ನಲೇತಿ ವಿಖ್ಯಾತಃ ಪಾರ್ಥಸ್ಯಾಸೀತ್ ಸ ಸಾರಥಿಃ॥
ಧನುಷ್ಯನವರಶ್ಚಾಸೀತ್ ತಸ್ಯ ಶಿಷ್ಯೋ ಮಹಾತ್ಮನಃ।
ದೃಷ್ಟಪೂರ್ವೋ ಮಯಾ ವೀರ ಚರಂತ್ಯಾ ಪಾಂಡವಾನ್ ಪ್ರತಿ॥
ಯದಾ ತತ್ ಪಾವಕೋ ದಾವಮದಹತ್ ಖಾಂಡವಂ ಮಹತ್।
ಅರ್ಜುನಸ್ಯ ತದಾಽನೇನ ಸಂಗೃಹೀತಾ ಹಯೋತ್ತಮಾಃ॥
ತೇನ ಸಾರಥಿನಾ ಪಾರ್ಥಃ ಸರ್ವಭೂತಾನಿ ಸರ್ವಶಃ।
ಅಜಯತ್ ಖಾಂಡವಪ್ರಸ್ಥೇ ನ ಹಿ ಯಂತಾಽಸ್ತಿ ತಾದೃಶಃ॥ – ಮ.ಭಾ.(ವಿ.ಪ./೩೬/೧೫-೧೯)

೨ ಯೇಯಂ ಕುಮಾರೀ ಸುಶ್ರೋಣೀ ಭಗಿನೀ ತೇ ಯವೀಯಸೀ।
ಅಸ್ಯಾಃ ಸ ವೀರ ವಚನಂ ಕರಿಷ್ಯತಿ ನ ಸಂಶಯಃ॥
ಯದಿ ವೈ ಸಾರಥಿಃ ಸ ಸ್ಯಾತ್ ಕುರೂನ್ ಸರ್ವಾನ್ ನ ಸಂಶಯಃ।
ಜಿತ್ವಾ ಗಾಶ್ಚ ಸಮಾದಾಯ ಧ್ರುವಮಾಗಮನಂ ಭವೇತ್॥ –ಮ.ಭಾ.(ವಿ.ಪ./೩೬/೨೧,೨೨)

೩ ವರ್ಣೋಪಪನ್ನಾಸ್ತಾ ನಾರ್ಯೋ ರೂಪವತ್ಯಃ ಸ್ವಲಂಕೃತಾಃ।
ಸರ್ವಾಸ್ತಾಽಭ್ಯಭವತ್ ಕೃಷ್ಣಾ ರೂಪೇಣ ಯಶಸಾ ಶ್ರಿಯಾ॥

# ದ್ರೌಪದಿಯ ಯುದ್ಧ ನಿಶ್ಚಯ

ಮಹಾಭಾರತದ ಕೇಂದ್ರಬಿಂದು ಕುರುಕ್ಷೇತ್ರಸಮರ. ವಿಶ್ವದ ಇತಿಹಾಸದಲ್ಲೇ ನ ಭೂತೋ ನ ಭವಿಷ್ಯತಿ ಎನ್ನಿಸಿದ ಘನಘೋರಸಂಗ್ರಾಮ ಅದು. ಕೇವಲ ಪರ್ವಗಳ ಲೆಕ್ಕದಲ್ಲೂ ಸಹ ಕುರುಕ್ಷೇತ್ರ ಸಮರದ್ದೇ ಸಿಂಹಪಾಲು. ಮಹಾಭಾರತದ ಉದ್ಯೋಗಪರ್ವದವರೆಗಿನ ಪಾಂಡವರ ಜೀವಿತಾವಧಿ ಯುಧಿಷ್ಠಿರನ ವಯಸ್ಸಿನ ಲೆಕ್ಕದಲ್ಲಿ ೭೨ ವರ್ಷಗಳು. ಅದರ ನಿರೂಪಣೆಗೆ ಮಹಾಭಾರತದಲ್ಲಿ ಮೊದಲ ಐದು ಪರ್ವಗಳು ಮೀಸಲಾಗಿವೆ. ಯುದ್ಧದ ಅನಂತರದ ಪಾಂಡವರ ಆಳ್ವಿಕೆಯ ಕಾಲ ೩೬ ವರ್ಷಗಳು. ಅದರ ನಿರೂಪಣೆಗೆ ಮಹಾಭಾರತದ ಎಂಟು ಪರ್ವಗಳು ಮೀಸಲಾಗಿವೆ. ಆದರೆ, ಕುರುಕ್ಷೇತ್ರ ಯುದ್ಧ ನಡೆದದ್ದು ಕೇವಲ ಹದಿನೆಂಟು ದಿವಸಗಳ ಕಾಲ. ಅದರ ನಿರೂಪಣೆಗಾಗಿ ಮಹಾಭಾರತದ ಐದು ಪರ್ವಗಳು ಮೀಸಲಾಗಿವೆ. ಇದರಿಂದ ಕುರುಕ್ಷೇತ್ರ ಯುದ್ಧವೇ ಮಹಾಭಾರತದ ಕೇಂದ್ರಬಿಂದು ಎಂದಾಗುವುದು.

ಆ ಕುರುಕ್ಷೇತ್ರ ಸಮರದಲ್ಲಿ ಒಟ್ಟು ಅಳಿದ ಸೇನೆ ೧೮ ಅಕ್ಷೋಹಿಣಿ. ಅದರಲ್ಲಿ ೧೧ ಅಕ್ಷೋಹಿಣಿ ಕುರುಸೇನೆಯಾಗಿತ್ತು. ಅದರಲ್ಲಿ ಭೀಷ್ಮ-ದ್ರೋಣಾದಿ ಕೆಲವು ಸಜ್ಜನರನ್ನು ಹೊರತುಪಡಿಸಿದರೆ ಉಳಿದವರದ್ದೇ ಸಿಂಹಪಾಲು. ಆ ೧೧ ಅಕ್ಷೋಹಿಣಿಯಲ್ಲಿ ೬ ಅಕ್ಷೋಹಿಣಿಗಿಂತ ಹೆಚ್ಚಿನ ಸೈನ್ಯ ಹತವಾದದ್ದು ಭೀಮಸೇನ ಒಬ್ಬನಿಂದಲೇ. ಅದರಲ್ಲೂ ಮಹಾಖಳರೆನ್ನಿಸಿದ ನೂರು ಕೌರವರನ್ನು ಸಹ ಸಂಹರಿಸಿದ್ದು ಭೀಮಸೇನನೊಬ್ಬನೆ. ಭೀಷ್ಮ, ದ್ರೋಣ, ಕರ್ಣ, ಶಲ್ಯ ಹಾಗೂ ಅಶ್ವತ್ಥಾಮ ಎಲ್ಲರೂ ವಿವಿಧ ಹಂತಗಳಲ್ಲಿ ಭೀಮನಿಂದ ಅಪಾರವಾದ ಪೆಟ್ಟು ತಿಂದವರು. ಇದರಿಂದ ತಿಳಿಯುವಂತೆ ಕುರುಕ್ಷೇತ್ರ ಯುದ್ಧದಲ್ಲಿ ಭೀಮಸೇನನದೇ ಪ್ರಧಾನ ಪಾತ್ರ. 'ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ' ಎಂಬ ಮಹಾಭಾರತದ ಮಾತು ಹೇಳಿರುವುದು ಇದನ್ನೇ. 'ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್' ಎಂಬ ಗೀತೆಯ ಮೊದಲ ಅಧ್ಯಾಯದಲ್ಲಿ ಬರುವ ದುರ್ಯೋಧನನ ಮಾತಿನಲ್ಲಿ ಈ ಅಂಶ ಸ್ಫುಟವಾಗಿಯೇ ಬಂದಿದೆ. ಅಂತಹ ಘೋರ ಸಮರದ ನಿಶ್ಚಯದ ರೂವಾರಿಗಳು ಭೀಮ-ದ್ರೌಪದಿಯರು. ವನಪರ್ವದಲ್ಲಿ ಭೀಮ-ದ್ರೌಪದಿಯರ ಉಪದೇಶದಿಂದಾಗಿಯೇ ಯುಧಿಷ್ಠಿರ ಈ ಸಮರವನ್ನು ಹಮ್ಮಿಕೊಳ್ಳುವ ಗಟ್ಟಿತನವನ್ನು ತೋರಿದ ಎಂಬ ವಿಷಯ ಬಂದಿದೆ.

***

ಯುದ್ಧನಿಶ್ಚಯಕ್ಕೆ ಶ್ರೀಕೃಷ್ಣ ತೆರಳಿದಾಗ ಯುಧಿಷ್ಠಿರಾದಿಗಳ ಅಭಿಪ್ರಾಯದಂತೆ ಸಂಧಾನಕ್ಕೆ ಅವಕಾಶವಿತ್ತು. ಭೀಮಸೇನ ಜನನಾಶವನ್ನು ತಪ್ಪಿಸಲೆಂದು ಸಂಧಿ ಆಗುವುದಾದಲ್ಲಿ

ವಿರೋಧವೇನೂ ಇಲ್ಲ ಎಂದ. ಶ್ರೀಕೃಷ್ಣನು ಭೀಮನ ಬಲವನ್ನು ಆಗ ಬಹಳವಾಗಿ ಹೊಗಳುತ್ತಾ ಆ ಯುದ್ಧದ ಭಾರ ಭೀಮನ ಮೇಲಿದೆ ಎಂದು ತಿಳಿಸಿದ[೧]. ಯುದ್ಧದ ಹೊರತು ಬೇರೊಂದು ಮಾರ್ಗವೇ ಇಲ್ಲ, ಸಂಧಿ ಸರ್ವಥಾ ಸಾಧ್ಯವಿಲ್ಲ[೨] ಎಂದು ಘಂಟಾಘೋಷವಾಗಿ ಸಾರಿದ ಹಿರಿಮೆ ದ್ರೌಪದಿಯದು. ಶ್ರೀಕೃಷ್ಣ ದ್ರೌಪದಿಯ ಮಾತನ್ನು ನಡೆಸುವುದಾಗಿ ವಚನವಿತ್ತೇ ರಾಯಭಾರ ಕಾರ್ಯವನ್ನು ವಹಿಸಿದ. ಎಂದರೆ ಭೀಮ-ದ್ರೌಪದಿಯರ ಯುದ್ಧನಿಶ್ಚಯ ಶ್ರೀಕೃಷ್ಣನ ಸಂಕಲ್ಪವೇ ಆಗಿತ್ತು. ಆತನ ಅವತಾರದ ಮುಖ್ಯ ಉದ್ದೇಶವು ಸಹ **ವಿನಾಶಯ ಚ ದುಷ್ಕೃತಾಂ** – ದುರ್ಜನರ ವಿನಾಶವೇ ಆಗಿತ್ತಲ್ಲವೇ? ರಾಯಭಾರದ ಫಲಶ್ರುತಿಯು ಸಹ ಅದೇ. ಇದರಿಂದ ಭೀಮಸೇನನ ನಂತರದ ದುಷ್ಟವಿನಾಶದ ಕಾರ್ಯದ ಶ್ರೇಯಸ್ಸಿನ ಬಹುಪಾಲು ದ್ರೌಪದಿಗೆ ಸಲ್ಲಬೇಕು ಎಂದಾಗುವುದು. ಮಹಾಭಾರತದ ದ್ರೌಪದಿಯ ಪಾತ್ರವನ್ನು ಒಬ್ಬ ಸಾಮಾನ್ಯ ಕುಟುಂಬದ ಯಜಮಾನಿಯ ಪಾತ್ರದಂತೆ ನೋಡುವುದು ವಿವೇಕವಲ್ಲ. ಅದು ಅಶರೀರವಾಣಿ ಸ್ಪಷ್ಟವಾಗಿ ತಿಳಿಸಿರುವಂತೆ ಸಮಸ್ತದುಷ್ಟಕ್ಷತ್ರಿಯರ ನಾಶಕ್ಕೆ ನಿಮಿತ್ತವಾಗಲೆಂದು ಅವತರಿಸಿದ ದೇವತಾಸ್ತ್ರೀಯ ದಿವ್ಯ ಕಥಾನಕ.

ದ್ರೌಪದಿಗೆ ದುರ್ಯೋಧನ ದುಃಶಾಸನರಿಂದಾದ ಅಪಚಾರ ವಿದ್ಯೆಯ ಅಧಿದೇವತೆಗೆ ದುಷ್ಟರಿಂದಾಗುವ ಅಪಚಾರಕ್ಕೆ ಸಂಕೇತ. ವಿದ್ಯೆ ಎಂದೂ ಅದನ್ನು ಸಹಿಸದು ಎಂಬ

---

೧ ಅಸ್ಮಿನ್ ಯುದ್ಧೇ ಭೀಮಸೇನ ತ್ವಯಿ ಭಾರಃ ಸಮಾಹಿತಃ ।
ಧೂರರ್ಜುನೇನ ವೋಢವ್ಯಾ ವೋಢವ್ಯ ಇತರೋ ಜನಃ ॥ -ಮ.ಭಾ.(ಉ.ಪ./೭೭/೧೮)

೨ ನ ಹಿ ಸಾಮ್ನಾ ನ ದಾನೇನ ಶಕ್ಯೋಽರ್ಥಸ್ತೇಷು ಕಂಚನ ।
ತಸ್ಮಾತ್ ತೇಷು ನ ಕರ್ತವ್ಯಾ ಕೃಪಾ ತೇ ಮಧುಸೂದನ ॥
ಸಾಮ್ನಾ ದಾನೇನ ವಾ ಕೃಷ್ಣ ಯೇ ನ ಶಾಮ್ಯಂತಿ ಶತ್ರವಃ ।
ಯೋಕ್ತವ್ಯಸ್ತೇಷು ದಂಡಃ ಸ್ಯಾಜ್ಜೀವಿತಂ ಪರಿರಕ್ಷತಾ ॥
ತಸ್ಮಾತ್ ತೇಷು ಮಹಾದಂಡಃ ಕ್ಷೇಪ್ತವ್ಯಃ ಕ್ಷಿಪ್ರಮಚ್ಯುತ ।
ತ್ವಯಾ ಚೈವ ಮಹಾಬಾಹೋ ಪಾಂಡವೈಃ ಸಹ ಸೃಂಜಯೈಃ ॥
ಏತತ್ ಸಮರ್ಥಂ ಪಾರ್ಥಾನಾಂ ತವ ಚೈವ ಯಶಸ್ಕರಮ್ ।
ಕ್ರಿಯಮಾಣಂ ಭವೇತ್ ಕೃಷ್ಣ ಕ್ಷತ್ರಸ್ಯ ಚ ಸುಖಾವಹಮ್ ॥
ಕ್ಷತ್ರಿಯೇಣ ಹಿ ಹಂತವ್ಯಃ ಕ್ಷತ್ರಿಯೋ ಲೋಭಮಾಸ್ಥಿತಃ ।
ಅಕ್ಷತ್ರಿಯೋ ವಾ ದಾಶಾರ್ಹ ಸ್ವಧರ್ಮಮನುತಿಷ್ಠತಾ ॥
ಅನ್ಯತ್ರ ಬ್ರಾಹ್ಮಣಾತ್ ತಾತ ಸರ್ವಪಾಪೇಷ್ವವಸ್ಥಿತಾತ್ ।
ಗುರುರ್ಹಿ ಸರ್ವವರ್ಣಾನಾಂ ಬ್ರಾಹ್ಮಣಃ ಪ್ರಸೃತಾಗ್ರಭುಕ್ ॥
ಯಥಾ ವಧ್ಯೇ ವಧ್ಯಮಾನೇ ಭವೇದ್ದೋಷೋ ಜನಾರ್ದನ ।
ಸ ವಧ್ಯಸ್ಯಾವಧೇ ದೃಷ್ಟ ಇತಿ ಧರ್ಮವಿದೋ ವಿದುಃ ॥ ..................
ಯದಿ ತೇಽಹಮನುಗ್ರಾಹ್ಯಾ ಯದಿ ತೇಽಸ್ತಿ ಕೃಪಾ ಮಯಿ ।
ಧಾರ್ತರಾಷ್ಟ್ರೇಷು ವೈ ಕೋಪಃ ಸರ್ವಃ ಕೃಷ್ಣ ವಿಧೀಯತಾಮ್ ॥
- ಮ.ಭಾ.(ಉ.ಪ./೮೨/೧೨-೧೮,೩೨)

ಸಂದೇಶವೇ ದ್ರೌಪದಿಯ ಯುದ್ಧನಿಶ್ಚಯದ ಹಿಂದಿನ ತತ್ತ್ವ. ಇದರಿಂದ ಧನಾದಿಗಳ ಬಗ್ಗೆ ನಡೆಯುವ ಅಪಚಾರಕ್ಕಿಂತಲೂ ಮಿಗಿಲಾದದ್ದು ವಿದ್ಯೆಗೆ ಆಗುವ ಅಪಚಾರ. ವಿದ್ಯೆಯೆಂದರೆ ಜ್ಞಾನ; ಜ್ಞಾನಕಾರ್ಯಕ್ಕೆ ಮಿಗಿಲಾದ ಸತ್ಸಾಧನೆ ಬೇರೊಂದಿಲ್ಲ. ಅದರಂತೆ ಅದಕ್ಕೆ ಕೆಡಕುಂಟುಮಾಡುವ ಕಾರ್ಯಕ್ಕಿಂತ ಮಿಗಿಲಾದ ದುಃಸಾಧನೆಯೂ ಬೇರೊಂದಿಲ್ಲ.

ಮಹಾಭಾರತ ಯುದ್ಧ ಮೇಲ್ನೋಟಕ್ಕೆ ರಾಜ್ಯಕ್ಕಾಗಿ ನಡೆದ ಯುದ್ಧ. ವಾಸ್ತವವಾಗಿ ಅದು ಧರ್ಮಯುದ್ಧ; ಇನ್ನೂ ಮುಖ್ಯವಾಗಿ ಅದು ವಿದ್ಯೆ–ಅವಿದ್ಯೆಗಳ ನಡುವೆ ನಡೆದ ಸಂಘರ್ಷ. ವಿದ್ಯೆ–ಅವಿದ್ಯೆಗಳು ಕತ್ತಲೆ–ಬೆಳಕುಗಳಿದ್ದಂತೆ. ಅವೆರಡರ ಮಧ್ಯೆ ಸಂಧಾನ ಅಶಕ್ಯ. ಕತ್ತಲೆ ಅಳಿದು ಬೆಳಕು ಬೆಳಗುವುದು ವಿದ್ಯೆಯ ವಿಜಯದ ಸಂಕೇತ. ದ್ರೌಪದಿಯ ಯುದ್ಧದ ದೀಕ್ಷೆ ವಿದ್ಯಾವೈಭವವನ್ನು ಎತ್ತಿಹಿಡಿಯುವ ಅಪೂರ್ವ ದೀಕ್ಷೆ ಎಂಬುದು ಇಲ್ಲಿಯ ತತ್ತ್ವ.

ಭೀಮ–ದ್ರೌಪದಿಯರು ತಿಳಿಸಿದಂತೆ ದುರ್ಯೋಧನಾದಿಗಳು ಯಾವುದೇ ಹಂತದಲ್ಲೂ ತಮ್ಮ ದುಷ್ಕಾರ್ಯದ ಬಗ್ಗೆ ಪರಿತಪಿಸಿದವರಲ್ಲ. ಅದನ್ನು ಸರಿಪಡಿಸಿಕೊಳ್ಳುವ ಯಾವ ಯೋಚನೆಯನ್ನೂ ಅವರು ಎಂದೂ ಮಾಡಿದವರಲ್ಲ. ಆದಾಗಿ ಒದಗಿಬಂದ ಅನೇಕ ಅಂತಹ ಸುಸಂದರ್ಭಗಳನ್ನು ಕೈಚೆಲ್ಲಿದ ಮಹಾಪಾತಕಿಗಳು ಅವರು. ಅವರು ಸಂಧಾನಕ್ಕೆ ಸಿದ್ಧರಿದ್ದು ದುರ್ಮಾರ್ಗವನ್ನು ತ್ಯಜಿಸುವ ಮನೋಭಾವವನ್ನು ಹೊಂದಿದ್ದಲ್ಲಿ ಮಾತ್ರ ಭೀಮ–ದ್ರೌಪದಿಯರ ಯುದ್ಧದ ಹಠ ಕೇವಲ ಹಠಮಾರಿತನದ ಪ್ರಸಂಗವಾಗುತ್ತಿತ್ತು. ಕೇವಲ ಪ್ರತಿಷ್ಠೆಗಾಗಿ ನಡೆದ ಜನನಾಶ ಎನ್ನಬಹುದಿತ್ತು. ಆದರೆ, ತನ್ನ ಅಂತ್ಯಕಾಲದಲ್ಲೂ ದುರ್ಯೋಧನ ತನ್ನದೇ ಸರಿ, ಕೃಷ್ಣ ಹಾಗೂ ಪಾಂಡವರದ್ದೇ ತಪ್ಪು ಎಂದು ಪುನಃ ಪುನಃ ನುಡಿದೇ ಸಾಯುತ್ತಾನೆ. ಸತ್ತ ಮೇಲೂ ಪಾಂಡವರ ಸಂತತಿ ಉಳಿಯಕೂಡದೆಂಬ ಹಠದಿಂದ ಅದರ ನಾಶದ ಕಾರ್ಯಕ್ಕೆ ಅಶ್ವತ್ಥಾಮರನ್ನು ನಿಯೋಜಿಸುತ್ತಾನೆ. ಆದ್ದರಿಂದ ದುರ್ಯೋಧನಾದಿಗಳ ವಿನಾಶ ಅವರ ದುಷ್ಟತನಕ್ಕೆ ತಕ್ಕ ಶಾಸ್ತಿ ಎನ್ನಬೇಕೆ ಹೊರತು ಭೀಮ–ದ್ರೌಪದಿಯರ ಹಠದ ಫಲ ಎಂದು ಸರ್ವಥಾ ತಿಳಿಯಕೂಡದು.

ದುಃಶಾಸನನವಧೆಯ ಸಂದರ್ಭದಲ್ಲಿ ಪಂಪಭಾರತ, ಕುಮಾರವ್ಯಾಸಭಾರತ ಕೃತಿಗಳನ್ನಷ್ಟೇ ಓದಿದ ಜನ ಭೀಮ–ದ್ರೌಪದಿಯರ ಬಗ್ಗೆ ತಪ್ಪಾಗಿ ತಿಳಿಯುವ ಸಾಧ್ಯತೆ ಇದೆ. ದುಃಶಾಸನನ್ನು ಸಂಹರಿಸಿದ ಬಳಿಕ ಭೀಮಸೇನ ಅವನ ದಂತಗಳನ್ನು ಕಿತ್ತಿ ಅವನ ರಕ್ತದಿಂದ ದ್ರೌಪದಿಯ ತಲೆಗೂದಲನ್ನು ಬಾಚುವುದು, ಅವಳ ಮುಡಿಯನ್ನು ಕಟ್ಟುವುದು ಮೊದಲಾದ ಸಂಗತಿಗಳು ತುಂಬಾ ಪ್ರಚಾರದಲ್ಲಿವೆ. ಅದು ಒಂದು ರೀತಿಯಲ್ಲಿ ಸಜ್ಜನಿಕೆಗೆ ಶೋಭಿಸದ ಅಸಭ್ಯ ವರ್ತನೆ ಎಂಬಂತೆ ತೋರುವುದು. ಆದರೆ ವಸ್ತುಸ್ಥಿತಿ ಹಾಗಿಲ್ಲ. ಮೂಲಭಾರತ ಸ್ಪಷ್ಟವಾಗಿ ತಿಳಿಸಿರುವಂತೆ ಯುದ್ಧರಂಗಕ್ಕೆ ದ್ರೌಪದಿ ಆಗಮಿಸಿಯೇ ಇರಲಿಲ್ಲ. ದುಃಶಾಸನನ ಸಂಹಾರದ ಸಮಯದಲ್ಲಿ ದ್ರೌಪದಿ ರಣರಂಗಕ್ಕೆ ಬರುವುದೂ ಇಲ್ಲ. ಭೀಮಸೇನ ದುಃಶಾಸನನ

ದಂತಪಂಕ್ತಿಯನ್ನು ಕಿತ್ತಿ ಅವನ ರಕ್ತದಿಂದ ದ್ರೌಪದಿಯ ತಲೆಗೂದಲನ್ನು ಬಾಚುವುದೂ ಇಲ್ಲ. ಇವೆಲ್ಲ ವೇಣೀಸಂಹಾರದ ಭಟ್ಟನಾರಾಯಣ ಹಾಗೂ ಪಂಪ, ಕುಮಾರವ್ಯಾಸ ಮೊದಲಾದ ಕವಿಗಳು ಕೊಟ್ಟಿರುವ ಕಾಲ್ಪನಿಕ ಚಿತ್ರ ಮಾತ್ರ. ಅವರ ಕಲ್ಪನೆಗಳು ಮಹಾಭಾರತವನ್ನು ಓದಿ ಅವರ ಮನಸ್ಸಿಗೆ ಬಂದ ದುರ್ಯೋಧನಾದಿಗಳ ವಿಕೃತ ವರ್ತನೆಯ ಬಗೆಗಿನ ಆಕ್ರೋಶದ ಫಲ ಎಂದು ತಿಳಿಯಬಹುದು. ಆದರೆ, ಭೀಮ-ದ್ರೌಪದಿಯರು ಸರ್ವಥಾ ಆ ರೀತಿಯಾದ ವಿಕೃತ ವರ್ತನೆಯನ್ನು ತೋರಿಸಿಲ್ಲ ಎಂಬುದು ಗಮನಿಸಲೇಬೇಕಾದ ದೊಡ್ಡ ಸತ್ಯ.

## ಯುದ್ಧದ ಬಳಿಕ ದ್ರೌಪದಿ

ಮಹಾಭಾರತ ಯುದ್ಧದ ಕೊನೆಯ ದಿನದ ಮಧ್ಯರಾತ್ರಿಯಲ್ಲಿ ನಡೆದ ಘಟನೆ ಅತ್ಯಂತ ದಾರುಣವಾದುದು. ತೊಡೆ ಮುರಿದುಕೊಂಡು ಬಿದ್ದಿದ್ದ ದುರ್ಯೋಧನ ಅಶ್ವತ್ಥಾಮರ ಸೌಹಾರ್ದದ ದುರುಪಯೋಗಪಡಿಸಿಕೊಂಡು ಅವರಿಗೆ ಸೇನಾಧಿ- ಪತಿ ಎಂದು ಪಟ್ಟಾಭಿಷೇಕ ಮಾಡಿ ಕಳುಹಿಸಿಕೊಡುತ್ತಾನೆ. ಪಾಂಡವರ ಸಂತತಿಯ ನಿರ್ಮೂಲನ ಮತ್ತು ತನ್ನ ಪತ್ನಿಯರಲ್ಲಿ ಅವರಿಂದ ಸಂತಾನೋತ್ಪಾದನೆ. ಇದು ಅವನ ಆ ಕಾರ್ಯದ ಉದ್ದೇಶವಾಗಿತ್ತು. ಅಶ್ವತ್ಥಾಮರು ಪಾಂಡವರ ಶಿಬಿರವನ್ನು ಪ್ರವೇಶಿಸಿ, ಅಳಿದುಳಿದಿದ್ದ ಸೈನ್ಯವನ್ನು, ಸೇನಾಧಿಪತಿಯಾದ ಧೃಷ್ಟದ್ಯುಮ್ನನನ್ನು, ಶಿಖಂಡಿಯನ್ನು, ಬಹಳ ಮುಖ್ಯವಾಗಿ ದ್ರೌಪದೀಪುತ್ರರಾದ ಉಪಪಾಂಡವರನ್ನು ಕಗ್ಗೊಲೆಗೈಯುತ್ತಾರೆ. ಶಿಬಿರಕ್ಕೆ ಅಗ್ನಿಸ್ಪರ್ಶ ಮಾಡಿಸಿ ಅಲ್ಲಿಯ ಸಮಸ್ತವನ್ನೂ, ಸಮಸ್ತರನ್ನೂ ಭಸ್ಮ ಮಾಡುತ್ತಾರೆ. ದ್ರೌಪದೀಪುತ್ರರ ತಲೆಗಳನ್ನು ಕತ್ತರಿಸಿ ದುರ್ಯೋಧನನಿಗೆ ತೋರಿಸಿದಾಗ, ಆ ಪರಮಪಾಪಿ ಅದಕ್ಕೆ ತುಂಬಾ ಸಂತಸವನ್ನು ವ್ಯಕ್ತಪಡಿಸಿ ಕೊನೆಯುಸಿರೆಳೆಯುತ್ತಾನೆ. ದುರ್ಯೋಧನನ ಈ ಪಾಪಕಾರ್ಯ ಗಮನಿಸಿದ ಯಾರೂ, ಅವನನ್ನು ಯಾವ ಅರ್ಥದಲ್ಲೂ ಸಹ, ಯಾವುದೇ ರೀತಿಯಲ್ಲೂ ಮೆಚ್ಚಲು ಸಾಧ್ಯವೇ ಇಲ್ಲ; ರಾವಣಾದಿಗಳನ್ನು ಸಹ ಮೀರಿಸಿದ ಮಹಾಪಾತಕಿ ಅವನು.

ಅಶ್ವತ್ಥಾಮರಿಂದ ನಡೆದ ಘೋರಕೃತ್ಯದ ವಿಷಯ ತಿಳಿದ ಕೂಡಲೇ ದ್ರೌಪದಿಯ ಕೋರಿಕೆಯಂತೆ ಭೀಮಸೇನನು ಅಶ್ವತ್ಥಾಮರ ನಿಗ್ರಹಕ್ಕೆ ಉದ್ಯುಕ್ತನಾಗುತ್ತಾನೆ; ಅಶ್ವತ್ಥಾಮರನ್ನು ಆಕ್ರಮಿಸಿ ಯುದ್ಧದಲ್ಲಿ ಸೋಲಿಸುತ್ತಾನೆ. ಹತಾಶರಾದ ಅಶ್ವತ್ಥಾಮ ಬ್ರಹ್ಮಶಿರೋಸ್ತ್ರವನ್ನು ಸಮಸ್ತಪಾಂಡವರು ಹಾಗೂ ಅವರ ಸಂತತಿಯ ವಿನಾಶಕ್ಕೆಂದು ಪ್ರಯೋಗಿಸುತ್ತಾರೆ. ಆ ವೇಳೆಗೆ ಶ್ರೀಕೃಷ್ಣನ ನೇತೃತ್ವದಲ್ಲಿ ಅಲ್ಲಿಗೆ ಆಗಮಿಸಿದ ಅರ್ಜುನನಿಂದ ಪ್ರತಿಬ್ರಹ್ಮಶಿರೋಸ್ತ್ರವು ಪ್ರಯೋಗಿಸಲ್ಪಟ್ಟು ಅವರೆಡರ ಮಧ್ಯ ಶ್ರೀವೇದವ್ಯಾಸರು ನಿಂತು ಲೋಕನಾಶವನ್ನು ತಪ್ಪಿಸುತ್ತಾರೆ. ಅವರ ಆದೇಶದಂತೆ ಅರ್ಜುನ, ತಾನು ಪ್ರಯೋಗಿಸಿದ್ದ ಬ್ರಹ್ಮಶಿರೋಸ್ತ್ರವನ್ನು ಉಪಸಂಹಾರಗೊಳಿಸುತ್ತಾನೆ. ಆದರೆ, ಅಶ್ವತ್ಥಾಮರಿಗೆ ಅದು ಸಾಧ್ಯವಾಗದೇ ಹೋದಾಗ ಶ್ರೀವೇದವ್ಯಾಸರ ಆದೇಶದಂತೆ ಅರ್ಜುನ ಅದನ್ನೂ

ಉಪಸಂಹಾರ ಮಾಡುತ್ತಾನೆ; ಕೇವಲ ಮಾತಿನಿಂದಾದರೂ ಆ ಅಸ್ತ್ರದ ಉಪಸಂಹಾರವನ್ನು ಮಾಡಲು ಅಶ್ವತ್ಥಾಮರಿಗೆ ತಿಳಿಸಿದಾಗ, ಅವರು ಪಾಂಡವರ ಹೊರತು ಉಳಿದ ಅವರ ಸಂತತಿ ನಾಶವಾಗಲಿ ಎಂದೇ ಹಠ ಹಿಡಿಯುತ್ತಾರೆ. ಶ್ರೀಕೃಷ್ಣ ಆಗ ಉತ್ತರೆಯ ಗರ್ಭ ಒಂದನ್ನಾದರೂ ಬ್ರಹ್ಮಶಿರೋಸ್ತ್ರದಿಂದ ಪಾರುಮಾಡಲು ತಿಳಿಸುವನು. ಅಶ್ವತ್ಥಾಮರು ಅದಕ್ಕೆ ಒಪ್ಪದೇ ಮುಖ್ಯವಾಗಿ ಅದನ್ನೇ ನಾಶಮಾಡುವ ಪಣವನ್ನು ತೊಡುತ್ತಾರೆ. ಆ ಸಮಯದಲ್ಲಿ ಅದನ್ನು ತಾನು ನಿಶ್ಚಿತವಾಗಿ ಸಂರಕ್ಷಿಸುವುದಾಗಿ ಶ್ರೀಕೃಷ್ಣ ನುಡಿದು, ಅಶ್ವತ್ಥಾಮರಿಗೆ ಶಾಪ ನೀಡುವನು; ಶ್ರೀವೇದವ್ಯಾಸರು ಅದಕ್ಕೆ ತಮ್ಮ ಸಮ್ಮತಿಯನ್ನು ಸೂಚಿಸುವರು; ಇದು ಮಹಾಭಾರತದಲ್ಲಿ ಬಂದಿರುವ ವಿಚಾರ.

ಅಶ್ವತ್ಥಾಮರನ್ನು ಬಂಧಿಸಿ ಅರ್ಜುನ ಅವರನ್ನು ತಮ್ಮ ಶಿಬಿರಕ್ಕೆ ಕರೆದೊಯ್ಯುವನು. ಭೀಮಸೇನ ಅವನನ್ನು ಕೊಲ್ಲಲು ಆಗ್ರಹಪಡಿಸುವನು. ದ್ರೌಪದೀ, ''ಗುರುಪುತ್ರನಾದ ಅವನನ್ನು ಸಂಹರಿಸುವುದು ಬೇಡ, ತಾನು ಐದು ಮಕ್ಕಳನ್ನು ಕಳೆದುಕೊಂಡು ಇರುವ ಸ್ಥಿತಿಗೆ ಅಶ್ವತ್ಥಾಮರ ತಾಯಿ ಕೃಪೀದೇವಿ ಗುರಿಯಾಗುವುದು ಬೇಡ. ಅವಳ ಗಂಡ ದ್ರೋಣರು ಸಹ ಈಗಾಗಲೇ ಮಡಿದಿರುವರು. ಇರುವ ಒಬ್ಬ ಮಗನನ್ನು ಸಹ ಕಳೆದುಕೊಂಡು ಕೃಪಿಯು ವ್ಯಥೆ ಪಡುವುದು ಬೇಡ'' ಎಂದು ಅಶ್ವತ್ಥಾಮರ ಸಂರಕ್ಷಣೆಯನ್ನು ಬಯಸುವಳು[೧]. ಮುಂದೆ ಶ್ರೀಕೃಷ್ಣನ ಆದೇಶದಂತೆ ಅಶ್ವತ್ಥಾಮರ ತಲೆಯ ಮೇಲಿದ್ದ ಅಪೂರ್ವ ಮಣಿಯನ್ನು ಕಿತ್ತುಕೊಂಡು ಅವರನ್ನು ಅಲ್ಲಿಂದ ಕಳುಹಿಸಿಕೊಡುವನು.

ಈ ಪ್ರಸಂಗವನ್ನು 'ಶ್ರೀಮದ್ಭಾಗವತಪುರಾಣ' ನಿರೂಪಿಸಿದೆ. ಅದು ಕನಸಿನಲ್ಲಿ ನಡೆದ ಘಟನೆ ಎಂಬುದಾಗಿ ಸ್ಕಂದಪುರಾಣ ನೀಡಿರುವ ಸಮನ್ವಯವನ್ನು ಶ್ರೀಮನ್ಮಧ್ವಾಚಾರ್ಯರು ತಮ್ಮ 'ಶ್ರೀಮದ್ಭಾಗವತತಾತ್ಪರ್ಯನಿರ್ಣಯ'ದಲ್ಲಿ ಸ್ಫುಟಪಡಿಸಿರುವರು. ಇಲ್ಲಿ ಕಾಣುವ

೧ ಉವಾಚಾಸಹಂತ್ಯಸ್ಯ ಬಂಧನಾನಯನಂ ಸತೀ।
ಮುಚ್ಯತಾಮ್ಮುಚ್ಯತಾಮೇಷ ಬ್ರಾಹ್ಮಣೋ ನಿತರಾಂ ಗುರುಃ॥
ಸರಹಸ್ಯೋ ಧನುರ್ವೇದಃ ಸವಿಸರ್ಗೋಪಸಂಯಮಃ।
ಅಸ್ತ್ರಗ್ರಾಮಂ ಚ ಭವತಾ ಶಿಕ್ಷಿತೋ ಯದನುಗ್ರಹಾತ್॥
ಸ ಏಷ ಭಗವಾನ್ ದ್ರೋಣಃ ಪ್ರಜಾರೂಪೇಣ ವರ್ತತೇ।
ತಸ್ಯಾತ್ಮನೋಽರ್ಧಂ ಪತ್ನ್ಯಾಸ್ತೇ ನಾನ್ವಗಾದ್ವೀರಸೂಃ ಕೃಪೀ॥
ತದ್ಧರ್ಮಜ್ಞ ಮಹಾಭಾಗ ಭವದ್ಭಿಃ ಕೌರವಂ ಕುಲಮ್।
ವೃಜಿನಂ ನಾರ್ಹತಿ ಪ್ರಾಪ್ತುಂ ಪೂಜ್ಯಂ ವಂದ್ಯಮಭೀಕ್ಷ್ಣಶಃ॥
ಮಾ ರೋದೀದಸ್ಯ ಜನನೀ ಗೌತಮೀ ಪತಿದೇವತಾ।
ಯಥಾಽಹಂ ಮೃತವತ್ಸಾಽಽರ್ತಾ ರೋದಿಮ್ಯಶ್ರುಮುಖೀ ಮುಹುಃ॥
ಯೈಃ ಕೋಪಿತಂ ಬ್ರಹ್ಮಕುಲಂ ರಾಜನ್ಯೈರಕೃತಾತ್ಮಭಿಃ।
ತತ್ಕುಲಂ ಪ್ರದಹತ್ಯಾಶು ಸಾನುಬಂಧಂ ಶುಚಾಽರ್ಪಿತಮ್॥

- ಶ್ರೀಮದ್ಭಾಗವತ (೧/೭/೪೩-೪೮)

ದ್ರೌಪದಿಯ ಮಾತೃಹೃದಯ, ಅಪಾರಲೋಕ ಕಾರುಣ್ಯ ಬಣ್ಣನೆಗೆ ಮೀರಿದ್ದು. ತನ್ನ ಐವರು ಮಕ್ಕಳನ್ನು ಕಗ್ಗೊಲೆಗೈದ ಅಶ್ವತ್ಥಾಮರನ್ನು ಕ್ಷಮಿಸಿಬಿಡುವ ದ್ರೌಪದಿಯ ಔದಾರ್ಯ ಅತ್ಯಂತ ಅಪೂರ್ವವಾದುದು. ಕೃಪಿಯ ಸ್ಥಿತಿಯನ್ನು ಅರ್ಥಮಾಡಿಕೊಳ್ಳುವ ಅವಳ ಮಾತೃಹೃದಯವು ಸಹ ಅತ್ಯಂತ ಅಭಿನಂದನೆಗೆ ಪಾತ್ರವಾದುದು. ದ್ರೌಪದಿಯು ಸೇಡಿನ ಸ್ವಭಾವದ ಮಹಿಳೆಯಾಗಿದ್ದರೆ ಅಶ್ವತ್ಥಾಮರ ಅಳಿವನ್ನು ಬಯಸದೇ ಇರುತ್ತಿರಲಿಲ್ಲ. ದುರ್ಯೋಧನಾದಿಗಳ ನೂರಾರು ಪತ್ನಿಯರ ಬಗ್ಗೆ ಕನಿಕರ ತೋರಿಸದ ದ್ರೌಪದಿಯು, ಒಬ್ಬ ಕೃಪಿಯ ಬಗ್ಗೆ ತೋರುವಳು; ನೂರಾರು ಕೌರವರ ಬಗ್ಗೆ ತೋರಿಸದ ಕನಿಕರವನ್ನು ಒಬ್ಬ ಅಶ್ವತ್ಥಾಮರ ಬಗ್ಗೆ ತೋರುವುದು ಅತ್ಯಂತ ಗಮನಿಸಬೇಕಾದ ಸಂಗತಿ. ಕೌರವರಲ್ಲಿ ಇರುವ ಕ್ರೌರ್ಯ, ವಂಚನೆ ಮೊದಲಾದ ದೋಷಗಳು ಅಕ್ಷಮ್ಯ. ಆ ದೋಷ ಅವರ ಸ್ವಭಾವವೇ ಆಗಿತ್ತು. ಆದ್ದರಿಂದ ಅವರಿಗೆ ಕನಿಕರ ತೋರುವ ಅಗತ್ಯ ಇರಲಿಲ್ಲ. ಆದರೆ, ಅಶ್ವತ್ಥಾಮರದು ದುರ್ಯೋಧನಾದಿಗಳ ಸಂಪರ್ಕದಿಂದ ಬಂದಿದ್ದ ಔಪಾಧಿಕವಾದ ಅಪರಾಧ. ಅದನ್ನು ಗಮನಿಸಿಯೇ ದ್ರೌಪದೀ ಅವರ ಬಗ್ಗೆ ಕನಿಕರವನ್ನು ತೋರಿದಳು. ವನವಾಸ ಕಾಲದಲ್ಲಿ ಯುಧಿಷ್ಠಿರನಿಗೆ ಕರ್ತವ್ಯಪ್ರಜ್ಞೆಯನ್ನು ಬೋಧಿಸುವಾಗ ಕಂಡುಬರುವ ಅಪಾರವಾದ ವೈದುಷ್ಯ, ಧರ್ಮನಿಷ್ಠೆಗಳನ್ನು ಇಲ್ಲಿ ಮತ್ತೊಮ್ಮೆ ಗಮನಿಸಬಹುದು. ಇಂತಹ ಸೂಕ್ಷ್ಮ ವಿವೇಚನೆಯ ಬಗ್ಗೆ ಗಮನಹರಿಸದ ವಿಮರ್ಶಕರು ದ್ರೌಪದಿಯನ್ನು ಹಠಮಾರಿ ಹೆಣ್ಣು, ರಣಚಂಡಿ ಮೊದಲಾಗಿ ಕರೆದರೆ ಅದು ಅವರ ಅವಿವೇಕವೇ ಹೊರತು ದ್ರೌಪದಿಯ ತಪ್ಪೇನಲ್ಲ.

ಮಹಾಭಾರತದಲ್ಲಿ ಬರುವ ನಿರೂಪಣೆಯಂತೆ ಅಶ್ವತ್ಥಾಮರು ತಮ್ಮ ತಲೆಯ ಮೇಲಿದ್ದ ಹಸಿವು, ಬಾಯಾರಿಕೆಗಳನ್ನು ಕಳೆಯುವ, ಕತ್ತಲೆಯ ಅಪಾಯವನ್ನು ತಪ್ಪಿಸುವ, ರೋಗರುಜಿನಗಳು ಬರದಂತೆ ಮಾಡುವ, ಮುಪ್ಪಿಗೂ ಅವಕಾಶ ನೀಡದಂತಹ ಅಪೂರ್ವವಾದ ಮಣಿಯನ್ನು ಶ್ರೀವೇದವ್ಯಾಸದೇವರ ಆದೇಶದಂತೆ ತಾವೇ ಕಿತ್ತಿ ತಾವು ಮುಖ್ಯವಾಗಿ ಪರಾಭವಗೊಂಡಿದ್ದ ಭೀಮಸೇನನ ಕೈಗೆ ಒಪ್ಪಿಸಿದರು. ಅದನ್ನು ಭೀಮಸೇನ ದ್ರೌಪದಿಗೆ ನೀಡಿದ. ತನ್ನ ಪುತ್ರರನ್ನು ಕಳೆದುಕೊಂಡಿದ್ದ ದ್ರೌಪದಿಗೆ ಅದು ಒಂದು ರೀತಿಯ ತಾತ್ವಿಕವಾದ ಉಪಶಮನದ ಕಾರ್ಯವಾಗಿತ್ತು. ಆದರೆ, ದ್ರೌಪದೀ ಅದನ್ನು ಯುಧಿಷ್ಠಿರನಿಗೆ ಒಪ್ಪಿಸಿ ಅಂತಹ ನಿಧಿ, ಮೊದಲಾದ ಅಪೂರ್ವ ವಸ್ತುಗಳು ರಾಜನ ಸ್ವತ್ತು ಎಂಬ ನಿಯಮವನ್ನು ಪಾಲಿಸಿದಳು. ಅದನ್ನು ತನ್ನ ಕಿರೀಟದಲ್ಲಿ ಧರಿಸಿದ ಯುಧಿಷ್ಠಿರ ಚಂದ್ರನಂತೆ ಶೋಭಿಸಿದ ಎಂಬ ಮಾತು ಮಹಾಭಾರತದಲ್ಲಿದೆ[1].

---

೧ ಕೇವಲಾನೃಣ್ಯಮಾಪ್ತಾಽಸ್ಮಿ ಗುರುಪುತ್ರೋ ಗುರುರ್ಮಮ।
ಶಿರಸ್ಯೇತಂ ಮಣಿಂ ರಾಜಾ ಪ್ರತಿಬಧ್ನಾತು ಭಾರತ॥
ತಂ ಗೃಹೀತ್ವಾ ತತೋ ರಾಜಾ ಶಿರಸ್ಯೇವಾಕರೋತ್ ತದಾ।
ಗುರೋರುಚ್ಛಿಷ್ಟಮಿತ್ಯೇವ ದ್ರೌಪದ್ಯಾ ವಚನಾದಪಿ॥
ತತೋ ದಿವ್ಯಂ ಮಣಿವರಂ ಶಿರಸಾ ಧಾರಯನ್ ಪ್ರಭುಃ।
ಶುಶುಭೇ ಸ ತದಾ ರಾಜಾ ಸಚಂದ್ರ ಇವ ಪರ್ವತಃ॥ -ಮ.ಭಾ.(ಸೌ.ಪ./೧೬/೩೪-೩೬)

ಶ್ರೀಭೀಮಸೇನನಿಗೆ ಲಭಿಸಿದ ಅಪೂರ್ವ ಮಣಿ ಹೀಗೆ ಅವರ ಅಣ್ಣ ಯುಧಿಷ್ಠಿರನಿಗೆ ತಲುಪಿತ್ತು. ಶ್ರೀಕೃಷ್ಣನು ಸಹ ಶಂಖಚೂಡ ಎಂಬ ಯಕ್ಷನನ್ನು ಸಂಹರಿಸಿ ಅವನ ತಲೆಯ ಮೇಲಿದ್ದ ಇಂತಹುದೇ ಅಪೂರ್ವ ಮಣಿಯನ್ನು ತನ್ನ ಅಣ್ಣ ಬಲರಾಮನಿಗೆ ನೀಡಿದ ಶ್ರೀಮದ್ಭಾಗವತದ ಪ್ರಸಂಗವನ್ನು ಇದು ಹೋಲುವುದು. ದ್ರೌಪದಿಯು ಪುಷ್ಪ ಮಣಿ ಮೊದಲಾದವುಗಳಿಗೆ ಆಸೆ ಪಡದ ಮಹಾಮಹಿಳೆ ಎಂಬುದಕ್ಕೂ ಈ ಪ್ರಸಂಗ ನಿದರ್ಶನ.

## ಸ್ತ್ರೀಪರ್ವದಲ್ಲಿ ದ್ರೌಪದೀ

ಸ್ತ್ರೀಪರ್ವದಲ್ಲಿ ಶ್ರೀವೇದವ್ಯಾಸರು ಗಾಂಧಾರಿ ಮೊದಲಾದ ಸಮಸ್ತರನ್ನು ಸಹ ಪಾಂಡವರ ಸಮೇತವಾಗಿ ಕುರುಕ್ಷೇತ್ರದ ರಣರಂಗಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ಛಿನ್ನ-ಭಿನ್ನವಾದ ಕೌರವರ ದೇಹಗಳನ್ನು ಗಾಂಧಾರಿ ಕಂಡಳು. ಆಗ ಅದಕ್ಕೆ ಅಗತ್ಯವಾದ ದಿವ್ಯದೃಷ್ಟಿಯನ್ನು ಶ್ರೀವೇದವ್ಯಾಸರು ಅವಳಿಗೆ ನೀಡಿದರು. ತನ್ನ ಸೊಸೆಯಂದಿರು ತಮ್ಮ ಗಂಡಂದಿರ ಶವಗಳನ್ನು ತಬ್ಬಿಕೊಂಡು ಗೋಳಿಡುವ ದೃಶ್ಯವನ್ನು ಶ್ರೀಕೃಷ್ಣನು ದ್ರೌಪದಿಗೆ ತೋರಿಸಿ, ಪಾಂಡವರು ವನವಾಸದಲ್ಲಿದ್ದಾಗ ದ್ರೌಪದಿಗೆ ತಾನು ನೀಡಿದ್ದ ವಚನವನ್ನು ಸತ್ಯಮಾಡಿ ತೋರಿಸಿದ. ಶ್ರೀಕೃಷ್ಣನು ದ್ರೌಪದಿಯ ಮೇಲೆ ಇರಿಸಿದ್ದ ಅಪಾರ ವಾತ್ಸಲ್ಯಕ್ಕೆ ಮತ್ತು ದ್ರೌಪದಿಯ ಕಾರ್ಯ ಅತ್ಯಂತ ಧಾರ್ಮಿಕವಾದ ನಡವಳಿಕೆಯಾಗಿತ್ತು ಎಂಬ ತತ್ತ್ವಕ್ಕೆ ಇದು ಅತ್ಯಂತ ಅಪೂರ್ವವಾದ ನಿದರ್ಶನ. ವಿದ್ಯೆಗಾದ ಅವಮಾನಕ್ಕೆ ಯೋಗ್ಯವಾದ ಶಿಕ್ಷೆ ಅದಾಗಿತ್ತು ಎಂಬುದು ಇದರ ಭಾವ.

## ಮಹಾರಾಣಿಯಾಗಿ ದ್ರೌಪದಿ

ಪಾಂಡವರು ಮರಳಿ ರಾಜ್ಯವನ್ನು ಪಡೆದರು. ಯುಧಿಷ್ಠಿರನನ್ನು ಮಹಾರಾಜನನ್ನಾಗಿ, ಭೀಮಸೇನನನ್ನು ಯುವರಾಜನನ್ನಾಗಿ ಅಭಿಷೇಕಿಸಿ, ಶ್ರೀಕೃಷ್ಣ ತನ್ನ ಅವತಾರ ಧರ್ಮ-ಸಂಸ್ಥಾಪನೆಗೆಂದೇ ಎಂಬುದನ್ನು ಸತ್ಯಮಾಡಿ ತೋರಿಸಿದ. ಯುಧಿಷ್ಠಿರನು ರಾಜ್ಯವನ್ನು ಒಪ್ಪಿಕೊಂಡರೂ ಸಹ ತಾನು ಮಾಡಿದ ಬಂಧುಹತ್ಯೆಯ ಬಗ್ಗೆ ತೀವ್ರ ಪಶ್ಚಾತ್ತಾಪಕ್ಕೊಳಗಾಗಿ ರಾಜ್ಯತ್ಯಾಗಕ್ಕೆ ಮನಸ್ಸು ಮಾಡುತ್ತಾನೆ. ಆಗ ಅವನಿಗೆ ಹಿತೋಕ್ತಿಯನ್ನು ತಿಳಿಸಿದವರಲ್ಲಿ ಭೀಮಸೇನ, ದ್ರೌಪದೀ ಮೊದಲಾದವರು ಮುಖ್ಯರು. ಶ್ರೀಕೃಷ್ಣವೇದವ್ಯಾಸರು ಅವರ ಮಾತನ್ನು ಅನುಮೋದಿಸಿ ಯುಧಿಷ್ಠಿರನಿಗೆ ರಾಜ್ಯತ್ಯಾಗ ಅನಗತ್ಯ ಎಂದು ತಿಳಿಸಿದರು. ಆ ಸಮಯದಲ್ಲಿ ದ್ರೌಪದಿಯು ಯುಧಿಷ್ಠಿರನಿಗೆ ನೀಡುವ [೧] ಉಪದೇಶದಲ್ಲಿ ಅವಳ ಜ್ಞಾನದ

---

೧ ಪ್ರಶಾಧಿ ಪೃಥಿವೀಂ ದೇವೀಂ ಪ್ರಜಾ ಧರ್ಮೇಣ ಪಾಲಯನ್ ।
ಸಪರ್ವತವನದ್ವೀಪಾಂ ಮಾ ರಾಜನ್ ವಿಮನಾ ಭವ ॥
ಯಜಸ್ವ ವಿವಿಧೈರ್ಯಜ್ಞೈರ್ಯುಧ್ಯಸ್ವಾರೀನ್ ಪ್ರಯಚ್ಛ ಚ ।

ಎತ್ತರ, ಅಪಾರ ಕರ್ತವ್ಯಪ್ರಜ್ಞೆ ಮೊದಲಾದ ಅನೇಕ ಗುಣಗಳು ಸ್ಪಷ್ಟವಾಗಿ ಮೂಡಿಬಂದಿವೆ. ದ್ರೌಪದಿಯನ್ನು ಒಬ್ಬ ಸಾಮಾನ್ಯಗೃಹಿಣಿಯಂತೆ ವಿಮರ್ಶಿಸುವ ಆಧುನಿಕರು ಇಂತಹ ಪ್ರಸಂಗಗಳನ್ನು ಗಮನಿಸಿ ತಮ್ಮ ತಪ್ಪನ್ನು ತಿದ್ದಿಕೊಳ್ಳುವ ಅಗತ್ಯವಿದೆ.

## ಭೀಮಪತ್ನಿ ದ್ರೌಪದಿ

ಯುದ್ಧದ ಬಳಿಕದ ಪಾಂಡವರ ಜೀವನದಲ್ಲಿ ದ್ರೌಪದಿಯು ನೆಲೆಸಿದ್ದು ಭೀಮನಪತ್ನಿಯಾಗಿ ಮಾತ್ರ. ಆ ಮುನ್ನ ತನ್ನ ದೇಹದಲ್ಲಿ ಶಚಿ, ಶ್ಯಾಮಲಾ ಹಾಗೂ ಉಷಾ ಎಂಬ ಇತರ ದೇವತಾಸ್ತ್ರೀಯರ ಆವೇಶವಿರುವವರೆಗೂ ಸಹ ಅವರೊಂದಿಗೆ ಇದ್ದ ದ್ರೌಪದಿ ಮುಖ್ಯವಾಗಿ ಭಾರತೀ. ಇತರ ದೇವತೆಗಳ ಆವೇಶ ಅವಳ ದೇಹದಲ್ಲಿ ಮರೆಯಾಗುತ್ತಿದ್ದಂತೆ ಅವರ ಪತಿಯರ ಸಂಪರ್ಕದಿಂದ ದ್ರೌಪದಿ ದೂರಾಗುತ್ತಿದ್ದಳು. ಪ್ರಾಯಃ ಒಬ್ಬ ಪುತ್ರ [೧]ಜನಿಸುವವರೆಗೆ ಮಾತ್ರ ನಕುಲ-ಸಹದೇವರೊಂದಿಗೆ ದ್ರೌಪದಿಯ ವಾಸ. ಅಲ್ಲಿಗೆ ನಕುಲ-ಸಹದೇವರ ಸಂಪರ್ಕದಿಂದ ದ್ರೌಪದಿ ದೂರಾದಳು. ತದನಂತರ ಕೆಲವು ದಿನಗಳ ಬಳಿಕ ಶ್ಯಾಮಲಾದೇವಿಯ ಆವೇಶ ಮರೆಯಾಗಿ ಯುಧಿಷ್ಠಿರನಿಂದಲೂ ದ್ರೌಪದೀ ದೂರ ಉಳಿದಳು. ಕೊನೆಗೆ ಶಚೀ ಆವೇಶವು ಮರೆಯಾದ ಮೇಲೆ ಅರ್ಜುನನಿಂದಲೂ ದೂರವಾದಳು. ತಾನು ಮುಖ್ಯವಾಗಿ ಭಾರತೀ. ಭೀಮಸೇನ ಭಾರತೀರಮಣನಾದ ವಾಯು. ಆದ್ದರಿಂದ ಅವರಿಬ್ಬರು ನಿತ್ಯದಂಪತಿಗಳಾಗಿ ಶೋಭಿಸಿದರು[೨].

ದ್ರೌಪದಿಯ ದೇಹದಲ್ಲಿನ ತಮ್ಮ ನಿಯತಪತ್ನಿಯರ ಆವೇಶ ದೂರವಾಗುತ್ತಿದ್ದಂತೆ ನಕುಲ-ಸಹದೇವರು ಹಾಗೂ ಅರ್ಜುನ ದ್ರೌಪದಿಯಲ್ಲಿ ಅತ್ತಿಗೆ ಎಂಬ ಭಾವವನ್ನೇ ಹೊಂದಿದರು; ಯುಧಿಷ್ಠಿರ ತಮ್ಮನಾದ ಭೀಮನ ಪತ್ನಿ ಎಂದಷ್ಟೇ ಭಾವಿಸಿದ.

---

ಧನಾನಿ ಭೋಗಾನ್ ವಾಸಾಂಸಿ ದ್ವಿಜಾತಿಭ್ಯೋ ನೃಪೋತ್ತಮ ॥

– ಮ.ಭಾ.(ಶಾಂತಿಪರ್ವ/೧೪/೩೮,೩೯)

೧ ಹಿಡಿಂಬೆಯ ಪ್ರಸಂಗದಲ್ಲಿ ಶ್ರೀವೇದವ್ಯಾಸರು ಅವಳಿಗೆ ಭೀಮನೊಂದಿಗೆ ಒಬ್ಬ ಪುತ್ರ ಜನಿಸುವವರೆಗೆ ಮಾತ್ರ ನೆಲೆಸುವ ಮೂಲಕ ಶಾಪವಿಮೋಚನೆಗೆ ಅನುವು ಮಾಡಿಕೊಟ್ಟ ಪ್ರಸಂಗದ ಹಿನ್ನೆಲೆಯಲ್ಲಿ ಇದು ಸಮಂಜಸವೆನ್ನಿಸುವುದು. ಪ್ರಸ್ತುತ ದ್ರೌಪದೀದೇಹದಲ್ಲಿ ನೆಲೆಸಿದ್ದ ದೇವತಾಸ್ತ್ರೀಯರಿಗೂ, ಬ್ರಹ್ಮದೇವರ ಶಾಪವಿದ್ದ ಹಿನ್ನೆಲೆಯಲ್ಲಿ ಇದು ಸ್ವರಸವೆನ್ನಿಸುವ ವಿಚಾರ.

೨ ಕೃಷ್ಣಾ ಚ ಪಾರ್ಥಾಂಶ್ಚತುರೋ ವಿಹಾಯ ಸುವ್ಯಕ್ತಸಾರಸ್ವತಶುದ್ಧಭಾವಾ ।
ರರಾಜ ರಾಜಾವರಜೇನ ನಿತ್ಯಮನನ್ಯಯೋಗೇನ ಶಿಖೇವ ವಹ್ನೇಃ ॥

ಪ್ರೀತ್ಯೈವ ವಿಜ್ಞಾನಯುಜಾಽನ್ಯಪಾರ್ಥೈಃ ಸಂವಾದತಃ ಪರಿಹೃತಾ ಗತಭಾವಿಕಾಲೇ ।
ಅಪಿ ಸ್ವಕೀಯಂ ಪತಿಮೇವ ಭೀಮಮವಾಪ್ಯ ಸಾ ಪರ್ಯಚರನ್ಮುದೈವ ॥

–ಮ.ಭಾ.ತಾ.ನಿ.(೩೦/೮,೯)

ವಿರಾಟಪರ್ವದಲ್ಲಿ ಅಜ್ಞಾತವಾಸವನ್ನು ಪ್ರಾರಂಭಿಸುವ ಮುನ್ನ ದ್ರೌಪದಿಯ ಬಗ್ಗೆ ಯುಧಿಷ್ಠಿರ ಆಡುವ ಮಾತುಗಳು ಈ ಸಂದರ್ಭದಲ್ಲಿ ತುಂಬಾ ಗಮನಾರ್ಹವೆನ್ನಿಸುತ್ತವೆ. ದ್ರೌಪದಿಯನ್ನು ನಾವು ತಾಯಿಯಂತೆ, ಹಿರಿಯ ಅಕ್ಕನಂತೆ ಸುರಕ್ಷಿತವಾಗಿ ನೋಡಿಕೊಳ್ಳಬೇಕಿದೆ[೧]. ಗೌರವದಿಂದ ಕಾಣಬೇಕಿದೆ ಎಂಬ ಅವನ ಮಾತಿನಲ್ಲಿ ಉಳಿದವರು ದ್ರೌಪದಿಯನ್ನು ಎಂತಹ ಪೂಜ್ಯ ಭಾವದಿಂದ ನೋಡುತ್ತಿದ್ದರು ಎಂಬುದಕ್ಕೆ ಪುರಾವೆ ದೊರೆಯುತ್ತದೆ.

ದ್ರುಪದರಾಜನ ಪುತ್ರಿ ದ್ರೌಪದಿಯಾಗಿ ಹಾಗೂ ಕಾಶಿರಾಜನ ಪುತ್ರಿ ಕಾಳಿಯಾಗಿ ಎರಡು ರೂಪದಿಂದ ಭಾರತೀದೇವಿ ಭೀಮಪತ್ನಿಯಾಗಿ ನೆಲೆಸಿದ್ದಳು. ಭೀಮನಿಗೆ ಹಿಡಿಂಬೆ ಹಾಗೂ ದೇವಕಿಯ ಇನ್ನೊಬ್ಬ ಪುತ್ರಿಯಾದ ದೇವಿ ಎಂಬ ಇನ್ನಿಬ್ಬರಲ್ಲದೇ, ಜಲಾಭಿಮಾನಿಗಳು ಆದ ಹತ್ತು ಜನ ಹಾಗೂ ದಿಗಭಿಮಾನಿಗಳಾದ ಹತ್ತು ಜನ, ಒಟ್ಟಾಗಿ ಇಪ್ಪತ್ತನಾಲ್ಕು ಜನ ಪತ್ನಿಯರಿದ್ದರು. ಶ್ರೀಕೃಷ್ಣನ ಸಕಲಪತ್ನಿಯರಲ್ಲೂ ಸಹ ರಮಾವೇಶವಿದ್ದಂತೆ ಭೀಮನ ಸಕಲಪತ್ನಿಯರಲ್ಲೂ ಭಾರತೀದೇವಿಯ ಆವೇಶವಿದ್ದಿತು[೨]. ಶ್ರೀಕೃಷ್ಣನು ಕೇವಲ ರಮಾಪತಿ ಎನ್ನಿಸಿದಂತೆ, ಶ್ರೀಭೀಮಸೇನ ಕೇವಲ ಭಾರತೀಪತಿ ಎನ್ನಿಸಿದ ಎಂಬುದು ಗಮನಿಸಬೇಕಾದ ಸಂಗತಿ[೩].

ಮೇಲ್ನೋಟಕ್ಕೆ ಐವರ ಪತ್ನಿ ಎಂದು ತೋರುವ ದ್ರೌಪದಿಯ ಬಗ್ಗೆ ಈ ಮೊದಲೇ ತಿಳಿಸಿದಂತೆ ಸೂಕ್ತವಾದ ಚಿಂತನೆ ಇತರರಿಂದ ನಡೆದಿಲ್ಲ. ಅದರ ರಹಸ್ಯವನ್ನು ಬೇಧಿಸುವಲ್ಲಿ ಮಹಾಭಾರತದ ಅಧ್ಯಯನಕ್ಕಿಳಿದ ಯಾರೂ ಯಶಸ್ಸನ್ನು ಕಂಡಿಲ್ಲ. ಪಂಪ ಅದರ ಒಗಟನ್ನು ಬಿಡಿಸಲಾಗದೇ ದ್ರೌಪದೀ ಕೇವಲ ಅರ್ಜುನನ ಪತ್ನಿ ಎಂಬುದಾಗಿ ತನ್ನ 'ವಿಕ್ರಮಾರ್ಜುನ ವಿಜಯ' ಕೃತಿಯಲ್ಲಿ ಚಿತ್ರಿಸಿದ್ದಾನೆ. ಆದರೆ, ಮುಂದೆ ದ್ಯೂತಪ್ರಸಂಗದಲ್ಲಿ ಅವಳನ್ನು ಯುಧಿಷ್ಠಿರ ದ್ಯೂತದಲ್ಲಿ ಪಣವಾಗಿಡುವುದನ್ನು ಮಹಾಭಾರತದಲ್ಲಿ ಇರುವಂತೆಯೇ ಚಿತ್ರಿಸಿದ್ದಾನೆ.

---

೧ ಇಯಂ ಹಿ ನಃ ಪ್ರಿಯಾ ಭಾರ್ಯಾ ಪ್ರಾಣೇಭ್ಯೋಽಪಿ ಗರೀಯಸೀ।
ಮಾತೇವ ಪರಿಪಾಲ್ಯಾ ಚ ಪೂಜ್ಯಾ ಜ್ಯೇಷ್ಠೇವ ಚ ಸ್ವಸಾ॥ –ಮ.ಭಾ.(ವಿ.ಪ./೩/೧೪)

೨ ಈ ಹಿನ್ನೆಲೆಯಲ್ಲಿ ಶ್ರೀಹರಿಕಥಾಮೃತಸಾರದ 'ಮಾರುತನ ನಿಜಪತ್ನಿ' ಎಂಬ ಮಾತು ತುಂಬಾ ಅರ್ಥವತ್ತಾದುದು ಎಂದು ತಿಳಿಯುವುದು:
ಕೃತಿರಮಣ ಪ್ರದ್ಯುಮ್ನನಂದನೆ ಚತುರರ್ವಿಂಶತಿ ತತ್ತ್ವಪತಿದೇ–
ವತೆಗಳಿಗೆ ಗುರುವೆನಿಸುತಿಹ ಮಾರುತ ನಿಜಪತ್ನಿ।
ಸತತ ಹರಿಯಲಿ ಗುರುಗಳಲಿ ಸದ್ರತಿಯ ಪಾಲಿಸಿ ಭಾಗವತ ಭಾ–
ರತ ಪುರಾಣರಹಸ್ಯತತ್ತ್ವಗಳರುಪು ಕರುಣದಲಿ। – ಹರಿಕಥಾಮೃತಸಾರ (೧/೬)

೩ ಸಾ ಭಾರತೀ ವರಮಿಮಂ ಪ್ರದದಾವಮುಷ್ಮೈ ಸ್ವಾವೇಶಮಾತ್ರದಯಿತಸ್ಯ ಚ ಸಂಗಮೇನ।
– ಮ.ಭಾ.ತಾ.ನಿ. (೧೯/೫೧)

ಹಾಗಿದ್ದಲ್ಲಿ ಮತ್ತೊಬ್ಬರ ಪತ್ನಿಯನ್ನು ಹಾಗೆ ಜೂಜಿನಲ್ಲಿಡುವ ಅಧಿಕಾರವನ್ನು ಅವನು ಹಾಗೆ ಹೊಂದಿದ್ದು ಪ್ರಶ್ನಾರ್ಹವಾಗಿಯೇ ಉಳಿಯುತ್ತದೆ. ಅದಕ್ಕೆ ಉತ್ತರಿಸುವಲ್ಲಿ ಪಂಪ ಎಡವಿದ್ದಾನೆ. ಮುಂದೆಯೂ ಸಹ ವಸ್ತ್ರಾಪಹರಣದ ಪ್ರಯತ್ನದ ಪ್ರಸಂಗದಲ್ಲಿ ದುರ್ಯೋಧನ, ದುಃಶಾಸನರ ಸಂಹಾರಕ್ಕೆ ಪ್ರತಿಜ್ಞೆ ಮಾಡುವುದು ಮಹಾಭಾರತದಲ್ಲಿ ಬಂದಿರುವಂತೆ ಭೀಮಸೇನನೇ ಆಗಿರುವನು. ಹಾಗಿದ್ದರೆ, ಅವಳು ಕೇವಲ ಅರ್ಜುನಪತ್ನಿಯೆಂದು ಚಿತ್ರಿಸುವ ಪಂಪ, ಅವಳ ಪತಿಯಾದ ಅರ್ಜುನ ಏಕೆ ಸುಮ್ಮನಿದ್ದ? ಎಂಬ ಪ್ರಶ್ನೆಗೆ ಉತ್ತರ ಕೊಡುವ ಗೋಜಿಗೆ ಹೋಗಿಲ್ಲ. ಇದರಿಂದ ತಿಳಿಯುವಂತೆ ಪಂಪನ ದ್ರೌಪದೀಪ್ರಸಂಗದ ನಿರೂಪಣೆ ಲೌಕಿಕ ಹಾಗೂ ವೈದಿಕಗಳಿಗೆ ವಿರುದ್ಧವೆನ್ನಿಸಿ ಅವನ ಪರಮ ಅಭಿಮಾನಿಗಳು ಸಹ ಅವನು ಮಾಡಿಕೊಂಡ ಆ ಬದಲಾವಣೆಯನ್ನು ಒಪ್ಪುವುದು ಅಸಾಧ್ಯವೆನ್ನಿಸುವುದು.

ಶ್ರೀಮನ್ಮಧ್ವಾಚಾರ್ಯರೊಬ್ಬರೇ ಇತಿಹಾಸ ಪುರಾಣಗಳ ಸಮಗ್ರಮಾಹಿತಿಯನ್ನು ನೀಡಿ ದ್ರೌಪದಿಯ ಪಂಚಪತಿತ್ವದ ರಹಸ್ಯವನ್ನು ಸಾಧಾರವಾಗಿ ನೀಡಿದ ಮಹನೀಯರು.

## ದ್ರೌಪದಿಯ ಮೃದುವರ್ತನೆ

ಯುದ್ಧದ ಬಳಿಕ ಧೃತರಾಷ್ಟ್ರ, ಗಾಂಧಾರಿಯರು ಪಾಂಡವರ ಬಳಿಯೇ ಉಳಿದುಕೊಂಡಿದ್ದು ಒಟ್ಟು ಹದಿನೈದು ವರ್ಷಗಳಷ್ಟು ಸುದೀರ್ಘ ಕಾಲ. ಆ ಸಮಯದಲ್ಲಿ ಅವರಿಬ್ಬರ ಯೋಗಕ್ಷೇಮ ನೋಡಿಕೊಳ್ಳುವ ಕಾರ್ಯವನ್ನು ಯುಧಿಷ್ಠಿರ, ವಿದುರ, ಸಂಜಯ, ಯುಯುತ್ಸು ಹಾಗೂ ಕುಂತಿಗೆ ವಹಿಸಿದ್ದ. ಮುಖ್ಯವಾಗಿ ದ್ರೌಪದಿಯು ಸಹ ಆ ಕಾರ್ಯದಲ್ಲಿ ಯಥೋಚಿತವಾಗಿ ತೊಡಗಿದ್ದಳು. ತನಗೆ ಪರಮಾವಧಿ ಅಪಚಾರವನ್ನೆಸಗಿದ ಕೌರವರ ತಂದೆತಾಯಿಗಳು ಎಂಬ ಕಾರಣದಿಂದ ದ್ರೌಪದಿ ಅವರನ್ನು ನಿಕೃಷ್ಟವಾಗಿ ಕಾಣಬಹುದಿತ್ತು; ಪರಿಪರಿಯಾಗಿ ಅವಮಾನಿಸಬಹುದಿತ್ತು; ಅವರ ಬದುಕಿಗೆ ನೆಮ್ಮದಿ ಸಿಗದಂತೆ ಮಾಡಿ ಅವರನ್ನು ದೂರಮಾಡಬಹುದಿತ್ತು. ಆದರೆ, ದ್ರೌಪದಿಯ ಔದಾರ್ಯ ಹಾಗೂ ಕರುಣೆ ಮತ್ತೊಮ್ಮೆ ಇಲ್ಲಿ ಮೆರೆಯಿತು. ಅಂತಹವರೊಂದಿಗೆ ಸಹ ಅವರ ಮನಸ್ಸಿಗೆ ಸ್ವಲ್ಪವೂ ನೋವಾಗದಂತೆ ನಡೆದುಕೊಂಡ ಅಗಾಧವಾದ ಕ್ಷಮಾಗುಣ[೧] ದ್ರೌಪದಿಯದಾಗಿತ್ತು. ಇದನ್ನು ಗಮನಿಸಿದರೆ ಎಂತಹ ಕಟು ವಿಮರ್ಶಕರು ಸಹ ಯಾವ ರೀತಿಯಲ್ಲೂ ದ್ರೌಪದಿಯ ಬಗ್ಗೆ ಸೇಡು ಮೊದಲಾದ ದೋಷಗಳ ಆರೋಪವನ್ನು ಮಾಡುವಂತಿಲ್ಲ ಎಂದಾಗುವುದು.

ಭೀಮಸೇನ ಧೃತರಾಷ್ಟ್ರನಿಗೆ ಅವನ ತಪ್ಪಿನ ಅರಿವನ್ನು ಮೂಡಿಸಿ, ವೈರಾಗ್ಯವನ್ನು ಹೊಂದಿ ತಪಸ್ಸಿಗೆಂದು ಕಾಡಿಗೆ ತೆರಳಲು ಅಣಿಮಾಡಲೆಂದು, ಅವನ ಮನಸ್ಸಿಗೆ ವೈರಾಗ್ಯ

---

೧ ಸರ್ವೇ ಹಿ ಪಾರ್ಥಾಸ್ತಮೃತೇ ಸಭಾರ್ಯಾ ವೈಚಿತ್ರವೀರ್ಯಂ ಪರಮಾದರೇಣ।
ಪರ್ಯೇವ ಚಕ್ರುಃ ಸತತಂ ಸಭಾರ್ಯಂ ಕೃಷ್ಣಾ ಚ ನ ಸ್ಯಾತ್ ತನಯಾರ್ತಿಮಾನಿತಿ॥
-ಮ.ಭಾ.ತಾ.ನಿ.(೩೧/೯)

ಹುಟ್ಟಿಸುವಂತಹ ಕೆಲವು ಕಾರ್ಯಗಳನ್ನು ಅನಿವಾರ್ಯವಾಗಿ ಮಾಡಿದ. ಧೃತರಾಷ್ಟ್ರ ಆ ಸಮಯದಲ್ಲಿ ತನ್ನ ಪುತ್ರವ್ಯಾಮೋಹದಿಂದಾಗಿ ಪಾಂಡವರಿಗೆ, ಪ್ರಜೆಗಳಿಗೆ ಆದ ಅನ್ಯಾಯದ ಬಗ್ಗೆ ಸ್ವಲ್ಪವೂ ಚಿಂತಿಸದೆ, ಪರಿತಪಿಸದೇ, ನಿಶ್ಚಿಂತೆಯಿಂದ ಬದುಕುತ್ತಿದ್ದುದು ಭೀಮನ ಆ ವರ್ತನೆಗೆ ಕಾರಣವಾಗಿತ್ತು. ಅವನು ತಾನು ಮಾಡಿದ ತಪ್ಪನ್ನು ಅರಿತು ಅದಕ್ಕೆ ಘೋರ ತಪಸ್ಸಿನ ರೂಪದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದಲ್ಲಿ ಅವನಿಗೆ ಸದ್ಗತಿ ಲಭಿಸುವ ಸಾಧ್ಯತೆ ಇರಲಿಲ್ಲ. ಅದಕ್ಕೆಂದೇ ಅವನ ಉದ್ಧಾರವನ್ನು ಬಯಸಿಯೇ ಭೀಮಸೇನ ಹಾಗೆ ಮಾಡಿದ. ಆದರೆ, ಆ ಸಮಯದಲ್ಲೂ ಸಹ ದ್ರೌಪದಿಯು ಮಾತ್ರ ಸ್ತ್ರೀಸಹಜವಾದ ಮಾತೃಹೃದಯವನ್ನು ತೋರಿಸಿ, ಅವನ ಮನಸ್ಸಿಗೆ ಅಹಿತವೆನ್ನಿಸುವ ಕಾರ್ಯವನ್ನು ಮಾಡಲಿಲ್ಲ. ಇದು ದ್ರೌಪದಿಯ ಕಾರುಣ್ಯಕ್ಕೆ ಮತ್ತೊಂದು ನಿದರ್ಶನ.

## ದ್ರೌಪದಿಯ ಲಕ್ಷಣಶಾಸ್ತ್ರದ ಪರಿಜ್ಞಾನ

ಅಶ್ವಮೇಧಯಾಗ ಪಾಂಡವರ ಅದ್ವಿತೀಯ ಸಾಧನೆಗಳಲ್ಲೊಂದು. ಭೀಷ್ಮೋಪದೇಶ-ದಿಂದಲೂ ಸಹ ಯುಧಿಷ್ಠಿರನ ಬಂಧುಹನನದ ಬಗೆಗಿನ ಸಂಶಯವು ಪರಿಹಾರವಾಗದಿದ್ದಾಗ, ಶ್ರೀವೇದವ್ಯಾಸರು ಸೂಚಿಸಿದ ಪರಿಹಾರ ಅಶ್ವಮೇಧಯಾಗ. ಅದಕ್ಕಾಗಿ ಅಗತ್ಯವಾದ ಅಪಾರ ಸಂಪತ್ತು ಸಹ ಅವರ ಅನುಗ್ರಹದಿಂದಲೇ ಪಾಂಡವರಿಗೆ ಲಭಿಸಿತ್ತು. ಪರೀಕ್ಷಿದ್ರಾಜ ಜನಿಸುತ್ತಲೇ ಅಶ್ವತ್ಥಾಮರ ಬ್ರಹ್ಮಶಿರೋಸ್ತ್ರಕ್ಕೆ ಸಿಲುಕಿ ಮೃತನಾದ. ಆಗ ಆಗಮಿಸಿ, ಅವನನ್ನು ಬದುಕಿಸಿದ ಶ್ರೀಕೃಷ್ಣನನ್ನು ಅಭಿವಂದಿಸಿದವರಲ್ಲಿ, ಪ್ರಾರ್ಥಿಸಿದವರಲ್ಲಿ ದ್ರೌಪದಿಯು ಸಹ ಪಾಲ್ಗೊಂಡಿದ್ದಳು[೧]. ದ್ರೌಪದಿಯು ಇತರರಂತಲ್ಲ. ಪರೀಕ್ಷಿದ್ರಾಜ ತನ್ನ ಸಂತತಿಯಲ್ಲ, ತನ್ನ ಸವತಿ ಎನ್ನಿಸಿದ ಸುಭದ್ರೆಯ ಮೊಮ್ಮಗ. ಮಂಥರೆಯಿಂದ ಪ್ರೇರಿತಳಾದ ಕೈಕೇಯೀ ಸವತಿಮಾತ್ಸರ್ಯದ ಕಾರಣದಿಂದ ರಾಮನ ಪಟ್ಟಾಭಿಷೇಕವನ್ನು ಸಹಿಸಿಕೊಳ್ಳಲಿಲ್ಲ. ಆದರೆ ತನ್ನ ಸವತಿಯಾದ ಸುಭದ್ರೆಯ ಮೊಮ್ಮಗ ಪರೀಕ್ಷಿದ್ರಾಜನ ಅಳಿವನ್ನು ಬಯಸದೆ, ಉಳಿವನ್ನೇ ಬಯಸಿದಳು ಎಂಬಲ್ಲಿ ದ್ರೌಪದಿಯ ಉದಾತ್ತವ್ಯಕ್ತಿತ್ವ ಎದ್ದುಕಾಣುವುದು. ದ್ರೌಪದಿಯು ಲೋಕಕಲ್ಯಾಣಕ್ಕೋಸ್ಕರ ಅವತರಿಸಿ ಬಂದಿದ್ದ ಭಾರತೀದೇವೀ. ಆದ್ದರಿಂದ ಶ್ರೀಕೃಷ್ಣನ ಸಂಕಲ್ಪದಂತೆ ಪರೀಕ್ಷಿದ್ರಾಜನಿಗೇ ಪಟ್ಟವಾಗಬೇಕು. ಶ್ರೀಕೃಷ್ಣನ ಸಂಕಲ್ಪಕ್ಕೆ ತಲೆಬಾಗಿ ಪರೀಕ್ಷಿದ್ರಾಜನ ಕ್ಷೇಮಚಿಂತನೆ ಮಾಡಿದ ದ್ರೌಪದಿಯ ಹೃದಯವೈಶಾಲ್ಯ ಅತಿಮಾನುಷವಾದುದು.

---

೧ ಕುಂತೀ ದ್ರುಪದಪುತ್ರೀ ಚ ಸುಭದ್ರಾ ಚೋತ್ತರಾ ತಥಾ ।
ಸ್ತ್ರಿಯಶ್ಚಾನ್ಯಾ ನೃಸಿಂಹಾನಾಂ ಬಭೂವುರ್ಹೃಷ್ಟಮಾನಸಾಃ ॥

-ಮ.ಭಾ.(ಆಶ್ವಮೇಧಿಕಪರ್ವ/೭೦/೬)

ಕುಂತೀಕೃಷ್ಣಾಸುಭದ್ರಾಭಿರ್ವೈರಾಟ್ಯಾऽನ್ಯಾಭಿರೇವ ಚ ।
ಪಾಂಡವೈಃ ಪುರುಷೈಶ್ಚಾನ್ಯೈಃ ಸಂಸ್ತುತಃ ಪ್ರಣತೋ ಹರಿಃ ॥ - ಮ.ಭಾ.ತಾ.ನಿ.(೩೦/೯೨)

ಅಶ್ವಮೇಧಯಾಗದ ಕುದುರೆಯನ್ನು ಮುಂದಿಟ್ಟುಕೊಂಡು ದಿಗ್ವಿಜಯ ಯಾತ್ರೆಗೆ ತೆರಳಿದ್ದ ಅರ್ಜುನ. ಅದನ್ನು ಯಶಸ್ವಿಯಾಗಿ ಪೂರೈಸಿಕೊಂಡು ಮರಳಿದಾಗ ಯುಧಿ- ಷ್ಠಿರ ಶ್ರೀಕೃಷ್ಣನ ಮುಂದೆ ತನ್ನ ಒಂದು ಪ್ರಶ್ನೆಯನ್ನು ಮುಂದಿಟ್ಟ. ತಮ್ಮ ಐವರಲ್ಲಿ ಅರ್ಜುನ ತಮ್ಮಿಂದ ಪ್ರತ್ಯೇಕನಾಗಿ, ಸುಭದ್ರಾಕಲ್ಯಾಣದ ಸಮಯದಲ್ಲಿ ಒಂದು ವರ್ಷಕಾಲ ತೀರ್ಥಯಾತ್ರೆ, ಕಿರಾತಾರ್ಜುನೀಯ ಪ್ರಸಂಗದಲ್ಲಿ ನಾಲ್ಕುವರ್ಷಗಳ ಕಾಲ ಸ್ವರ್ಗಲೋಕದ ವಾಸ. ಪ್ರಸ್ತುತ ಒಂದುವರ್ಷಕಾಲದ ದಿಗ್ವಿಜಯಯಾತ್ರೆ, ಹೀಗೆ ಅರ್ಜುನ ಹೆಚ್ಚು ಪ್ರವಾಸದಲ್ಲಿ ತೊಡಗಿಕೊಳ್ಳುವ ಮೂಲಕ ಶ್ರಮಕ್ಕೆ ಒಳಗಾಗುತ್ತಿದ್ದ. ಇದಕ್ಕೆ ಏನು ಕಾರಣ? ಅರ್ಜುನನಲ್ಲಿ ಏನಾದರೂ ಅದಕ್ಕೆ ಕಾರಣವಾಗುವಂತಹ ದುರ್ಲಕ್ಷಣಗಳಿವೆಯೇ? ಶ್ರೀಕೃಷ್ಣ ಕೂಡಲೇ ಉತ್ತರಿಸಿದ: 'ಅರ್ಜುನನ ದೇಹ ಶಾಸ್ತ್ರವಿಹಿತ ಪ್ರಮಾಣಕ್ಕಿಂತ ಸ್ವಲ್ಪ ಹೆಚ್ಚಿನದು. ಅದಕ್ಕಾಗಿಯೇ ಅವನಿಗೆ ಪುನಃ ಪುನಃ ದೀರ್ಘಪ್ರವಾಸದ ಶ್ರಮ'. ಶ್ರೀಕೃಷ್ಣ ಇನ್ನೂ ಮುಂದುವರೆಸುವವನಂತೆ ಕಾಣಿಸಿದ. ಕೂಡಲೇ ದ್ರೌಪದೀ ಕೃಷ್ಣನ ಕಡೆಗೆ ಕಣ್ಸನ್ನೆ ಮಾಡಿ ಅದನ್ನು ನಿಲ್ಲಿಸುವಂತೆ ಕೇಳಿಕೊಂಡಳು. ಇದು ಒಂದು ರಹಸ್ಯದ ಪ್ರಸಂಗ. ಅರ್ಜುನನಲ್ಲಿ ಎಡಗೈ ಬಲಗೈಗಿಂತ ಸ್ವಲ್ಪ ದೊಡ್ಡದು, ಉದರದಲ್ಲಿ ಸ್ವಲ್ಪ ಹೆಚ್ಚಳ ಹಾಗೂ ವೃಷಣದಲ್ಲಿ ಆಧಿಕ್ಯ ಎಂಬ ಇನ್ನೂ ಮೂರು ದುರ್ಲಕ್ಷಣಗಳು ಅರ್ಜುನನ ದೇಹದಲ್ಲಿದ್ದವು. ಅದನ್ನು ಹೇಳಕೂಡದು ಎಂಬುದು ದ್ರೌಪದಿಯ ಉದ್ದೇಶವಾಗಿತ್ತು. ಅದಕ್ಕೆ ಕಾರಣ ಎಂದರೆ, ಅದು ಲಕ್ಷಣಶಾಸ್ತ್ರಕ್ಕೆ ಸೇರಿದ ಸೂಕ್ಷ್ಮ ವಿಚಾರ. ಆ ಶಾಸ್ತ್ರದ ಪರಿಜ್ಞಾನಕ್ಕೆ ಎಲ್ಲರಿಗೂ ಅರ್ಹತೆ ಇಲ್ಲ. ಅದಕ್ಕೆ ಪೂರ್ಣಾಧಿಕಾರಿಗಳು ಋಜುಗಳು ಮಾತ್ರ. ಯಮನ ಅವತಾರನಾದ ಯುಧಿಷ್ಠಿರನಿಗೆ ಅದರ ಅರ್ಹತೆ ಇಲ್ಲ. ಆದರೆ, ವಿದ್ಯಾಶೀಲನಾದ ಯುಧಿಷ್ಠಿರ ಆ ಮೂರನ್ನು ಶ್ರೀಕೃಷ್ಣ ತಿಳಿಸಿದಾಗ ಸಮಗ್ರ ಲಕ್ಷಣಶಾಸ್ತ್ರವನ್ನು ಅರಿಯಲು ಇಚ್ಛಿಸುತ್ತಾನೆ. ಆದರೆ, ಆ ಶಾಸ್ತ್ರದ ಪರಿಜ್ಞಾನಕ್ಕೆ ಅರ್ಹತೆ ಇಲ್ಲದ ಅವನಿಗೆ ಅದನ್ನು ತಿಳಿಸುವುದು ಸೂಕ್ತವಲ್ಲ. ಆದ್ದರಿಂದಲೇ ಆ ಪ್ರಸಂಗವೇ ಒದಗದಿರಲಿ ಎಂದು ದ್ರೌಪದಿಯು ಹಾಗೆ ಶ್ರೀಕೃಷ್ಣನಿಗೆ ಸನ್ನೆ ಮಾಡಿ ಬೇಡಿಕೊಂಡಳು. ಎಂಬುದು ಮಹಾಭಾರತದ ವಿವರಕ್ಕೆ[೧] ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿರುವ ವಿವೇಚನೆ[೨].

---

೧ ಕೃಷ್ಣಾ ತು ದ್ರೌಪದೀ ಕೃಷ್ಣಂ ತಿರ್ಯಕ್ ಸಾಸೂಯಮೈಕ್ಷತ।
ಪ್ರತಿಜಗ್ರಾಹ ತಸ್ಯಾಸ್ತಂ ಪ್ರಣಯಂ ಚಾಪಿ ಕೇಶಿಹಾ॥ – ಮ.ಭಾ.(ಆ.ಪ./೮೭/೧೧)

೨ ಪೃಷ್ಟಸ್ತಂ ಕೇಶವಃ ಪ್ರಾಹ ಭ್ರಾತಾ ತೇ ದೀರ್ಘಪಿಂಡಿಕಃ।
ತೇನಾಯಂ ದುಃಖಬಹುಲ ಇತ್ಯುಕ್ತ್ವಾ ಪುನರೇವ ಚ।
ವದಂತಮೇವ ಪಾಂಚಾಲೀ ಕಟಾಕ್ಷೇಣ ನ್ಯವಾರಯತ್॥
ಸಮಸ್ತಲಕ್ಷಣಾಭಿಜ್ಞಾಃ ಕೃಷ್ಣಃ ಸತ್ಯಾ ವೃಕೋದರಃ।
ಕೃಷ್ಣಾ ಚ ಪಂಚಮೋ ನಾಸ್ತಿ ವಿದ್ಯಾ ಶುದ್ಧೇಯಮಂಜಸಾ॥
ಪ್ರಸಂಗಾತ್ ಪ್ರಾಪ್ತುಮಿಚ್ಛೇತ್ ತಾಂ ವಿದ್ಯಾಶೀಲೋ ಯುಧಿಷ್ಠಿರಃ।
ಇತಿ ಲೋಭಾತ್ ತು ಪಾಂಚಾಲೀ ವಾಸುದೇವಂ ನ್ಯವಾರಯತ್॥

ದ್ರೌಪದಿಯ ಅಗಾಧವಾದ ಪಾಂಡಿತ್ಯಕ್ಕೆ, ಅವಳು ಋಜುದೇವತೆ ಎಂಬ ವಿಶೇಷವಾದ ಪ್ರಮೇಯಕ್ಕೆ, ಇದು ಮತ್ತೊಂದು ನಿದರ್ಶನ. ಪೂರ್ಣಸಲ್ಲಕ್ಷಣಗಳನ್ನು ಎಂದರೆ, ದ್ವಾತ್ರಿಂಶಲ್ಲಕ್ಷಣಗಳನ್ನು ಸಹ ಮೂಲರೂಪದಂತೆ ಅವತಾರರೂಪದಲ್ಲೂ ಹೊಂದಿರುವುದು ದ್ರೌಪದಿಯ ಹಿರಿಮೆ. ಇಂತಹ ಅದ್ಭುತ ಪಾಂಡಿತ್ಯದ ಅಪೂರ್ವ ಹಿರಿಮೆಯನ್ನು ರುಗ್ಮಿಣೀ, ಸತ್ಯಭಾಮೆಯರ ಹೊರತು ಬೇರೊಬ್ಬರಲ್ಲಿ ಮಹಾಭಾರತ ಉಲ್ಲೇಖಿಸಿಲ್ಲ. ಈ ಕಾರಣದಿಂದಲೇ ದ್ರೌಪದಿಯು ಕುಂತಿ ಮೊದಲಾದ ಎಲ್ಲರಿಗಿಂತ ಮಿಗಿಲು ಎನ್ನಿಸಿದ ಪರಮಮಾನ್ಯಳು ಎನ್ನಿಸಿದಳು.

## ಮಹಾಪ್ರಸ್ಥಾನದಲ್ಲಿ ದ್ರೌಪದಿ

ಪಾಂಡವರ ರಾಜ್ಯಭಾರ ಮುಕ್ತಾಯವಾಯಿತು. ಅವರು ಶ್ರೀಕೃಷ್ಣನ ಆದೇಶದಂತೆ ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ವಾರ್ತೆ ಕಿವಿಗೆ ಬೀಳುತ್ತಲೇ ಮಹಾಪ್ರಸ್ಥಾನವನ್ನು ಕೈಗೊಂಡರು. ಹಾಗೆ ತೆರಳಿದ್ದು ಐವರು ಪಾಂಡವರು ಹಾಗೂ ದ್ರೌಪದೀ[1] ಮಾತ್ರ. ಇದರಲ್ಲೂ ದ್ರೌಪದಿಯ ಪಾತ್ರ ಗಮನಾರ್ಹವೆನ್ನಿಸುವುದು. ಪಾಂಡವರ ಇತರ ಪತ್ನಿಯರು ಮೊದಲಾದವರು ಇದ್ದರೂ ಸಹ ಬೇರಾರೂ ಹಿಂಬಾಲಿಸಿ ತೆರಳದೇ ದ್ರೌಪದಿಯು ಮಾತ್ರವೇ ತೆರಳಿದ್ದು ಆ ಪಾತ್ರಕ್ಕೆ ಸಂದಿರುವ ದೊಡ್ಡ ಗೌರವ. ಪರೀಕ್ಷಿದ್ರಾಜನಿಗೆ ಪಟ್ಟ ಕಟ್ಟಿದ ಪಾಂಡವರು

---

ತದ್ಗೌರವಾದ್ವಾಸುದೇವೋ ನೋತ್ತರಂ ಪ್ರತ್ಯಭಾಷತ।
ವಿಸ್ಮಾರಯಾಮಾಸ ಚ ತಂ ಪ್ರಬ್ರುವಾಣಃ ಕಥಾಂತರಮ್ ॥
ಉದರಸ್ಯ ಕಿಂಚಿದಾಧಿಕ್ಯಂ ವೃಷಣಾಧಿಕ್ಯಮೇವ ಚ।
ಸವ್ಯಬಾಹೋಸ್ತಥಾऽऽಧಿಕ್ಯಂ ದುರ್ಲಕ್ಷಣಮಥೋऽರ್ಜುನೇ॥
ನೈವೋಕ್ತಂ ವಾಸುದೇವೇನ ದೃಶ್ಯಮಾನಮಪಿ ಸ್ಫುಟಮ್ ।
ಜ್ಞಾನಾನಂದಹ್ರಾಸಕರಾ ಹ್ಯೇತೇ ದೋಷಾಃ ಸದಾತನಾಃ॥
ಸಮಸ್ತಜೀವರಾಶೌ ತು ದುರ್ಲಕ್ಷಣವಿವರ್ಜಿತೌ।
ಪೂರ್ಣಚಿತ್ಸುಖಶಕ್ತ್ಯಾದ್ಯೇರ್ಯೋಗ್ಯೌ ಕೃಷ್ಣಾ ಚ ಮಾರುತಿಃ॥
ಅನಾದಿದುಃಖಹೀನತ್ವೇ ಸುಖಾಧಿಕ್ಯೇ ಚ ಲಕ್ಷಣಮ್ ।
ರುಗ್ಮಿಣೀಸತ್ಯಭಾಮಾದಿರೂಪಾಯಾಃ ಶ್ರಿಯ ಏವ ತು॥
ಮುಖ್ಯಂ ತತೋऽಪಿ ಮುಖ್ಯಂ ತು ಸ್ವಾತಂತ್ರ್ಯಾದೇರಶೇಷತಃ।
ಗುಣರಾಶೇಃ ಪರಂ ಲಿಂಗಂ ನಿತ್ಯಂ ವ್ಯಾಸಾದಿರೂಪಿಣಃ।
ವಿಷ್ಣೋರೇವ ನ ಚಾನ್ಯಸ್ಯ ಸ ಹ್ಯೇಕಃ ಪೂರ್ಣಸದ್ಗುಣಃ॥ -ಮ.ಭಾ.ತಾ.ನಿ.(೩೦/೧೨೧-೧೨೯)

೧ ತತಃ ಸ ರಾಜಾ ಕೌರವ್ಯೋ ಧರ್ಮಪುತ್ರೋ ಯುಧಿಷ್ಠಿರಃ।
ಉತ್ಸೃಜ್ಯಾಭರಣನ್ಯಂಗಾಜ್ಜಗೃಹೇ ವಲ್ಕಲಾನ್ಯುತ॥
ಭೀಮಾರ್ಜುನಯಮಾಶ್ಚೈವ ದ್ರೌಪದೀ ಚ ಯಶಸ್ವಿನೀ।
ತಥೈವ ಜಗೃಹುಃ ಸರ್ವೇ ವಲ್ಕಲಾನಿ ನರಾಧಿಪ॥ - ಮ.ಭಾ.(ಮಹಾಪ್ರಸ್ಥಾನಿಕಪರ್ವ/೧/೨೦,೨೧)

ಮಹಾಪ್ರಸ್ಥಾನವನ್ನು ಕೈಗೊಳ್ಳುತ್ತಲೇ ದ್ರೌಪದಿಯ ಕಾಳೀ ರೂಪವು ದ್ರೌಪದಿಯಲ್ಲಿ ಐಕ್ಯ ಹೊಂದಿತು. ಇದು ಯಮದೇವರ ವಿದುರರೂಪ ಯುಧಿಷ್ಠಿರನಲ್ಲಿ ಐಕ್ಯ ಹೊಂದಿದ ಪ್ರಸಂಗವನ್ನು ಹೋಲುವುದು. ಕಾಳಿಯು ಸಹ ಸಾಕ್ಷಾತ್ ಭಾರತಿಯಾದ್ದರಿಂದಲೇ ಆ ರೀತಿ ಐಕ್ಯ ಹೊಂದಿದಳು. ಒಬ್ಬೇ ದೇವತೆಯ ಒಂದಕ್ಕಿಂತ ಹೆಚ್ಚು ಅವತಾರಗಳು ಭೂಲೋಕದಲ್ಲಿ ಅವತರಿಸಿದಾಗ ಅವು ತಮ್ಮ ಅವತಾರ ಸಮಾಪ್ತಿ ಮಾಡುವ ಪದ್ಧತಿ ಸಾಮಾನ್ಯವಾಗಿ ಹೀಗೆಯೇ ಇರುವುದು. ಯುದ್ಧದಲ್ಲಿ ಹತರಾದ ದ್ರೋಣಾಚಾರ್ಯರು ಮೊದಲಾದವರನ್ನು ಹೊರತುಪಡಿಸಿದಂತೆ ಇತರ ಪ್ರಸಂಗಗಳಲ್ಲಿ ಈ ನಿಯಮವನ್ನು ಗುರುತಿಸಬಹುದು. ಶ್ರೀಕೃಷ್ಣನ ಷಣ್ಮಹಿಷಿಯರಲ್ಲಿ ಒಬ್ಬಳಾದ ನೀಲಾದೇವಿಯು ಸಹ ಎರಡು ರೂಪದಲ್ಲಿ ಅವತರಿಸಿದ್ದು ಮೊದಲ ರೂಪದ ನೀಲಾದೇವಿಯು ಶ್ರೀಕೃಷ್ಣ ಇನ್ನೂ ಉಪನಯನ ಮಾಡಿಕೊಳ್ಳುವ ಮುನ್ನವೇ ವಿವಾಹವಾಗಿದ್ದರು. ಮತ್ತೊಬ್ಬ ನೀಲಾದೇವಿಯು ರುಗ್ಮಿಣೀ ಮೊದಲಾದವರ ವಿವಾಹದ ಬಳಿಕ ವಿವಾಹವಾಗಿದ್ದಳು. ಆ ನೀಲಾದೇವಿಯಲ್ಲಿ ಈ ಮೊದಲ ನೀಲಾದೇವಿಯು ಐಕ್ಯಹೊಂದಿದ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿದೆ. ಈ ಹಿನ್ನೆಲೆಯಲ್ಲಿ ಕಾಳೀರೂಪವು ದ್ರೌಪದಿಯ ರೂಪದಲ್ಲಿ ಐಕ್ಯಹೊಂದಿದ್ದು ಅತ್ಯಂತ ಸಮುಚಿತವಾದ ಪ್ರಸಂಗವಾಗಿದೆ. ಒಟ್ಟಾಗಿ ಎರಡೂ ಭಾರತಿಯ ರೂಪಗಳೇ ಆದ್ದರಿಂದ ಇದು ಅವರಿಗೆ ಸಂದ ವಿಶೇಷ ಗೌರವ ಎಂಬುದು ಸಹ ನಿಶ್ಚಿತ.

## ದ್ರೌಪದಿಯ ದೇಹತ್ಯಾಗ

ಪಾಂಡವರು ಹಸ್ತಿನಾಪುರದಿಂದ ಹೊರಟು ಉತ್ತರ ದಿಕ್ಕಿನತ್ತ ಪ್ರಯಾಣ ಬೆಳೆಸಿದರು. ಇಡೀ ಭರತಖಂಡವನ್ನು ಪ್ರದಕ್ಷಿಣಾಕಾರವಾಗಿ ಸಂಚರಿಸಿದರು. ಆಗ ಅವರದ್ದು ಕೇವಲ ಉಪವಾಸ ವ್ರತ. ಏಳು ದಿವಸದಲ್ಲಿ ವಿಶ್ವ ಪರ್ಯಟನೆಯನ್ನು ಮುಗಿಸಿದ ಅವರು, ಹಿಮಾಲಯ ಪ್ರಾಂತವನ್ನು ತಲುಪಿದರು. ಬದರೀಕ್ಷೇತ್ರವನ್ನು ಸಂದರ್ಶಿಸಿ, ಮುಂದೆ ಕೇಶವಪ್ರಯಾಗ ಎಂಬ ಅಲಕನಂದಾ-ಸರಸ್ವತಿ ನದಿಗಳ ಸಂಗಮ ಪ್ರದೇಶವನ್ನು ದಾಟಿ ಮುಂದುವರೆದರು. ಅಲ್ಲಿ ದ್ರೌಪದಿ ದೇಹತ್ಯಾಗವನ್ನು ಮಾಡಲು [೨]ನಿಶ್ಚಯಿಸಿ ಹಾಗೆಯೇ ಮಾಡಿದಳು[೧]. ಆ ಕೂಡಲೇ ಭೀಮಸೇನ, ಯುಧಿಷ್ಠಿರನನ್ನು ಅದಕ್ಕೆ ಕಾರಣ ಕೇಳಿದ. ದ್ರೌಪದಿಯು ದೇಹತ್ಯಾಗ ಮಾಡಲು ಕಾರಣವೇನು? ಕೂಡಲೇ ಯುಧಿಷ್ಠಿರ ಉತ್ತರಿಸಿದ:

೧ ಸ್ವಚ್ಛಂದಮೃತ್ಯವೋ ಯೋಗಾದ್ದೇಹಾನುತ್ಸೃಜ್ಯ ಪಾಂಡವಾಃ।
ಕೃಷ್ಣಾ ಚಾಪುಃ ಪರಂ ಸ್ಥಾನಂ ಯನ್ನ ಯಾಂತ್ಯಪಿ ದೇವತಾಃ।
ಇತಿ ಶ್ರುತೇರ್ನ ತೇ ಪಾಪಾದ್ದೇಹಾಂಸ್ತತ್ಯಜುರೂರ್ಜಿತಾಃ॥ –ಮ.ಭಾ.ತಾ.ನಿ. (೩೨/೬೬)

೨ 'ಭೀಮಸೇತು'ವಿನಿಂದ ಸ್ವಲ್ಪ ದೂರದಲ್ಲಿ ಒಂದು ಕುಲದೇವಿಯ ಮಂದಿರವಿದ್ದು ಅಲ್ಲಿಯೇ ದ್ರೌಪದಿಯು ತನ್ನ ದೇಹವನ್ನು ತೊರೆದಳೆಂದು ಪ್ರತೀತಿ

'ಅವಳು ಅರ್ಜುನನಲ್ಲಿ ವಿಶೇಷ ಪಕ್ಷಪಾತವನ್ನು ಮಾಡುತ್ತಿದ್ದಳು; ಅದರ ಫಲ ಇದು'[೧] ಎಂದು ನುಡಿದು ಇತರರೊಂದಿಗೆ ಮುಂದೆ ಸಾಗಿದ.

ಇದೊಂದು ವಿಚಿತ್ರವಾದ ಪ್ರಸಂಗ. ಇದನ್ನು ಆಧರಿಸಿ ಅನೇಕರು ದ್ರೌಪದಿಯನ್ನು ಆಕ್ಷೇಪಿಸುವ ಅವಿವೇಕವನ್ನು ಮಾಡಿರುವರು.

ಭೀಮ ಹಾಗೆ ಪ್ರಶ್ನಿಸಲು ಕಾರಣವನ್ನು ಇವರ‍್ಯಾರು ಅರ್ಥ ಮಾಡಿಕೊಂಡಿಲ್ಲ. ಅಂತ್ಯಕಾಲದಲ್ಲಿ ಹಾಗೆ ದೇಹ ತೊರೆದವರ ಬಗ್ಗೆ ಇತರರಿಂದ ದೋಷವನ್ನು ಹೇಳಿಸುವುದು ಋಣ ಪರಿಹಾರದ ಒಂದು ಮಾರ್ಗ. ಆ ಋಣ ಪರಿಹಾರವಾಗದಿದ್ದಲ್ಲಿ ಅದು ಜನ್ಮಾಂತರಕ್ಕೆ ಕಾರಣವಾಗುವ ಅಪಾಯವಿರುತ್ತದೆ. ಅದನ್ನು ತಪ್ಪಿಸಲೆಂದು ದ್ರೌಪದಿಯನ್ನೊಳಗೊಂಡಂತೆ ಭೀಮಸೇನ ಅರ್ಜುನಾದಿ ಇತರ ಎಲ್ಲರ ಋಣವಿಮೋಚನೆಗೆಂದು ಪ್ರತಿಯೊಬ್ಬರು ದೇಹ ತೊರೆದಾಗಲೂ ಈ ರೀತಿಯಾಗಿ ಕಾರಣವನ್ನು ಕೇಳಿ, ಯುಧಿಷ್ಠಿರ ಅದಕ್ಕೆ ಉತ್ತರ ನೀಡುವಂತೆ ಮಾಡುತ್ತಾನೆ. ಭೀಮನ ಈ ರೀತಿಯಾದ ವಿಚಾರವಂತಿಕೆ ಅವನ ವ್ಯಕ್ತಿತ್ವಕ್ಕೆ ಹಿಡಿಯುವ ಕನ್ನಡಿ.

ಪ್ರಸ್ತುತ ಪ್ರಸಂಗದಲ್ಲಿ ಯುಧಿಷ್ಠಿರನ ಉತ್ತರ ಸೂಕ್ತವಾಗಿರಲಿಲ್ಲ. ಅರ್ಜುನನಲ್ಲಿ ದ್ರೌಪದಿಯು ಹೆಚ್ಚು ಪ್ರೀತಿಯನ್ನು ತೋರಿಸಲು ಅವನಲ್ಲಿದ್ದ ವಿಶೇಷ ಗುಣಗಳು ಕಾರಣವಾಗಿದ್ದವು. ಅವನ ಬ್ರಹ್ಮಚರ್ಯದೀಕ್ಷೆಯಂತೂ ಶ್ರೀಕೃಷ್ಣನಿಂದಲೇ ಪ್ರಶಂಸಿತವಾಗಿತ್ತು. ಮುಖ್ಯವಾಗಿ ದ್ರೌಪದೀಸ್ವಯಂವರದಲ್ಲಿ ಮತ್ಸ್ಯಯಂತ್ರವನ್ನು ಭೇದಿಸಿದ್ದು ಸಹ ಅರ್ಜುನನ ಸಾಧನೆಯಾಗಿತ್ತು. ಇಂದ್ರಾವತಾರನಾದ ಅವನು ಸ್ವರೂಪಯೋಗ್ಯತೆಯಲ್ಲಿ ಭೀಮನ ಹೊರತು ಇತರ ಎಲ್ಲರಿಗಿಂತಲೂ ಮಿಗಿಲಾಗಿದ್ದವನು. ವಾಸ್ತವವಾಗಿ ಪಾಂಡವರಲ್ಲಿ ಭೀಮಸೇನನ ಬಳಿಕದ ಹಿರಿಮೆ ಅರ್ಜುನನದೇ ಆಗಿತ್ತು. ಈ ಎಲ್ಲ ಹಿನ್ನೆಲೆಯಲ್ಲಿ ದ್ರೌಪದೀ ಅರ್ಜುನನ ಬಗ್ಗೆ ಹೆಚ್ಚು ಪ್ರೀತಿಯನ್ನು ತೋರಿಸಿದ್ದು ಸೂಕ್ತವೇ ಆಗಿತ್ತು[೨]. ಆದ್ದರಿಂದ ಅದು ಪಕ್ಷಪಾತ ಎನ್ನಿಸಲಾರದು. ಗುಣಕ್ಕೆ ತಕ್ಕ ಪ್ರೀತಿ ಗುಣವೇ ಹೊರತು ದೋಷವಲ್ಲ. ಇದನ್ನೆಲ್ಲ ಗಮನಿಸದ ಯುಧಿಷ್ಠಿರ ಮೇಲ್ನೋಟಕ್ಕೆ ತನಗೆ ತೋಚಿದ ಕಾರಣವನ್ನೇ ಹೇಳಿಬಿಡುತ್ತಾನೆ. ಇದನ್ನು ಅರ್ಥಮಾಡಿಕೊಳ್ಳದೇ ಅವನಂತೆ ಇತರರು ಸಹ ಆಕ್ಷೇಪ ಮಾಡಿದ್ದಲ್ಲಿ ಅದು ಸರಿಯಾದ ವಿಮರ್ಶೆ ಎನ್ನಿಸಲಾರದು.

---

೧ ಪಕ್ಷಪಾತೋ ಮಹಾನಸ್ಯಾ ವಿಶೇಷೇಣ ಧನಂಜಯೇ।
ತಸ್ಯೈತತ್ ಫಲಮದ್ಯೈಷಾ ಭುಂಕ್ತೇ ಪುರುಷಸತ್ತಮ॥

– ಮ.ಭಾ.(ಮಹಾಪ್ರಸ್ಥಾನಿಕಪರ್ವ/೨/೬)

೨ ಭೀಮಾದೃತೇ ಹಿ ಚತುರ್ಷು ಪಕ್ಷಪಾತಸ್ತು ವಾಸವೌ।
ಯೋಗ್ಯ ಏವೇತಿ ಕೃಷ್ಣಾಯಾ ನ ದೋಷಃ ಸ್ಯಾತ್ ಕಥಂಚನ॥ –ಮ.ಭಾ.ತಾ.ನಿ.(೩೨/೬೮)

ವಾಸ್ತವವಾಗಿ ದ್ರೌಪದಿಯು ಹಾಗೆ ದೇಹ ತೊರೆಯಲು ಮುಖ್ಯ ಕಾರಣ ಎಂದರೆ, ಲಕ್ಷ್ಮೀನಾರಾಯಣರನ್ನು ಹೊರತು ಪಡಿಸಿದಂತೆ ಭೂಲೋಕದಲ್ಲಿ ಅವತರಿಸುವ ಸಕಲರು ಸಹ ತಮ್ಮ ಅವತಾರ ಕಾರ್ಯ ಪೂರೈಸಿದ ಬಳಿಕ ದೇಹವನ್ನು ತೊರೆಯಲೇಬೇಕು ಎಂಬ ನಿಯಮವನ್ನು ಪಾಲಿಸುವುದೇ ಆಗಿದೆ: 'ಜಾತಸ್ಯ ಹಿ ಧ್ರುವೋ ಮೃತ್ಯುಃ' (ಗೀತಾ). ಇದು ಭೀಮಸೇನನೂ ಒಳಗೊಂಡಂತೆ ಇತರ ಸಕಲ ಪಾಂಡವರಿಗೂ ಅನ್ವಯಿಸುವ ಮಾತು. ಆದ್ದರಿಂದ ವಾಯುದೇವರ ಅವತಾರಗಳನ್ನು ಸಹ 'ಸ್ವಚ್ಛಂದಮೃತ್ಯುಃ' ಎಂದು ಕರೆಯಲಾಗಿದೆ. ಅರ್ಜುನಾದಿಗಳು ಸಹ ಸ್ವಚ್ಛಂದಮೃತ್ಯುಗಳೇ ಆಗಿರುವರು. ಇದು ಇತರರ ಮೃತ್ಯುವಿಗಿಂತ ಪಾಂಡವರ ದೇಹತ್ಯಾಗ ವಿಶಿಷ್ಟವಾದುದು ಎಂಬುದಕ್ಕೆ ದ್ಯೋತಕ. ಭೀಷ್ಮರ ಸ್ವಚ್ಛಂದಮೃತ್ಯುತ್ವವು ವರಬಲದ ಹಿನ್ನೆಲೆಯನ್ನು ಹೊಂದಿತ್ತು. ಶ್ರೇಷ್ಠ ದೇವತೆಗಳಾದ ಪಾಂಡವರದು ಮಾತ್ರ ಸಹಜವಾದ ಸ್ವಚ್ಛಂದಮೃತ್ಯುತ್ವವೇ ಆಗಿದ್ದಿತು ಎಂಬುದು ವಿಶೇಷ.

ಮುಂದೆ ಮಹಾಪ್ರಸ್ಥಾನ ಪೂರೈಸಿ ಯುಧಿಷ್ಠಿರ ಇಂದ್ರ ಕಳುಹಿಸಿದ ರಥದಲ್ಲಿ ಕುಳಿತು ಸ್ವರ್ಗವನ್ನು ತಲುಪಿದ. ಅಲ್ಲಿ ಕೃತಕ ಸ್ವರ್ಗ ಒಂದನ್ನು ಅಲಂಕರಿಸಿದ್ದ ದುರ್ಯೋಧನ ಮೊದಲಾದ ದುಷ್ಟರನ್ನು ಕಂಡು ಆಕ್ರೋಶವನ್ನು ವ್ಯಕ್ತಪಡಿಸಿದ. ಬಳಿಕ ಒಂದು ಕ್ಷಣಕಾಲ ನರಕದರ್ಶನವನ್ನು ಮಾಡಿದ. ಅದು ಅವನು 'ಅಶ್ವತ್ಥಾಮಾ ಹತಃ' ಎಂಬ ಶ್ರೀಕೃಷ್ಣನ ಮಾತನ್ನು ಪಾಲಿಸುವಲ್ಲಿ ತೋರಿದ ಸಂಶಯದ ಫಲವಾಗಿತ್ತು. ಮುಂದೆ ಇಂದ್ರಾದಿ ದೇವತೆಗಳ ಆದೇಶದಂತೆ ಅಲ್ಲಿಯ ದೇವಗಂಗೆಯಲ್ಲಿ ತನ್ನ ದೇಹವನ್ನು ತೊರೆದು ದೇವತಾ ಶರೀರವನ್ನು ಪಡೆದ.

---

೧ ಸದೇಹನಾಕಾನಿಚ್ಛುತ್ವಾದ್ದೇಹಪ್ರಪತನಂ ಹಿ ತತ್ ।

ಏಷಾ ಹಿ ಸಾಕ್ಷಾಜ್ಜಗತಾಂ ಪ್ರಿಯಸ್ಯ ಪ್ರಾಣಾತ್ಮನೋ ಜೀವವರೇಶ್ವರಸ್ಯ ।
ಪ್ರಾಣಪ್ರಿಯಾ ಶ್ರೀರಿತಿ ನಾಮ ಯಸ್ಯಾಃ ಶಮಾತ್ಮಕೇಽಸ್ಮಿನ್ ರಮತೇ ಯದೇಷಾ ॥

ಯುಷ್ಮಚ್ಚತುರ್ದೇಹಗತಸ್ಯ ವಾಯೋರ್ವಾಯುಪ್ರಿಯಾ ಭೀಮತನೋಸ್ತಥೈವ ।
ಭೋಗಾಯ ಸೃಷ್ಟಾ ಪುರುಷೋತ್ತಮೇನ ಯುಷ್ಮತ್ಪ್ರಿಯಾರ್ಥಂ ಭವತಾಂ ಚ ದಾರೈಃ ॥

ಪ್ರೀತಿಸ್ತತೋ ಹ್ಯಭ್ಯಧಿಕಾ ಬಭೂವ ಭೀಮಸ್ಯ ಚಾಸ್ಯಾಸ್ತದನು ಸ್ಮ ಪಾರ್ಥೇ ।
ತತೋ ಭವತ್ಸ್ವೇವ ಯಥಾಕ್ರಮೇಣ ಗುಣಾನುಸಾರೇಣ ಸಮೀರಣಸ್ಯ ॥

-ಮ.ಭಾ.ತಾ.ನಿ (೩೨/೧೧೩-೧೧೫)

ತೇಷಾಮಿಹೇತಿ ಯಾಥಾರ್ಥ್ಯಂ ಜಾನನ್ ಪಪ್ರಚ್ಛ ಧರ್ಮಜಮ್ ।
ಕೇನ ಕೇನಾಪತದ್ದೇಹೋ ದೋಷೇಣ ನ ಇತಿ ಕ್ರಮಾತ್ ॥ -ಮ.ಭಾ.ತಾ.ನಿ.(೩೨/೬೩)

ನ ಕೃಷ್ಣಾ ರಾಜಪುತ್ರೀ ಚ ನರಕಾರ್ಹಾ ಕಥಂಚನ । -ಮ.ಭಾ.(ಸ್ವರ್ಗಾರೋಹಣಪರ್ವ /೩/೩೯)- ಎಂಬ ಮಾತು ದ್ರೌಪದಿಯ ಪರಿಶುದ್ಧಿಗೆ ಮತ್ತೊಂದು ನಿದರ್ಶನವಾಗಿದೆ.

ಯುಧಿಷ್ಠಿರನು ಸಹ ಹೀಗೆ ದೇಹವನ್ನು ತೊರೆದದ್ದು ಹಿಂದೆ ಹೇಳಿದಂತೆ ವಿಧಿ ನಿಯಮವನ್ನು ಪಾಲಿಸುವ ಕಾರ್ಯವಾಗಿತ್ತು. ಅದನ್ನು ಗಮನಿಸದೇ ಸಶರೀರವಾಗಿಯೇ ಸ್ವರ್ಗಕ್ಕೆ ತೆರಳಿದ್ದ ಅವನು ಅಲ್ಲಿ ಇಂದ್ರಾದಿದೇವತೆಗಳ ಆದೇಶದಂತೆ ದೇಹವನ್ನು ತೊರೆದ[೧]. ಅವನು ಗಮನಿಸದೇ ಇದ್ದ ಸತ್ಯವನ್ನು ದ್ರೌಪದೀ ಹಾಗೂ ಇತರ ಪಾಂಡವರು ಗಮನಿಸಿದ್ದು ಅವರ ವೈಶಿಷ್ಟ್ಯವಾಗಿತ್ತು.

ಸ್ವರ್ಗಲೋಕದಲ್ಲಿ ಭೀಮಸೇನ ಮೊದಲಾದ ದೇವತಾಂಶಸಂಭೂತರೆಲ್ಲ ತಮ್ಮ ತಮ್ಮ ಮೂಲರೂಪದ ಪಕ್ಕದಲ್ಲಿ ಕುಳಿತಿದ್ದುದನ್ನು ಅಲ್ಲಿಗೆ ಆಗಮಿಸಿದ ಯುಧಿಷ್ಠಿರ ಕಂಡ. ಅಲ್ಲಿ ದ್ರೌಪದೀದೇವಿಯು ವಾಯುದೇವರ ಪಕ್ಕದಲ್ಲಿ ಕುಳಿತಿದ್ದ ಭೀಮನ ಪಕ್ಕದಲ್ಲಿ ಕುಳಿತಿದ್ದಳು. ತನ್ನ ಮನುಷ್ಯ ದೇಹದ ಸಂಸ್ಕಾರ ಬಲದಿಂದಾಗಿ ಯುಧಿಷ್ಠಿರ ಅವಳನ್ನು ತನ್ನ ಪತ್ನಿಯೆಂದು ಭ್ರಮಿಸಿ ಅವಳ ಬಳಿ ಕುಳಿತುಕೊಳ್ಳಲು ತೆರಳಿದ. ಆ ಕೂಡಲೇ ದೇವತೆಗಳು ಅವನನ್ನು ತಡೆದು ತಿಳಿಸಿದರು. ''ಇವಳು ಸಾಕ್ಷಾತ್ ಭಾರತೀದೇವೀ; ವಾಯುದೇವರ ಪತ್ನಿ; ಮುಖ್ಯವಾಗಿ ಭೀಮಪತ್ನಿ; ಅದರಿಂದಾಗಿಯೇ ಅಲ್ಲಿ ಕುಳಿತಿರುವಳು. ಯಮನ ಅವತಾರನಾದ ನಿನಗೆ ಅವಳ ಬಳಿಯಲ್ಲಿ ಕುಳಿತುಕೊಳ್ಳುವ ಅರ್ಹತೆ ಇಲ್ಲ. ನೀನು ಈಗ ನಿನ್ನ ಮೂಲರೂಪದ ಬಳಿಯೇ ಕುಳಿತುಕೊಳ್ಳಬೇಕು.'' ಅದರಂತೆ ಅಲ್ಲಿಗೆ ತೆರಳಿದ ಯುಧಿಷ್ಠಿರನನ್ನು ಮೂಲರೂಪದ ಯಮ ಆಲಂಗಿಸಿಕೊಂಡ. ಕೂಡಲೇ ಅವನ ಮನುಷ್ಯದೇಹದ ಸಂಸ್ಕಾರ ಅಳಿಯಿತು. ತಾನು ಯಮನ ಪಕ್ಕದಲ್ಲಿಯೇ ಕುಳಿತ. ಈ ಪ್ರಸಂಗವು ದ್ರೌಪದಿಯು ಸಾಕ್ಷಾತ್ ಭಾರತೀದೇವಿಯ ಅವತಾರ, ಅವಳು ವಾಯುದೇವರ ಪತ್ನಿ, ಎಂದರೆ ಭೀಮಪತ್ನಿ ಎಂಬ ಪರಮಸತ್ಯವನ್ನು ಅನಾವರಣ ಗೊಳಿಸುವುದು. ಅವತಾರದಲ್ಲೂ ದ್ರೌಪದಿಯು ಮುಖ್ಯವಾಗಿ ಭೀಮಪತ್ನೀ ಎಂಬುದನ್ನು ಈಗಾಗಲೇ ಅನೇಕ ಪ್ರಸಂಗಗಳಲ್ಲಿ ವಿವರವಾಗಿ ವಿವೇಚಿಸಲಾಗಿದೆ.

---

೧ ಗಂಗಾಂ ದೇವನದೀಂ ಪುಣ್ಯಾಂ ಪಾವನೀಮೃಷಿಸಂಸ್ತುತಾಮ್ ।
ಅವಗಾಹ್ಯ ತತೋ ರಾಜಾ ತನುಂ ತತ್ಯಾಜ ಮಾನುಷೀಮ್ ॥
ತತೋ ದಿವ್ಯವಪುರ್ಭೂತ್ವಾ ಧರ್ಮರಾಜೋ ಯುಧಿಷ್ಠಿರಃ ।
ನಿರ್ವೈರೋ ಗತಸಂತಾಪೋ ಜಲೇ ತಸ್ಮಿನ್ ಸಮಾಪ್ಲುತಃ ॥
– ಮ.ಭಾ. (ಸ್ವರ್ಗಾರೋಹಣಪರ್ವ/೩/೪೧,೪೨)

ನ ತೇ ನೃಪಾದ್ಯಾಪಿ ಹಿ ಮಾನುಷೋ ಗತೋ
ಭಾವಸ್ತತೋ ದ್ವೇಷ್ಟಿ ಸುಯೋಧನಾದೀನ್ ।
ನಿಮಜ್ಜ ತದ್ವಿಷ್ಣುಪದೋದಕೇಽತ್ರ ವಿಸೃಜ್ಯ ದೇಹಂ ಭಜ ದೇವಭಾವಮ್ ॥.........
ಇತ್ಯುಕ್ತ ಆಶ್ವೇವ ನಿಮಜ್ಜ್ಯ ಗಂಗಾಂ ಧರ್ಮಾತ್ಮಜಸ್ತಂ ಪ್ರವಿಸೃಜ್ಯ ದೇಹಮ್ ।
ಸದ್ಯೋ ಬಭೌ ದೈವಮವಾಪ್ಯ ಕಾಯಂ ವಿಸೃಷ್ಟರೋಷಾದಿಸಮಸ್ತದೋಷಃ ॥
– ಮ.ಭಾ.ತಾ.ನಿ.(೩೨/೧೦೭,೧೧೦)

ಬಳಿಕ ದೇವಾಂಶಸಂಭೂತರಾದವರೆಲ್ಲರೂ ಅವರವರ ಲೋಕಗಳಿಗೆ ತೆರಳಿದರು; ಮುಂದೆ ಅವರವರ ಮೂಲರೂಪಗಳಲ್ಲಿ ಐಕ್ಯವನ್ನು[೧] ಹೊಂದಿದರು[೨].

---

೧ ತತಸ್ತು ಪಾರ್ಥಾ ಅಖಿಲಾಃ ಸ್ವಮೂಲರೂಪೈಃ ಸಹೈವಾವಿವಿಶುರ್ಮುದಾಽನ್ವಿತಾಃ।
ಸ್ವೀಯಾನಿ ಧಾಮಾನಿ ತತೋಽಪ್ಯನೂನಭೋಗಾಃ ಸದಾರಾ ನ್ಯವಸಂಶ್ಚ ತತ್ರ ॥
-ಮ.ಭಾ.ತಾ.ನಿ.(೩೨/೧೧೯)

೨ ಸಕಲ ದೇವಾಂಶರೂ ಸಹ ಕ್ರಮವಾಗಿ ತಮ್ಮ ತಮ್ಮ ಮೂಲರೂಪಗಳನ್ನು ಪ್ರವೇಶಿಸಿದ ವಿವರ ಸ್ವರ್ಗಾರೋಹಣ ಪರ್ವದ ಐದನೇ ಅಧ್ಯಾಯದಲ್ಲಿ ನಿರೂಪಿತವಾಗಿದೆ:
ನ ಶಕ್ಯಂ ಕರ್ಮಣಾಮಂತೇ ಸರ್ವೇಣ ಮನುಜಾಧಿಪ।
ಪ್ರಕೃತಿಂ ಕಿಂ ನು ಸಮ್ಯಕ್ ತೇ ಪೃಚ್ಛೈಷಾ ಸಂಪ್ರಯೋಜಿತಾ ॥
ಶೃಣು ಗುಹ್ಯಮಿದಂ ರಾಜನ್ ದೇವಾನಾಂ ಭರತರ್ಷಭ।
ಯದುವಾಚ ಮಹಾತೇಜಾ ದಿವ್ಯಚಕ್ಷುಃ ಪ್ರತಾಪವಾನ್ ॥
ಮುನಿಃ ಪುರಾಣಃ ಕೌರವ್ಯ ಪಾರಾಶರ್ಯೋ ಮಹಾವ್ರತಃ।
ಅಗಾಧಬುದ್ಧಿಃ ಸರ್ವಜ್ಞೋ ಗತಿಜ್ಞಃ ಸರ್ವಕರ್ಮಣಾಮ್ ॥
ತೇನೋಕ್ತಂ ಕರ್ಮಣಾಮಂತೇ ಪ್ರವಿಶಂತಿ ಸ್ವಕಾಂ ತನುಮ್।
ವಸೂನೇವ ಮಹಾತೇಜಾ ಭೀಷ್ಮಃ ಪ್ರಾಪ ಮಹಾದ್ಯುತಿಃ ॥
ಅಷ್ಟಾವೇವ ಹಿ ದೃಶ್ಯಂತೇ ವಸವೋ ಭರತರ್ಷಭ।
ಬೃಹಸ್ಪತಿಂ ವಿವೇಶಾಥ ದ್ರೋಣೋ ಹ್ಯಂಗಿರಸಾಂ ವರಮ್ ॥
ಕೃತವರ್ಮಾ ತು ಹಾರ್ದಿಕ್ಯಃ ಪ್ರವಿವೇಶ ಯಥಾಗತಮ್।
ಸನತ್ಕುಮಾರಂ ಪ್ರದ್ಯುಮ್ನಃ ಪ್ರವಿವೇಶ ಯಥಾಗತಮ್ ॥
ಧೃತರಾಷ್ಟ್ರೋ ಧನೇಶಸ್ಯ ಲೋಕಾನ್ ಪ್ರಾಪ ದುರಾಸದಾನ್।
ಧೃತರಾಷ್ಟ್ರೇಣ ಸಹಿತಾ ಗಾಂಧಾರೀ ಚ ಯಶಸ್ವಿನೀ ॥
ಪತ್ನೀಭ್ಯಾಂ ಸಹಿತಃ ಪಾಂಡುರ್ಮಹೇಂದ್ರಸದನಂ ಯಯೌ।
ವಿರಾಟದ್ರುಪದೌ ಚೋಭೌ ಧೃಷ್ಟಕೇತುಶ್ಚ ಪಾರ್ಥಿವಃ ॥
ನಿಶಠಾಕ್ರೂರಸಾಂಬಾಶ್ಚ ಭಾನುಃ ಕಂಪೋ ವಿದೂರಥಃ।
ಭೂರಿಶ್ರವಾಃ ಶಲಶ್ಚೈವ ಭೂರಿಶ್ಚ ಪೃಥಿವೀಪತಿಃ ॥
ಕಂಸಶ್ಚೈವೋಗ್ರಸೇನಶ್ಚ ವಸುದೇವಸ್ತಥೈವ ಚ।
ಉತ್ತರಶ್ಚ ಸಹ ಭ್ರಾತ್ರಾ ಶಂಖೇನ ನರಪುಂಗವಃ ॥
ವಿಶ್ವೇಷಾಂ ದೇವತಾನಾಂ ತೇ ವಿವಿಶುರ್ನರಸತ್ತಮಾಃ।
ವರ್ಚಾ ನಾಮ ಮಹಾತೇಜಾಃ ಸೋಮಪುತ್ರಃ ಪ್ರತಾಪವಾನ್ ॥
ಸೋಽಭಿಮನ್ಯುರ್ನೃಸಿಂಹಸ್ಯ ಫಾಲ್ಗುನಸ್ಯ ಸುತೋಽಭವತ್।
ಸ ಯುದ್ಧ್ವಾ ಕ್ಷತ್ರಧರ್ಮೇಣ ಯಥಾ ನಾನ್ಯಃ ಪುಮಾನ್ ಕ್ವಚಿತ್ ॥
ವಿವೇಶ ಸೋಮಂ ಧರ್ಮಾತ್ಮಾ ಕರ್ಮಣೋಽಂತೇ ಮಹಾರಥಃ।
ಆವಿವೇಶ ರವಿಂ ಕರ್ಣೋ ನಿಹತಃ ಪುರುಷರ್ಷಭಃ ॥
ದ್ವಾಪರಂ ಶಕುನಿಃ ಪ್ರಾಪ ಧೃಷ್ಟದ್ಯುಮ್ನಸ್ತು ಪಾವಕಮ್।
ಋದ್ಧಿಮಂತೋ ಮಹಾತ್ಮಾನಃ ಶಸ್ತ್ರಪೂತಾ ದಿವಂಗತಾಃ ॥

ಹೀಗೆ ದ್ರೌಪದಿಯ ಪಾತ್ರ ಮಹಾಭಾರತದ ಪ್ರಧಾನವಾದ ಮಹಿಳಾಪಾತ್ರವಾಗಿ ಚಿತ್ರಿತವಾಗಿದೆ. ಕುಂತಿಯು ತನ್ನ ಧೈರ್ಯಕ್ಕೆ ಹೆಸರಾದವಳು. ಗಾಂಧಾರಿಯ ಧರ್ಮಪ್ರಜ್ಞೆ ಧೃತರಾಷ್ಟ್ರನನ್ನು ಮೀರಿಸಿತ್ತು. ಮಾದ್ರಿಯು ಚಿಕ್ಕ ವಯಸ್ಸಿನಲ್ಲಿಯೇ ದೇಹತ್ಯಾಗವನ್ನು ಮಾಡಿದಳು. ಸುಭದ್ರೆ ಶ್ರೀಕೃಷ್ಣನ ತಂಗಿಯೇ ಆದರೂ, ದ್ರೌಪದಿಯಂತೆ ಮಹತ್ವಪೂರ್ಣವಾದ ಸ್ಥಾನವನ್ನು ಮಹಾಭಾರದಲ್ಲಿ ಪಡೆದಿಲ್ಲ. ಚಿತ್ರಾಂಗದೆ ಮೊದಲಾದ ಇತರರ ಪಾತ್ರಗಳು ಪ್ರಾಸಂಗಿಕವಾಗಿ ಚಿತ್ರಿತವಾಗಿವೆ. ಹಿಡಿಂಬೆ ಘಟೋತ್ಕಚನ ಪಡೆದ ಕಾರ್ಯದಲ್ಲಿ ಕೃತಕೃತ್ಯಳಾದವಳು. ಉಲೂಪಿ ಅರ್ಜುನನಿಂದ ಗರ್ಭಾಧಾನ ಪಡೆದು ಇರಾವಂತನ ತಾಯಿ ಎನ್ನಿಸಿದಳು.

ಒಟ್ಟಾಗಿ ಇಡೀ ಮಹಾಭಾರತದಲ್ಲಿ ಅದ್ಭುತವಾದ ಅವತಾರ ಕ್ರಮ, ಲೋಕೋತ್ತರವಾದ ಸೌಂದರ್ಯ, ಅಪೂರ್ವವೆನ್ನಿಸುವ ಸ್ವಯಂವರ, ಅಶ್ರುತಪೂರ್ವವೆನ್ನಿಸುವ ದಾಂಪತ್ಯ, ವಿವಿಧ ಪ್ರಸಂಗಗಳಲ್ಲಿ ತೋರುವ ಅಪಾರವಾದ ಕ್ಷಾತ್ರತೇಜಸ್ಸು ಯುಧಿ-ಷ್ಠಿರನಂತಹ ಮಹಾರಾಜನೊಂದಿಗೂ ಧಾರ್ಮಿಕ ಚರ್ಚೆಯನ್ನು ಮಾಡಿ ಅವನನ್ನು

---

ಧರ್ಮಮೇವಾವಿಶತ್ ಕ್ಷತ್ತಾ ರಾಜಾ ಚೈವ ಯುಧಿಷ್ಠಿರಃ ||
ಅನಂತೋ ಭಗವಾನ್ ದೇವಃ ಪ್ರವಿವೇಶ ರಸಾತಲಮ್ |
ಪಿತಾಮಹನಿಯೋಗಾದ್ ವೈ ಯೋ ಯೋಗಾದ್ ಗಾಮಧಾರಯತ್ ||
ಯಃ ಸ ನಾರಾಯಣೋ ನಾಮ ದೇವದೇವಃ ಸನಾತನಃ |
ತಸ್ಯಾಂಶೋ ವಾಸುದೇವಸ್ತು ಕರ್ಮಣೋಽಂತೇ ವಿವೇಶ ಹ ||
ಷೋಡಶಸ್ತ್ರೀಸಹಸ್ರಾಣಿ ವಾಸುದೇವಪರಿಗ್ರಹಃ |
ಅಮಜ್ಜಂಸ್ತಾಃ ಸರಸ್ವತ್ಯಾಂ ಕಾಲೇನ ಜನಮೇಜಯ ||
ತತ್ರ ತ್ಯಕ್ತ್ವಾ ಶರೀರಾಣಿ ದಿವಮಾರುರುಹುಃ ಪುನಃ |
ತಾಶ್ಚೈವಾಪ್ಸರಸೋ ಭೂತ್ವಾ ವಾಸುದೇವಮುಪಾವಿಶನ್ ||
ಹತಾಸ್ತಸ್ಮಿನ್ ಮಹಾಯುದ್ಧೇ ಯೇ ವೀರಾಸ್ತು ಮಹಾರಥಾಃ |
ಘಟೋತ್ಕಚಾದಯಶ್ಚೈವ ದೇವಾನ್ ಯಕ್ಷಾಂಶ್ಚ ಭೇಜಿರೇ ||
ದುರ್ಯೋಧನಸಹಾಯಾಶ್ಚ ರಾಕ್ಷಸಾಃ ಪರಿಕೀರ್ತಿತಾಃ |
ಪ್ರಾಪ್ತಾಸ್ತೇ ಕ್ರಮಶೋ ರಾಜನ್ ಸರ್ವಲೋಕಾನನುತ್ತಮಾನ್ ||
ಭವನಂ ಚ ಮಹೇಂದ್ರಸ್ಯ ಕುಬೇರಸ್ಯ ಚ ಧೀಮತಃ |
ವರುಣಸ್ಯ ತಥಾ ಲೋಕಾನ್ ವಿವಿಶುಃ ಪುರುಷರ್ಷಭಾಃ ||
ಏತತ್ ತೇ ಸರ್ವಮಾಖ್ಯಾತಂ ವಿಸ್ತರೇಣ ಮಹಾದ್ಯುತೇ |
ಕುರೂಣಾಂ ಚರಿತಂ ಕೃತ್ಸ್ನಂ ಪಾಂಡವಾನಾಂ ಚ ಭಾರತೇ ||

-ಮ.ಭಾ.(ಸ್ವರ್ಗಾರೋಹಣಪರ್ವ/೫/೮-೩೦)

- ದೇವತೆಗಳು ಮೊದಲಾದವರು ತಮ್ಮ ಮೂಲರೂಪವನ್ನು ಸೇರಿದ ವಿವರಗಳನ್ನೊಳಗೊಂಡ ಈ ಶ್ಲೋಕಗಳು ಸಮಯದಲ್ಲಿ ಅವತರಿಸಿದ್ದ ದೇವಾಸುರರ ಅಂಶಾವತಾರದ ವಿವೇಚನೆಗೂ ಸಹ ಅತ್ಯಂತ ಉಪಯುಕ್ತವಾಗಿವೆ.

ಕರ್ತವ್ಯಪರಾಯಣನನ್ನಾಗಿಸುವ ಕೌಶಲ, ಸೌಗಂಧಿಕಪುಷ್ಪ ಪಂಚವರ್ಣದ ಪುಷ್ಪಗಳನ್ನು ತರುವ ಕಾರ್ಯಗಳ ಮೂಲಕ ಭೀಮಸೇನನ ಅಪಾರವಾದ ಹಿರಿಮೆಯನ್ನು ಲೋಕಕ್ಕೆ ತೋರಿಸಿಕೊಡುವ ಅದ್ಭುತ ಪಾತಿವ್ರತ್ಯ, ಕೀಚಕನಂತಹ ಮಹಾನೀಚನ ಉಪಟಳವನ್ನು ಸಮರ್ಥವಾಗಿ ಎದುರಿಸಿ ನಿಂತ ಅದ್ಭುತ ತೇಜಸ್ಸು, ಪ್ರಸಂಗದ ಕಾರಣದಿಂದಾಗಿ ಸೈರಂಧ್ರಿ-ಯಂತಹ ಪರಿಚಾರಿಕೆಯ ವೇಷವನ್ನೂ ಸಹ ಸ್ವೀಕರಿಸಿ ಲೋಕಕ್ಕೆ ಧರ್ಮಸೂಕ್ಷ್ಮವನ್ನು ಸಾರುವ ಧರ್ಮದೀಕ್ಷೆ, ಎಂತಹ ಪರಮಾಪತ್ತಿನ ಪ್ರಸಂಗದಲ್ಲೂ ವರಾದಿಫಲಗಳನ್ನು ಅಪೇಕ್ಷಿಸದ ನಿಷ್ಕಾಮಕರ್ಮದ ದೀಕ್ಷೆ, ಜೀವನಪೂರ್ತಿಯಾಗಿ ಪಾಂಡವರೊಂದಿಗೆ ಸಕಲ ಸನ್ನಿವೇಶಗಳಲ್ಲೂ ಸಹ ಮಹಾಭಾರತದುದ್ದಕ್ಕೂ ಕಾಣಿಸಿಕೊಳ್ಳುವ ಪ್ರಾಧಾನ್ಯ, ಕೌರವರಂತಹ ಮಹಾನೀಚರು ಕೈಗೊಂಡಂತಹ ವಸ್ತ್ರಾಪಹರಣ ಮೊದಲಾದ ಅತ್ಯಂತ ಹೇಯ ಕಾರ್ಯಗಳ ಸಂದರ್ಭದಲ್ಲೂ ಶಾಪಾದಿಗಳನ್ನು ನೀಡದೇ ತೋರುವ ಸಂಯಮ, ವನವಾಸಕಾಲದಲ್ಲಿ ಅಕ್ಷಯಪಾತ್ರೆಯ ನೆಪದಲ್ಲಿ ಸಮಸ್ತ ಆಶ್ರಿತರಿಗೂ ಸಹ ನೀಡುತ್ತಿದ್ದ ಆತಿಥ್ಯ, ಮಹಾರಾಣಿಯಾಗಿ ಸಕಲ ಪ್ರಸಂಗಗಳಲ್ಲೂ ಇಡೀ ರಾಜ್ಯದ ಜನತೆಯ ಯೋಗಕ್ಷೇಮವನ್ನು ಸಂರಕ್ಷಿಸುತ್ತಿದ್ದ ಮಾತೃವಾತ್ಸಲ್ಯ – ಹೀಗೆ ಪ್ರತಿ ಪ್ರಸಂಗದಲ್ಲೂ ಸಹ ದ್ರೌಪದಿಯ ಪಾತ್ರ ಇತಿಹಾಸಪುರಾಣಪ್ರಪಂಚದಲ್ಲೇ ಅಪೂರ್ವವೆನ್ನಿಸುವಂತಹ ಸ್ತ್ರೀಪಾತ್ರವಾಗಿದೆ.

ಅಹಲ್ಯೆ, ಮಂಡೋದರೀ, ತಾರೆ, ಸುಕನ್ಯೆ, ಸಾವಿತ್ರೀ ಮೊದಲಾದ ಅನೇಕ ಪಾತ್ರಗಳನ್ನು ಪುರಾಣ ಪ್ರಪಂಚ ನೀಡಿದ್ದರೂ ಅವುಗಳ ಹಿರಿಮೆ ದ್ರೌಪದಿಯ ಪಾತ್ರಕ್ಕೆ ಹೋಲಿಸಿದಾಗ ಅತ್ಯಂತ ಸೀಮಿತ ಎಂಬುದು ಅವುಗಳ ಅಧ್ಯಯನ ಮಾಡಿದವರಿಗೆ ಸ್ಪಷ್ಟ. ಆದರೆ, ಮಹಾಭಾರತದಂತಹ ಲೋಕೋತ್ತರ ಕೃತಿಯಲ್ಲಿ ದ್ರೌಪದಿಯು ಚಿತ್ರಿತವಾಗಿರುವ ರೀತಿ ಜಾಗತಿಕ ಸಾಹಿತ್ಯದಲ್ಲೇ ಅತ್ಯಂತ ವಿಶಿಷ್ಟವೆನ್ನಿಸುವಂತಹುದು. ಕಥೆ ಕಾದಂಬರಿಗಳಲ್ಲೂ ಸಹ ಇಂತಹ ಸಂಕೀರ್ಣತೆಯನ್ನು ಒಳಗೊಂಡ ಮತ್ತೊಂದು ಪಾತ್ರ ಕಾಣಸಿಕ್ಕುವುದಿಲ್ಲ.

ಅರುಂಧತಿ, ಅನಸೂಯೆ, ಲೋಪಾಮುದ್ರೆ ಮೊದಲಾದ ಮುನಿಸ್ತ್ರೀಯರು ಸಹ ಎಂತಹ ಅಗಾಧ ತಪಸ್ಸಿನ ಹಿನ್ನೆಲೆಯಲ್ಲೂ ದ್ರೌಪದೀ ಪಾತ್ರದ ವೈಶಿಷ್ಟ್ಯದ ಸನಿಹವೂ ಬರಲಾರರು.

ಅದೇಕೇ, ಭೀಮ, ಹನುಮಂತರಂತಹ ಕೆಲವೇ ಪಾತ್ರಗಳನ್ನು ಹೊರತುಪಡಿಸಿದರೆ, ಇತರ ಸಕಲ ಪಾತ್ರಗಳಲ್ಲೂ ಸಹ ದ್ರೌಪದಿಯನ್ನು ಸರಿಗಟ್ಟುವ ಅತ್ಯದ್ಭುತವಾದ ಹಿರಿಮೆಯ ದರ್ಶನ ಅಶಕ್ಯವೇ ಸರಿ.

ದ್ರೌಪದಿಯ ಶ್ರೀಕೃಷ್ಣ ಭಕ್ತಿಯಂತೂ ಸ್ತ್ರೀಸಂಕುಲದಲ್ಲಿಯೇ ಅತ್ಯಂತ ವಿಲಕ್ಷಣ. ಅಕ್ಷಯವಸ್ತ್ರವನ್ನು ನೀಡುವ ಮೂಲಕ ಶ್ರೀಕೃಷ್ಣ ದ್ರೌಪದಿಯ ಮೇಲೆ ತೋರಿದ

ಹೀಗೆ ದ್ರೌಪದಿಯ ಪಾತ್ರ ಮಹಾಭಾರತದ ಪ್ರಧಾನವಾದ ಮಹಿಳಾಪಾತ್ರವಾಗಿ ಚಿತ್ರಿತವಾಗಿದೆ. ಕುಂತಿಯು ತನ್ನ ಧೈರ್ಯಕ್ಕೆ ಹೆಸರಾದವಳು. ಗಾಂಧಾರಿಯ ಧರ್ಮಪ್ರಜ್ಞೆ ಧೃತರಾಷ್ಟ್ರನನ್ನು ಮೀರಿಸಿತ್ತು. ಮಾದ್ರಿಯು ಚಿಕ್ಕ ವಯಸ್ಸಿನಲ್ಲಿಯೇ ದೇಹತ್ಯಾಗವನ್ನು ಮಾಡಿದಳು. ಸುಭದ್ರೆ ಶ್ರೀಕೃಷ್ಣನ ತಂಗಿಯೇ ಆದರೂ, ದ್ರೌಪದಿಯಂತೆ ಮಹತ್ವಪೂರ್ಣವಾದ ಸ್ಥಾನವನ್ನು ಮಹಾಭಾರದಲ್ಲಿ ಪಡೆದಿಲ್ಲ. ಚಿತ್ರಾಂಗದೆ ಮೊದಲಾದ ಇತರರ ಪಾತ್ರಗಳು ಪ್ರಾಸಂಗಿಕವಾಗಿ ಚಿತ್ರಿತವಾಗಿವೆ. ಹಿಡಿಂಬೆ ಘಟೋತ್ಕಚನ ಪಡೆದ ಕಾರ್ಯದಲ್ಲಿ ಕೃತಕೃತ್ಯಳಾದವಳು. ಉಲೂಪಿ ಅರ್ಜುನನಿಂದ ಗರ್ಭಾಧಾನ ಪಡೆದು ಇರಾವಂತನ ತಾಯಿ ಎನ್ನಿಸಿದಳು.

ಒಟ್ಟಾಗಿ ಇಡೀ ಮಹಾಭಾರತದಲ್ಲಿ ಅದ್ಭುತವಾದ ಅವತಾರ ಕ್ರಮ, ಲೋಕೋತ್ತರವಾದ ಸೌಂದರ್ಯ, ಅಪೂರ್ವವೆನ್ನಿಸುವ ಸ್ವಯಂವರ, ಅಶ್ರುತಪೂರ್ವವೆನ್ನಿಸುವ ದಾಂಪತ್ಯ, ವಿವಿಧ ಪ್ರಸಂಗಗಳಲ್ಲಿ ತೋರುವ ಅಪಾರವಾದ ಕ್ಷಾತ್ರತೇಜಸ್ಸು, ಯುಧಿ-ಷ್ಠಿರನಂತಹ ಮಹಾರಾಜನೊಂದಿಗೂ ಧಾರ್ಮಿಕ ಚರ್ಚೆಯನ್ನು ಮಾಡಿ ಅವನನ್ನು

---

ಧರ್ಮಮೇವಾವಿಶತ್ ಕ್ಷತ್ತಾ ರಾಜಾ ಚೈವ ಯುಧಿಷ್ಠಿರಃ ॥
ಅನಂತೋ ಭಗವಾನ್ ದೇವಃ ಪ್ರವಿವೇಶ ರಸಾತಲಮ್ ।
ಪಿತಾಮಹನಿಯೋಗಾದ್ ವೈ ಯೋ ಯೋಗಾದ್ ಗಾಮಧಾರಯತ್ ॥
ಯಃ ಸ ನಾರಾಯಣೋ ನಾಮ ದೇವದೇವಃ ಸನಾತನಃ ।
ತಸ್ಯಾಂಶೋ ವಾಸುದೇವಸ್ತು ಕರ್ಮಣೋಽಂತೇ ವಿವೇಶ ಹ ॥
ಷೋಡಶಸ್ತ್ರೀಸಹಸ್ರಾಣಿ ವಾಸುದೇವಪರಿಗ್ರಹಃ ।
ಅಮಜ್ಜಂಸ್ತಾಃ ಸರಸ್ವತ್ಯಾಂ ಕಾಲೇನ ಜನಮೇಜಯ ॥
ತತ್ರ ತ್ಯಕ್ತ್ವಾ ಶರೀರಾಣಿ ದಿವಮಾರುರುಹುಃ ಪುನಃ ।
ತಾಶ್ಚೈವಾಪ್ಸರಸೋ ಭೂತ್ವಾ ವಾಸುದೇವಮುಪಾವಿಶನ್ ॥
ಹತಾಸ್ತಸ್ಮಿನ್ ಮಹಾಯುದ್ಧೇ ಯೇ ವೀರಾಸ್ತು ಮಹಾರಥಾಃ ।
ಘಟೋತ್ಕಚಾದಯಶ್ಚೈವ ದೇವಾನ್ ಯಕ್ಷಾಂಶ್ಚ ಭೇಜಿರೇ ॥
ದುರ್ಯೋಧನಸಹಾಯಾಶ್ಚ ರಾಕ್ಷಸಾಃ ಪರಿಕೀರ್ತಿತಾಃ ।
ಪ್ರಾಪ್ತಾಸ್ತೇ ಕ್ರಮಶೋ ರಾಜನ್ ಸರ್ವಲೋಕಾನನುತ್ತಮಾನ್ ॥
ಭವನಂ ಚ ಮಹೇಂದ್ರಸ್ಯ ಕುಬೇರಸ್ಯ ಚ ಧೀಮತಃ ।
ವರುಣಸ್ಯ ತಥಾ ಲೋಕಾನ್ ವಿವಿಶುಃ ಪುರುಷರ್ಷಭಾಃ ॥
ಏತತ್ ತೇ ಸರ್ವಮಾಖ್ಯಾತಂ ವಿಸ್ತರೇಣ ಮಹಾದ್ಯುತೇ ।
ಕುರೂಣಾಂ ಚರಿತಂ ಕೃತ್ಸ್ನಂ ಪಾಂಡವಾನಾಂ ಚ ಭಾರತೇ ॥
-ಮ.ಭಾ.(ಸ್ವರ್ಗಾರೋಹಣಪರ್ವ/೫/೮-೩೦)

- ದೇವತೆಗಳು ಮೊದಲಾದವರು ತಮ್ಮ ಮೂಲರೂಪವನ್ನು ಸೇರಿದ ವಿವರಗಳನ್ನೊಳಗೊಂಡ ಈ ಶ್ಲೋಕಗಳು ಸಮಯದಲ್ಲಿ ಅವತರಿಸಿದ್ದ ದೇವಾಸುರರ ಅಂಶಾವತಾರದ ವಿವೇಚನೆಗೂ ಸಹ ಅತ್ಯಂತ ಉಪಯುಕ್ತವಾಗಿವೆ.

ಕರ್ತವ್ಯಪರಾಯಣನನ್ನಾಗಿಸುವ ಕೌಶಲ, ಸೌಗಂಧಿಕಪುಷ್ಪ ಪಂಚವರ್ಣದ ಪುಷ್ಪಗಳನ್ನು ತರುವ ಕಾರ್ಯಗಳ ಮೂಲಕ ಭೀಮಸೇನನ ಅಪಾರವಾದ ಹಿರಿಮೆಯನ್ನು ಲೋಕಕ್ಕೆ ತೋರಿಸಿಕೊಡುವ ಅದ್ಭುತ ಪಾತಿವ್ರತ್ಯ, ಕೀಚಕನಂತಹ ಮಹಾನೀಚನ ಉಪಟಳವನ್ನು ಸಮರ್ಥವಾಗಿ ಎದುರಿಸಿ ನಿಂತ ಅದ್ಭುತ ತೇಜಸ್ಸು ಪ್ರಸಂಗದ ಕಾರಣದಿಂದಾಗಿ ಸೈರಂಧ್ರಿ-ಯಂತಹ ಪರಿಚಾರಿಕೆಯ ವೇಷವನ್ನೂ ಸಹ ಸ್ವೀಕರಿಸಿ ಲೋಕಕ್ಕೆ ಧರ್ಮಸೂಕ್ಷ್ಮವನ್ನು ಸಾರುವ ಧರ್ಮದೀಕ್ಷೆ, ಎಂತಹ ಪರಮಾಪತ್ತಿನ ಪ್ರಸಂಗದಲ್ಲೂ ವರಾದಿಫಲಗಳನ್ನು ಅಪೇಕ್ಷಿಸದ ನಿಷ್ಕಾಮಕರ್ಮದ ದೀಕ್ಷೆ, ಜೀವನಪೂರ್ತಿಯಾಗಿ ಪಾಂಡವರೊಂದಿಗೆ ಸಕಲ ಸನ್ನಿವೇಶಗಳಲ್ಲೂ ಸಹ ಮಹಾಭಾರತದುದ್ದಕ್ಕೂ ಕಾಣಿಸಿಕೊಳ್ಳುವ ಪ್ರಾಧಾನ್ಯ, ಕೌರವರಂತಹ ಮಹಾನೀಚರು ಕೈಗೊಂಡಂತಹ ವಸ್ತ್ರಾಪಹರಣ ಮೊದಲಾದ ಅತ್ಯಂತ ಹೇಯ ಕಾರ್ಯಗಳ ಸಂದರ್ಭದಲ್ಲೂ ಶಾಪಾದಿಗಳನ್ನು ನೀಡದೇ ತೋರುವ ಸಂಯಮ, ವನವಾಸಕಾಲದಲ್ಲಿ ಅಕ್ಷಯಪಾತ್ರೆಯ ನೆಪದಲ್ಲಿ ಸಮಸ್ತ ಆಶ್ರಿತರಿಗೂ ಸಹ ನೀಡುತ್ತಿದ್ದ ಆತಿಥ್ಯ, ಮಹಾರಾಣಿಯಾಗಿ ಸಕಲ ಪ್ರಸಂಗಗಳಲ್ಲೂ ಇಡೀ ರಾಜ್ಯದ ಜನತೆಯ ಯೋಗಕ್ಷೇಮವನ್ನು ಸಂರಕ್ಷಿಸುತ್ತಿದ್ದ ಮಾತೃವಾತ್ಸಲ್ಯ – ಹೀಗೆ ಪ್ರತಿ ಪ್ರಸಂಗದಲ್ಲೂ ಸಹ ದ್ರೌಪದಿಯ ಪಾತ್ರ ಇತಿಹಾಸಪುರಾಣಪ್ರಪಂಚದಲ್ಲೇ ಅಪೂರ್ವವೆನ್ನಿಸುವಂತಹ ಸ್ತ್ರೀಪಾತ್ರವಾಗಿದೆ.

ಅಹಲ್ಯೆ, ಮಂಡೋದರೀ, ತಾರೆ, ಸುಕನ್ಯೆ, ಸಾವಿತ್ರೀ ಮೊದಲಾದ ಅನೇಕ ಪಾತ್ರಗಳನ್ನು ಪುರಾಣ ಪ್ರಪಂಚ ನೀಡಿದ್ದರೂ ಅವುಗಳ ಹಿರಿಮೆ ದ್ರೌಪದಿಯ ಪಾತ್ರಕ್ಕೆ ಹೋಲಿಸಿದಾಗ ಅತ್ಯಂತ ಸೀಮಿತ ಎಂಬುದು ಅವುಗಳ ಅಧ್ಯಯನ ಮಾಡಿದವರಿಗೆ ಸ್ಪಷ್ಟ. ಆದರೆ, ಮಹಾಭಾರತದಂತಹ ಲೋಕೋತ್ತರ ಕೃತಿಯಲ್ಲಿ ದ್ರೌಪದಿಯು ಚಿತ್ರಿತವಾಗಿರುವ ರೀತಿ ಜಾಗತಿಕ ಸಾಹಿತ್ಯದಲ್ಲೇ ಅತ್ಯಂತ ವಿಶಿಷ್ಟವೆನ್ನಿಸುವಂತಹುದು. ಕಥೆ ಕಾದಂಬರಿಗಳಲ್ಲೂ ಸಹ ಇಂತಹ ಸಂಕೀರ್ಣತೆಯನ್ನು ಒಳಗೊಂಡ ಮತ್ತೊಂದು ಪಾತ್ರ ಕಾಣಸಿಕ್ಕುವುದಿಲ್ಲ.

ಅರುಂಧತಿ, ಅನಸೂಯೆ, ಲೋಪಾಮುದ್ರೆ ಮೊದಲಾದ ಮುನಿಸ್ತ್ರೀಯರು ಸಹ ಎಂತಹ ಅಗಾಧ ತಪಸ್ಸಿನ ಹಿನ್ನೆಲೆಯಲ್ಲೂ ದ್ರೌಪದೀ ಪಾತ್ರದ ವೈಶಿಷ್ಟ್ಯದ ಸನಿಹವೂ ಬರಲಾರರು.

ಅದೇಕೇ, ಭೀಮ, ಹನುಮಂತರಂತಹ ಕೆಲವೇ ಪಾತ್ರಗಳನ್ನು ಹೊರತುಪಡಿಸಿದರೆ, ಇತರ ಸಕಲ ಪಾತ್ರಗಳಲ್ಲೂ ಸಹ ದ್ರೌಪದಿಯನ್ನು ಸರಿಗಟ್ಟುವ ಅತ್ಯದ್ಭುತವಾದ ಹಿರಿಮೆಯ ದರ್ಶನ ಅಶಕ್ಯವೇ ಸರಿ.

ದ್ರೌಪದಿಯ ಶ್ರೀಕೃಷ್ಣ ಭಕ್ತಿಯಂತೂ ಸ್ತ್ರೀಸಂಕುಲದಲ್ಲಿಯೇ ಅತ್ಯಂತ ವಿಲಕ್ಷಣ. ಅಕ್ಷಯವಸ್ತ್ರವನ್ನು ನೀಡುವ ಮೂಲಕ ಶ್ರೀಕೃಷ್ಣ ದ್ರೌಪದಿಯ ಮೇಲೆ ತೋರಿದ

ವಾತ್ಸಲ್ಯ, ಕರುಣೆಗಳು ಸ್ತ್ರೀಕುಲಕ್ಕೇ ಸಂದ ಮನ್ನಣೆಯ ಸಂಕೇತದಂತಿದೆ. ಕೇವಲ ಭಕ್ತೆಯಾಗಿಯೂ ಸಹ ದ್ರೌಪದಿಯ ಎತ್ತರವನ್ನು ತಲುಪಬಲ್ಲ ಮತ್ತೊಂದು ಸ್ತ್ರೀಪಾತ್ರವನ್ನು ಕಾಣಲಾಗದು. ಹೀಗೆ ಅಗ್ನಿಪುತ್ರಿಯಾಗಿ, ವಾಯುಪತ್ನಿಯಾಗಿ, ಶ್ರೀಕೃಷ್ಣಭಕ್ತೆಯಾಗಿ ದ್ರೌಪದಿಯ ಪಾತ್ರ ಅಜರಾಮರ.

## ದ್ರೌಪದೀ ಪಾತ್ರದ ಅಧ್ಯಾತ್ಮ

ಮಹಾಭಾರತವು ಮೂಲತಃ ಆಧ್ಯಾತ್ಮಿಕ ಕೃತಿ. ಅದಕ್ಕೆ ಇರುವ ಮೂರು ಅರ್ಥಗಳಲ್ಲಿ ಮೊದಲನೆಯದು ಆಧ್ಯಾತ್ಮಿಕ ಅರ್ಥವೇ ಆಗಿದೆ. ಐತಿಹಾಸಿಕವಾಗಿ ಅದು ಪಾಂಡವ-ಕೌರವರ ಇತಿಹಾಸ. ಕೊನೆಯದಾಗಿ ಭಗವಂತನಾದ ನಾರಾಯಣನ ಗುಣಗಣಗಳ ಕಥನ ಎಂಬ ಔಪರಿಚರಾರ್ಥ.

ಯುಧಿಷ್ಠಿರನು ಎಂದರೆ ಧರ್ಮದ ಸಂಕೇತ; ಭೀಮಸೇನ ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞೆ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ ಹಾಗೂ ಬಲ ಎಂಬ ಹತ್ತು ಗುಣಗಳ ಸಂಕೇತ. ಅರ್ಜುನನು ಶ್ರವಣ, ಮನನ ಹಾಗೂ ಧ್ಯಾನ ಎಂಬ ಮೂರು ಗುಣಗಳ ಸಂಕೇತ. ನಕುಲನು ಶೀಲದ ಸಂಕೇತವಾದರೆ, ಸಹದೇವನು ವಿನಯದ ಸಂಕೇತ. ಭಾವಿಸರಸ್ವತೀ ಎನ್ನಿಸಿದ ದ್ರೌಪದಿಯು ಸಕಲವಿದ್ಯೆಗಳ ಸಂಕೇತ. ಭಗವಂತನಾದ ಶ್ರೀಕೃಷ್ಣ ಪರಬ್ರಹ್ಮನ ಸಂಕೇತ. ಹೀಗೆ ಹದಿನೆಂಟು ತಾತ್ತ್ವಿಕಗುಣಗಳ ಕಥನ ಮಹಾಭಾರತದ ಪ್ರಧಾನ ಅರ್ಥಗಳಲ್ಲೊಂದು[1].

---

೧ ಮನ್ವಾದಿ ಕೇಚಿದ್ಬ್ರುವತೇ ಹ್ಯಾಸ್ತೀಕಾದಿ ತಥಾऽಪರೇ।
ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ ॥
ಸಕೃಷ್ಣಾನ್ ಪಾಂಡವಾನ್ ಗೃಹ್ಯ ಯೋऽಯಮರ್ಥಃ ಪ್ರವರ್ತತೇ।
ಪ್ರಾತಿಲೋಮ್ಯಾದಿವೈಚಿತ್ರ್ಯಾತ್ ತಮಾಸ್ತೀಕಂ ಪ್ರಚಕ್ಷತೇ ॥
ಧರ್ಮೋ ಭಕ್ತ್ಯಾದಿದಶಕಃ ಶ್ರುತಾದಿಃ ಶೀಲವೈನಯೌ।
ಸಬ್ರಹ್ಮಕಾಸ್ತು ತೇ ಯತ್ರ ಮನ್ವಾದಿಂ ತಂ ವಿದುರ್ಬುಧಾಃ ॥
ನಾರಾಯಣಸ್ಯ ನಾಮಾನಿ ಸರ್ವಾಣಿ ವಚನಾನಿ ತು।
ತತ್ಸಾಮರ್ಥ್ಯಾಭಿಧಾಯೀನಿ ತಮೌಪರಿಚರಂ ವಿದುಃ ॥
ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ।
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ ॥
ಏತದ್ದಶಾತ್ಮಕೋ ವಾಯುಸ್ತಸ್ಮಾದ್ಭೀಮಸ್ತದಾತ್ಮಕಃ।
ಸರ್ವವಿದ್ಯಾ ದ್ರೌಪದೀ ತು ಯಸ್ಮಾತ್ ಸೈವ ಸರಸ್ವತೀ ॥
ಅಜ್ಞಾನಾದಿಸ್ವರೂಪಸ್ತು ಕಲಿರ್ದುರ್ಯೋಧನಃ ಸ್ಮೃತಃ।
ವಿಪರೀತಂ ತು ಯಜ್ಜ್ಞಾನಂ ದುಶ್ಶಾಸನ ಇತೀರಿತಃ ॥
ನಾಸ್ತಿಕ್ಯಂ ಶಕುನಿರ್ನಾಮ ಸರ್ವದೋಷಾತ್ಮಕಾಃ ಪರೇ।
ಧಾರ್ತರಾಷ್ಟ್ರಾಸ್ತ್ವಹಂಕಾರೋ ದ್ರೌಣೀ ರುದ್ರಾತ್ಮಕೋ ಯತಃ ॥

ದ್ರೌಪದಿಯು ಭಾವಿ ಸರಸ್ವತಿಯಾದ್ದರಿಂದ ಸಕಲ ವಿದ್ಯಾಧಿದೇವತೆ[೧] ಎನಿಸಿರುವಳು. ರಾಮಾಯಣವು ಮಹಾಲಕ್ಷ್ಮಿಯ ಅವತಾರಳಾದ ಸೀತೆಯ ಚರಿತ್ರೆಯಾಗಿರುವಂತೆ, ಮಹಾಭಾರತವು ವಿದ್ಯಾಧಿದೇವತೆಯಾದ ಸರಸ್ವತಿಯ ಚರಿತ್ರೆಯಾಗಿದೆ. ಹೀಗೆ ದ್ರೌಪದಿಯ ಪಾತ್ರವೆಂದರೆ ಸರಸ್ವತಿಯ ವಿಲಾಸ ಎಂದೇ ಅರ್ಥ. ಅದನ್ನು ಲೋಕಕ್ಕೆ ಸಾರಿದ ಬೃಹತ್ಕೃತಿ ಶ್ರೀವೇದವ್ಯಾಸರ ಶ್ರೀಮನ್ಮಹಾಭಾರತ. ಅದರ ಸಾರಸರ್ವಸ್ವವನ್ನು ಸೆರೆ ಹಿಡಿದ ಅಪೂರ್ವ ಕೃತಿ ಆಚಾರ್ಯ ಶ್ರೀಮಧ್ವರ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ.

*****

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

*****

॥ ಶ್ರೀಕೃಷ್ಣಾರ್ಪಣಮಸ್ತು ॥

*****

**ಭವತಿ ಯದನುಭಾವಾದೇಡಮೂಕೋಪಿ ವಾಗ್ಮೀ**
**ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।**
**ಸಕಲವಚನಚೇತೋದೇವತಾ ಭಾರತೀ ಸಾ**
**ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥**

**- ಶ್ರೀಜಯತೀರ್ಥರು (ನ್ಯಾಯಸುಧಾ)**

*****

---

ದ್ರೋಣಾದ್ಯಾ ಇಂದ್ರಿಯಾಣ್ಯೇವ ಪಾಪಾನ್ಯನ್ಯೇ ತು ಸೈನಿಕಾಃ ।
ಪಾಂಡವೇಯಾಶ್ಚ ಪುಣ್ಯಾನಿ ತೇಷಾಂ ವಿಷ್ಣುರ್ನಿಯೋಜಕಃ ॥
ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ ।
ದುರ್ವಿಜ್ಞೇಯಮತಃ ಸರ್ವೈರ್ಭಾರತಂ ತು ಸುರೈರಪಿ ॥
ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ ।
ತಥಾಽಪಿ ವಿಷ್ಣುಪರತಾ ಭಾರತೇ ಸಾರಸಂಗ್ರಹಃ ॥ - ಮ.ಭಾ.ತಾ.ನಿ.(೨/೧೩೭-೧೪೭)

೧ ಸರ್ವವಿದ್ಯಾ ದ್ರೌಪದೀ - ಮ.ಭಾ.ತಾ.ನಿ (೨/★★

# ನೀತಿಕೋವಿದ ವಿದುರ

ಲೇ : ಡಾ. ಜಯಂತ ವ್ಯಾಸನಕೆರೆ
ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾನಿಲಯ, ಬೆಂಗಳೂರು

ಶ್ರೀವೇದವ್ಯಾಸರ ಮಹಾಭಾರತವು ಅನನ್ಯವಾದಂತಹ ವಿಶ್ವಕೋಶ. ಇದರಲ್ಲಿಲ್ಲದ್ದೇ ಇಲ್ಲ. ಇದರಲ್ಲಿರುವುದೇ ಎಲ್ಲ. ಮಹಾಭಾರತವೇ ಹೇಳುವಂತೆ - **ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್** - ೧೮/೫/೫೦. ವೇದಾಧಿಕಾರಿಗಳಿಗೆ ವೇದಾರ್ಥನಿರ್ಣಯಕ್ಕಾಗಿ ಮಹಾಭಾರತ ಬೇಕು. ಅನಧಿಕಾರಿಗಳಿಗೆ ಇದೇ ವೇದವಿದ್ದಂತೆ; ಪಂಚಮವೇದ. ಸರಿಯಾಗಿ ತಿಳಿದರೆ ಧರ್ಮಾರ್ಥಕಾಮಮೋಕ್ಷಗಳೇ ಪ್ರಯೋಜನ. ಒಟ್ಟಾರೆ, ನಿಃಶ್ರೇಯಶಾಸ್ತ್ರಗಳಲ್ಲೆಲ್ಲ ಮಹಾಭಾರತವೇ ಸರ್ವೋತ್ತಮ.

ಆದರೂ, ವಿಸ್ತಾರವಾದ ಮಹಾಭಾರತದಲ್ಲಿ ವೇದವ್ಯಾಸರು ವಿಕ್ಷಿಪ್ತವಾಗಿ ವಿಷಯಗಳನ್ನು ವರ್ಣಿಸಿದ್ದಾರೆ. ಈಗಂತೂ ಮಹಾಭಾರತದ ಮೂಲಪಾಠವೇ ಸಂದಿಗ್ಧ. ಮಿಗಿಲಾಗಿ ಕವಿಗಳ, ನಾಟಕಕಾರರ, ಅಪವ್ಯಾಖ್ಯಾನಗಳ, ಇತ್ತೀಚಿನ ದೂರದರ್ಶನಗಳ, ಬುದ್ಧಿಜೀವಿಗಳೆನಿಸಿಕೊಂಡವರ, ಎನಿಸಿಕೊಳ್ಳುವ ತವಕದಲ್ಲಿರುವವರ ಅವಿರತ ಅಪಚಾರ. ಹೀಗಿರುವಾಗ ಬೇರೆ ಬೇರೆ ಪ್ರದೇಶಗಳಲ್ಲಿನ ಹಸ್ತಪ್ರತಿಗಳನ್ನು ಕಂಡು, ಸರಿಯಾದ ಪಾಠವನ್ನು ಗುರುತಿಸಿ, ಅದರ ಸರಿಯಾದ ಅರ್ಥವನ್ನು ಭಾಗವತಾದಿಗಳೊಂದಿಗೆ ಏಕವಾಕ್ಯತೆ ಬರುವಂತೆ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸಂಗ್ರಹಿಸಿ, ನಿರ್ಣಯಿಸಿರುವುದು ತತ್ತ್ವಜಿಜ್ಞಾಸುಗಳಿಗೆ, ಇತಿಹಾಸ ಸಂಶೋಧಕರಿಗೆ ಶ್ರೀಮದಾಚಾರ್ಯರು ಮಾಡಿರುವಂತಹ ಪರಮೋಪಕಾರ. ವೈವಿಧ್ಯಮಯವಾದ ಪಾತ್ರಪ್ರಪಂಚದಲ್ಲಿ ಶಾಸ್ತ್ರೋಕ್ತಕ್ರಮದಲ್ಲಿ ವಿಶ್ಲೇಷಣೆ ಮಾಡುತ್ತಾ ಒಂದೊಂದು ಪಾತ್ರಕ್ಕೂ ಯಥೋಚಿತ ನ್ಯಾಯ ದೊರಕಿಸಿಕೊಟ್ಟ ಶ್ರೇಯಸ್ಸೂ ಶ್ರೀಮದಾಚಾರ್ಯರಿಗೇ ಸಲ್ಲಬೇಕು. ಮಹಾಭಾರತಕ್ಕೆ (ಅಥವಾ ರಾಮಾಯಣಕ್ಕೆ) ಸಂಬಂಧಿಸಿದ ವಿಚಾರಗಳಲ್ಲಿ ಅಧ್ಯಯನ ಮಾಡಲು ಹೊರಟ ಯಾರಿಗೇ ಆಗಲಿ ಇದು ಅನುಭವವೇದ್ಯವಾಗುವುದರಲ್ಲಿ ಎರಡನೆಯ ಮಾತೇ ಇಲ್ಲ. ಅದಕ್ಕೇ ಶ್ರೀನಾರಾಯಣಪಂಡಿತಾಚಾರ್ಯರು ಹಾಡಿ ಹೊಗಳಿದ್ದು:

ಇತಿಹಾಸಪುರಾಣಾಬ್ಧೇರ್ಭವಚ್ಚಿತ್ತಾದ್ರಿಲೋಡಿತಾತ್ ।
ಜಾತಾಂ ಭಾರತತಾತ್ಪರ್ಯಸುಧಾಂ ಕಃ ಸನ್ನ ಸೇವತೇ ॥[೧]

ಇನ್ನು ವಿದುರನ ಬಗ್ಗೆ ಹೇಳಬೇಕೆಂದರೆ, ಕೆಳಜಾತಿಯವನಾಗಿ ಜನಿಸಿ ಕುರುಕುಲದ ಅಗ್ರಮಾನ್ಯ ಧರ್ಮಿಷ್ಠರ ಸಾಲಿಗೆ ಸೇರುತ್ತಾನೆ ವಿದುರ. ಅವನ ಧಾರ್ಮಿಕತೆಗೆ, ಸಾಕ್ಷಾತ್ ಶ್ರೀಕೃಷ್ಣನು ತನಗೆ ಅಗ್ರಪೂಜೆ ಮಾಡಿಸಿದ ಭೀಷ್ಮರಿಂದ ಹಿಡಿದು ಮಹಾರಾಜನ ಸ್ಥಾನದಲ್ಲಿದ್ದ

೧ ಮಧ್ವವಿಜಯ ೧೫/೭೬

ದುರ್ಯೋಧನನವರೆಗೆ ಎಲ್ಲರ ಆತಿಥ್ಯವನ್ನು ತೊರೆದು ವಿದುರನ ಆತಿಥ್ಯವನ್ನು ಸ್ವೀಕರಿಸಿ **ವಿದುರಾಕ್ರೂರವರದಃ** (ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರ-೧೫) ಎನ್ನಿಸಿದ್ದೇ ಸಾಕ್ಷಿ.

ಸತ್ಯಸಂಧರಾದ, ಧರ್ಮಿಷ್ಠರಾದ ಪಾಂಡವರು ಸಹಜವಾಗಿಯೇ ವಿದುರನಿಗೆ ಪ್ರಿಯರಾಗುತ್ತಾರೆ. ಪಾಂಡವರಿಗೂ ವಿದುರನೆಂದರೆ ಅಚ್ಚುಮೆಚ್ಚು. ಅಧರ್ಮದ ಸಾಕಾರಮೂರ್ತಿಗಳಾದ ದುರ್ಯೋಧನಾದಿ ಕೌರವರು ಸಹಜವಾಗಿಯೇ ಅವನಿಗೆ ಅಪ್ರಿಯರಾಗುತ್ತಾರೆ. ಸತ್ಯವಿಧುರರಾದ ಹಾಗೂ ಧರ್ಮವಿದೂರರಾದ ಅವರಿಗೂ ವಿದುರನೆಂದರೆ ಇತ್ತ ನುಂಗಲೂ ಆಗದ ಅತ್ತ ಉಗುಳಲೂ ಆಗದ ಬಿಸಿ ತುಪ್ಪವಿದ್ದಂತೆ. ಕೌರವರಿಗೆ ಶಕುನಿ ಇದ್ದಂತೆ ಪಾಂಡವರಿಗೆ ವಿದುರ. ಸ್ವತಃ ಯಮಧರ್ಮನಾದ ವಿದುರನ ಪಾಂಡವಪಕ್ಷಪಾತ ಧರ್ಮಪಕ್ಷಪಾತವೇ ಸರಿ.

ಪ್ರಜ್ಞಾ, ಧೃತಿ ಮೊದಲಾದವು (ಮ.ಭಾ.ತಾ.ನಿ. ೨/೧೪೨) ಪ್ರಧಾನವಾಗಿ, ಪರಿಪೂರ್ಣವಾಗಿ ಭೀಮಸೇನನ ಗುಣಗಳು. ಇವು ಕ್ರಮವಾಗಿ ವಿದುರ, ಕುಂತಿ ಮೊದಲಾದವರ ಪಾತ್ರಗಳಲ್ಲೂ ಪ್ರತಿಫಲಿತವಾಗಿವೆ:

ಕ್ಷತ್ತುಃ ಪ್ರಜ್ಞಾಂ ಧೃತಿಂ ಕುಂತ್ಯಾಃ ಸಾಹ್ಯಂ(ಸಮ್ಯಕ್) ದ್ವೈಪಾಯನೋಽಬ್ರವೀತ್ ॥[1]

'ಪ್ರಜ್ಞಾ' ಎಂದರೆ ವಿಚಾರಗಳನ್ನು ಶೀಘ್ರವಾಗಿ ಗ್ರಹಿಸುವ ಸಾಮರ್ಥ್ಯ. ದುರ್ಯೋಧನಾದಿಗಳ ಕೇಡು ಬುದ್ಧಿಯನ್ನು, ಅವರ ಒಳ ಸಂಚನ್ನು, ಧೃತರಾಷ್ಟ್ರನ ಪುತ್ರವ್ಯಾಮೋಹದಿಂದ ಸಹಕೃತವಾದ ಅಸಹಾಯಕತೆಯನ್ನು ಗಮನಿಸಿ ಸೂಕ್ತ ರೀತಿಯಲ್ಲಿ ವಿದುರನು ಪ್ರತಿಕ್ರಿಯಿಸಿದ್ದನ್ನು ಅರಗಿನ ಮನೆ ಮೊದಲಾದ ಸಂದರ್ಭಗಳಲ್ಲಿ ಸ್ಪಷ್ಟವಾಗಿ ಗಮನಿಸಬಹುದು. ಆದ್ದರಿಂದ ವಿದುರನು ಒಬ್ಬ ಪ್ರಜ್ಞಾವಂತ. ದ್ಯೂತದ ಪ್ರಸಂಗದಲ್ಲೂ ವಿದುರನ ಧರ್ಮಪ್ರಜ್ಞೆ ಕಂಗೊಳಿಸುತ್ತದೆ. ಅಲ್ಲದೇ, ಶ್ರೀಮದಾಚಾರ್ಯರೂ ವಿದುರನನ್ನು ಹುಟ್ಟುತ್ತಲೇ ಜ್ಞಾನಿ ಎಂಬುದಾಗಿ ಸೂತ್ರಭಾಷ್ಯದಲ್ಲಿ ಪ್ರಶಂಸಿಸಿದ್ದಾರೆ: **ವಿದುರಾದೀನಾಂ ತೂತ್ಪನ್ನಜ್ಞಾನತ್ವಾತ್ ಕಶ್ಚಿದ್ವಿಶೇಷಃ ।** – (ಬ್ರಹ್ಮಸೂತ್ರಭಾಷ್ಯ – ೧/೩/೩೮).

ವಿದುರನ ಜನನದ ಹಿನ್ನೆಲೆಯಿಂದಾರಂಭಿಸಿ ದೇಹತ್ಯಾಗದವರೆಗೂ ಮಹಾಭಾರತದಲ್ಲಿ ವಿಸ್ತೃತವಾದ ನಿರೂಪಣೆ ಇದೆ. ಆತ ಮಾಡಿದ ತೀರ್ಥಯಾತ್ರೆ, ಮೊದಲಾದ ಅನೇಕ ವಿವರಗಳು ಭಾಗವತದಲ್ಲೂ ದೊರೆಯುತ್ತವೆ. ಮೇಲ್ನೋಟಕ್ಕೆ ನೋಡಿದಾಗ ಕೆಲವು ವಿಚಾರಗಳಲ್ಲಿ ಭಾಗವತದ ನಿರೂಪಣೆಗೂ ಮಹಾಭಾರತದ ನಿರೂಪಣೆಗೂ ವ್ಯತ್ಯಾಸಗಳು ತೋರುವವು. ವಿದುರನ ವಿಚಾರದಲ್ಲಂತೂ ಪ್ರಥಮಸ್ಕಂಧದ ೧೨ನೇ ಅಧ್ಯಾಯ ಹಾಗೂ

---

೧ ಮ.ಭಾ. ೧/೧/೭೫

ತೃತೀಯಸ್ಕಂಧದ ಆರಂಭದ ಅಧ್ಯಾಯಗಳನ್ನು ನೋಡಿ ಮಹಾಭಾರತದೊಂದಿಗೆ ತುಲನೆ ಮಾಡಿದಾಗ ಆನುಪೂರ್ವಿಯೇ ತಿಳಿಯದಂತಾಗಿ ಅನೇಕ ಗೊಂದಲಗಳು ಹುಟ್ಟಿಕೊಳ್ಳುವವು. ಅವೆಲ್ಲವನ್ನು ಬಗೆಹರಿಸಿದ್ದು ಶ್ರೀಮದಾಚಾರ್ಯರ ಭಾಗವತ- ತಾತ್ಪರ್ಯನಿರ್ಣಯದ ಹಿರಿಮೆ. ಇಲ್ಲಿ ಅನಾವರಣಗೊಳಿಸಿರುವ ನ್ಯಾಯದ ಹಿನ್ನೆಲೆಯಲ್ಲಿ ಇತರ ಪುರಾಣಗಳಲ್ಲಿನ ವಿರೋಧಗಳನ್ನೂ ಪರಿಹರಿಸಿಕೊಳ್ಳಲು ಸಾಧ್ಯವಿದೆ. ಹೀಗೆ ಪುರಾಣಗಳನ್ನು ಅಧ್ಯಯನ ಮಾಡುವವರಿಗೆ ಇದು ದಾರಿದೀಪವಾಗಿದೆ:

ಪುರಾಣಸ್ಥಾನಪಾಂಥಾನಾಮಭಾಷಾತ್ರಯವೇದಿನಾಮ್ ।
ಭವತಾ ಸುಸಖಾ ಚಕ್ರೇ ಶ್ರೀಭಾಗವತನಿರ್ಣಯಃ ॥[೧]

ಪ್ರಸ್ತುತ, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಭಾಗವತತಾತ್ಪರ್ಯ-ನಿರ್ಣಯಗಳನ್ನು ಮುಖ್ಯವಾಗಿ ಅವಲಂಬಿಸಿ, ವಿದುರನ ಬಗೆಗಿನ ಮಾಹಿತಿಗಳನ್ನು ಹಾಗೂ ವಿಮರ್ಶೆಗಳನ್ನು ಕ್ರೋಡೀಕರಿಸಿ ನೀಡಲಾಗಿದೆ. ಅವುಗಳಲ್ಲಿ ವಿದುರನ ಬಗ್ಗೆ ಹೇಳಿರುವ ವಾಕ್ಯಗಳನ್ನು ಸಂಗ್ರಹಿಸಿ ಸೂಕ್ತಕ್ರಮದಲ್ಲಿ ಉದಾಹರಿಸಲಾಗಿದೆ. ಮೂಲಮಹಾಭಾರತ ಹಾಗೂ ಭಾಗವತದ ವಾಕ್ಯಗಳನ್ನೂ ಅಲ್ಲಲ್ಲಿ ಪೂರಕವಾಗಿ ಉದಾಹರಿಸಲಾಗಿದೆ. ವಿದುರನ ಬಗ್ಗೆ ತಿಳಿಯಹೊರಟವರಿಗೆ ಶ್ರೀಮದಾಚಾರ್ಯರು ಇತಿಹಾಸವೆಂದು ನಿರ್ಣಯಿಸಿ ನೀಡಿ-ರುವುದೇನೆಂಬುದನ್ನು ತಿಳಿಯಲು ಇದು ಸಹಕಾರಿಯಾಗುತ್ತದೆ. ಕೊನೆಯಲ್ಲಿ ವಿದುರನೀತಿಯ ಸಂಗ್ರಹವನ್ನು ಹಾಗೂ ಶ್ರೀಪುರಂದರದಾಸರ ಕೃತಿಯೊಂದನ್ನು ನೀಡಲಾಗಿದೆ.

ಈ ಲೇಖನದ ರಚನೆಯ ಹಲವುಭಾಗಗಳಲ್ಲಿ ಪೂಜ್ಯ ಗುರುಗಳಾದ ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದ ಅನುವಾದ-ವಿವರಣೆಗಳಿಂದ ಬಹಳ ಉಪಕೃತನಾಗಿದ್ದೇನೆ.

## ಸಂಕೇತಸೂಚಿ

೧. **ಮ.ಭಾ.** : ಶ್ರೀವೇದವ್ಯಾಸಕೃತವಾದ ಮಹಾಭಾರತ (ಇಲ್ಲಿ ಉಲ್ಲೇಖಿತವಾದ ಅಧ್ಯಾಯ ಮತ್ತು ಶ್ಲೋಕ ಸಂಖ್ಯೆಗಳು ಶ್ರೀ ಟಿ. ಆರ್. ಕೃಷ್ಣಾಚಾರ್ಯರು ಮತ್ತು ಶ್ರೀ ಟಿ. ಆರ್. ವ್ಯಾಸಾಚಾರ್ಯರು ಸಂಪಾದಿಸಿರುವ ಮುದ್ರಣಕ್ಕೆ ಅನ್ವಯವಾಗುವವು.)

೨. **ಮ.ಭಾ.ತಾ.ನಿ.** : ಶ್ರೀಮಧ್ವಾಚಾರ್ಯಕೃತವಾದ ಮಹಾಭಾರತತಾತ್ಪರ್ಯ-ನಿರ್ಣಯ

೪. **ಭಾ.ತಾ.** : ಶ್ರೀಮಧ್ವಾಚಾರ್ಯಕೃತವಾದ ಭಾಗವತತಾತ್ಪರ್ಯನಿರ್ಣಯ

*****

೧ ಮಧ್ವವಿಜಯ ೧೫/೭೭

# ನೀತಿಕೋವಿದ ವಿದುರ

## ವಿದುರನ ಜನನ

ಶಂತನು ಮಹಾರಾಜನಿಗೆ ಗಂಗೆಯಲ್ಲಿ ಹುಟ್ಟಿದವರು ಭೀಷ್ಮರು; ಸತ್ಯವತಿಯಲ್ಲಿ ಹುಟ್ಟಿದವರು ಚಿತ್ರಾಂಗದ ಮತ್ತು ವಿಚಿತ್ರವೀರ್ಯ. ಅವರಿಬ್ಬರ ಬಾಲ್ಯದಲ್ಲಿಯೇ ಶಂತನು ದೇಹ ತೊರೆದ. ತಾವು ರಾಜ್ಯವಾಳುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದ ಭೀಷ್ಮರು ಬಳಿಕ ಚಿತ್ರಾಂಗದನನ್ನು ರಾಜ್ಯಕ್ಕೆ ಉತ್ತರಾಧಿಕಾರಿಯನ್ನಾಗಿಸಿದರು. ಅವನು ಚಿತ್ರಾಂಗದನೆಂಬ ಹೆಸರಿನವನೇ ಆದ ಗಂಧರ್ವನಿಂದ, ಆ ಹೆಸರಿನವನು ಒಬ್ಬನೇ ಇರಬೇಕೆಂಬ ವಿಚಾರವಾಗಿ ಯುದ್ಧವಾದಾಗ, ಹತನಾದ. ಅನಂತರ ವಿಚಿತ್ರವೀರ್ಯನನ್ನು ರಾಜನನ್ನಾಗಿಸಿ ಭೀಷ್ಮರೇ ರಾಜ್ಯವನ್ನು ಮುನ್ನಡೆಸಿದರು. ಕಾಶಿರಾಜನ ಮೂವರು ಪುತ್ರಿಯರಲ್ಲಿ ಅಂಬಿಕಾ ಮತ್ತು ಅಂಬಾಲಿಕಾ ಎಂಬ ಇಬ್ಬರನ್ನು ಭೀಷ್ಮರು ವಿಚಿತ್ರವೀರ್ಯನಿಗೆ ಮದುವೆ ಮಾಡಿಸಿದರು. ವಿಚಿತ್ರವೀರ್ಯನು ಏಳು ವರ್ಷ ಅವರಲ್ಲಿ ಅತಿಸಕ್ತನಾಗಿ, ಕ್ಷಯರೋಗಕ್ಕೆ ತುತ್ತಾಗಿ ಇನ್ನೂ ತರುಣನಿದ್ದಾಗಲೇ ಮೃತಪಟ್ಟ. ಚಿತ್ರಾಂಗದನು ವಿವಾಹವೇ ಆಗದೇ ಮೃತನಾದರೆ, ವಿಚಿತ್ರವೀರ್ಯನು ವಿವಾಹವಾದರೂ ಸಂತತಿ ಪಡೆಯದೇ ಮೃತನಾದ.

ಸತ್ಯವತಿಯು ಕೂಡಲೇ ತನ್ನ ಪುತ್ರತ್ವೇನ ಅವತರಿಸಿದ್ದ ಸಾಕ್ಷಾತ್ ಶ್ರೀವೇದವ್ಯಾಸರನ್ನು ಸ್ಮರಿಸಿದಳು. ತತ್ಕ್ಷಣವೇ ಎದುರು ಬಂದ ಅವರನ್ನು ಭೀಷ್ಮಾದಿಗಳಿಂದ ಸಮೇತಳಾಗಿ ಪೂಜಿಸಿದಳು. ರಾಜ್ಯವು ಅನಾಥವಾಗುವುದನ್ನು ತಪ್ಪಿಸಲಿಕ್ಕಾಗಿ ನಿಯೋಗ ಪದ್ಧತಿಯಿಂದ ತನ್ನ ಸೊಸೆಯರಲ್ಲಿ ಉತ್ತಮ ಸಂತಾನದ ಉತ್ಪತ್ತಿಗಾಗಿ ಬೇಡಿದಳು. 'ಲಕ್ಷ್ಮೀ ಹಾಗೂ ಅವಳ ಸನ್ನಿಧಾನವಿರುವ ನಾರಿಯಷ್ಟೇ ನನ್ನ ಅಂಗಸಂಗಕ್ಕೆ ಯೋಗ್ಯಳಾದ್ದರಿಂದ ನಿನ್ನ ಸೊಸೆಯು ಒಂದು ವರ್ಷಕಾಲ ವೈಷ್ಣವ ವ್ರತವನ್ನು ಆಚರಿಸಲಿ; ಅದರಿಂದ ಶುದ್ಧದೇಹಳಾಗುವ ಅವಳು ನನ್ನಿಂದ ಶ್ರೇಷ್ಠ ಮಗನನ್ನು ಪಡೆಯಲಿ' ಎಂದರು ವ್ಯಾಸರು. ಅರಾಜಕತೆಯಿಂದ ರಾಷ್ಟ್ರಹಾನಿಯಾಗುವುದೆಂದು ಭಾವಿಸಿ ಸತ್ಯವತಿಯು ಅಷ್ಟು ಕಾಲ ಕಾಯದಾದಳು.

ಆಗ ವ್ಯಾಸರು 'ಹಾಗಾದರೆ ನಾನು ಸೌಮ್ಯಸ್ವರೂಪಿಯಾಗಿದ್ದರೂ ಭೀಕರವಾಗಿ ಅವಳಿಗೆ ಕಾಣಿಸಿಕೊಳ್ಳುವೆ; ಅದನ್ನು ಸಹಿಸಿಕೊಳ್ಳುವುದಾದರೆ ಅವಳಿಗೆ ಗುಣವಂತನಾದ ಮಗನಾಗುವನು' ಎಂದರು. ಸತ್ಯವತಿಯೂ ಒಪ್ಪಿದಳು. ಹಾಗೆ ಅಂಬಿಕೆಯಲ್ಲಿ ಜನಿಸಿದವನು ಧೃತರಾಷ್ಟ್ರ. ಆದರೆ ವ್ಯಾಸರು ತೋರಿದ ರೂಪಕ್ಕೆ ತಾಯಿಯು ಹೆದರಿ ಕಣ್ಮುಚ್ಚಿದ್ದರಿಂದ ಆತ ಅಂಧನಾಗಿಯೇ ಜನಿಸಿದ; ಅವನ ಮಕ್ಕಳೂ ಮುಂದೆ 'ಅಂತರಂಗದಲಿ ಹರಿಯ ಕಾಣದವ ಹುಟ್ಟುಕುರುಡನೋ' ಎಂದಂತೆ ಒಳಗಣ್ಣಿಲ್ಲದವರಾದರು – ವ್ಯಾಸರ ಹಾಗೂ ಅವರಿಗೆ ಸಮ್ಮತವಾದ ಶಾಸ್ತ್ರಗಳಿಂದ ವಿಮುಖರಾದವರಂತೆ.

ಧೃತರಾಷ್ಟ್ರ ಅಂಧನಾದದ್ದರಿಂದ ಸತ್ಯವತಿಯು ಈ ಬಾರಿ ಅಂಬಾಲಿಕೆಯಲ್ಲಿ ಗುಣಾಢ್ಯ ಸಂತತಿಯನ್ನು ಬೇಡಿದಳು. ವ್ಯಾಸರು ಹಿಂದಿನಂತೆಯೇ ಭಯಂಕರರೂಪವನ್ನು ತೋರಲು, ತನ್ನ ಮಗನೂ ಧೃತರಾಷ್ಟ್ರನಂತೆ ಅಂಧನಾಗದಿರಲೆಂದು ಅಂಬಾಲಿಕೆಯು ಕಣ್ಮುಚ್ಚಲಿಲ್ಲ; ಬದಲಾಗಿ ಹೆದರಿಕೆಯಿಂದ ಮೈ ಬಿಳುಚಿಕೊಂಡಳು. ಆದ್ದರಿಂದ ವೀರನಾದರೂ ಬಿಳಿದಾದ ಬಣ್ಣದ ಮಗನಾದ. ಅವನೇ ಪಾಂಡು.

ಆದರೂ ರಾಜನಾದವನಿಗೆ ಇದೊಂದು ಅವಲಕ್ಷಣವೆಂದೇ ಭಾವಿಸಿ ಸತ್ಯವತಿ ಅಷ್ಟಾಗಿ ಸಂತೃಪ್ತಿ ಹೊಂದಲಿಲ್ಲ. ಅಂತಹ ಯಾವುದೇ ದೋಷವಿರದ ಮತ್ತೊಬ್ಬ ಮಗನನ್ನು ವ್ಯಾಸರಲ್ಲಿ ಬೇಡಿದಳು. ವ್ಯಾಸರೂ ಒಪ್ಪಿದರು. ಸತ್ಯವತಿಯು ಅಂಬಿಕೆಯನ್ನೇ ಮತ್ತೊಮ್ಮೆ ಕರೆದು, ಹಿಂದೆ ಅವಳು ಕಣ್ಮುಚ್ಚಿದ್ದರಿಂದ ಕುರುಡ ಮಗ ಜನಿಸಿದ್ದನ್ನು ಜ್ಞಾಪಿಸಿದಳು; ಈ ಬಾರಿಯಾದರೂ ಭಕ್ತಿಯಿಂದ ವ್ಯಾಸರನ್ನು ಸೇವಿಸಲು ಆಜ್ಞಾಪಿಸಿದಳು.

ಅಂಬಿಕೆಗೆ ಪೂರ್ವಾನುಭವವನ್ನು ಮರೆಯಲಾಗಿರಲಿಲ್ಲ. ಬಹಳವಾಗಿ ಹೆದರಿದ್ದ ಮತಿಗೇಡಿಯಾದ ಅವಳು ತನ್ನ ಪರವಾಗಿ ತನ್ನ ದಾಸಿಯನ್ನು ಆ ಕಾರ್ಯದಲ್ಲಿ ನಿಯೋಜಿಸಿದಳು. ಆ ದಾಸಿಯಾದರೋ ಪರಮಾತ್ಮನೊಂದಿಗೆ ಪರಮ ಭಕ್ತಿಯಿಂದ ರಮಿಸಿದಳು; ತನಗೆ ಸಿಕ್ಕ ಅವಕಾಶವನ್ನು ಸಾರ್ಥಕಪಡಿಸಿಕೊಂಡಳು. ಆಗ ಹುಟ್ಟಿದವನೇ ಯಮನ ಅವತಾರನಾದ ಧರ್ಮಾತ್ಮನಾದ ವಿದುರ.[೧]

ವೇದವ್ಯಾಸರ ಮಗನಾಗಿ ವಿದುರನು ಧರ್ಮಿಷ್ಠ, ಮಹಾಜ್ಞಾನಿ ಹಾಗೂ ಬಲಾಢ್ಯನಾಗುತ್ತಾನೆ. ಸ್ವರೂಪದಲ್ಲೂ ತನ್ನ ಇಬ್ಬರು ಅಣ್ಣಂದಿರಿಗಿಂತಲೂ ಉತ್ತಮನು. ವಿದುರನ ತಂದೆಯಾದ ವ್ಯಾಸರದು ಅವತಾರದಲ್ಲಿ ಬ್ರಾಹ್ಮಣವರ್ಣ; ತಾಯಿಯದು ಶೂದ್ರವರ್ಣ. ಆದ್ದರಿಂದ ವಿದುರನದು ಶೂದ್ರವರ್ಣವಾಯಿತು. ಪ್ರಾಯಶಃ ತಂದೆಯ

---

೧ ಸಾ ತು ರೂಪಂ ಚ ಗಂಧಂ ಚ ಮಹರ್ಷೇಃ ಪ್ರವಿಚಿಂತ್ಯ ತಮ್ ॥
ನಾಕರೋದ್ವಚನಂ ದೇವ್ಯಾ ಭಯಾತ್ ಸುರಸುತೋಪಮಾ ।
ತತಃ ಸ್ವೈರ್ಭೂಷಣೈರ್ದಾಸೀಂ ಭೂಷಯಿತ್ವಾಽಪ್ಸರೋಪಮಾಮ್ ॥
ಪ್ರೇಷಯಾಮಾಸ ಕೃಷ್ಣಾಯ ತತಃ ಕಾಶಿಪತೇಃ ಸುತಾ ।
ಸಾ ತಮೃಷಿಮನುಪ್ರಾಪ್ತಂ ಪ್ರತ್ಯುದ್ಗಮ್ಯಾಭಿವಾದ್ಯ ಚ ॥
ಸಂವಿವೇಶಾಭ್ಯನುಜ್ಞಾತಾ ಸತ್ಕೃತ್ಯೋಪಚಚಾರ ಹ । - ಮ.ಭಾ. (೧/೧೧೫/೩೭-೪೦)
ಸ ಜಜ್ಞೇ ವಿದುರೋ ನಾಮ ಕೃಷ್ಣದ್ವೈಪಾಯನಾತ್ಮಜಃ ॥ - ಮ.ಭಾ. (೧/೧೧೫/೪೩)
ಇತೀರಿತಾಽಪ್ಯಸ್ಯ ಹಿ ಮಾಯಯಾ ಸಾ ಭೀತಾ ಭುಜಿಷ್ಯಾಂ ಕುಮತಿರ್ನ್ಯಯೋಜಯತ್ ।
ಸಾ ತಂ ಪರಾನಂದತನುಂ ಗುಣಾರ್ಣವಂ ಸಂಪ್ರಾಪ್ಯ ಭಕ್ತ್ಯಾ ಪರಯೈವ ರೇಮೇ ॥
ತಸ್ಯಾಂ ಸ ದೇವೋಽಜನಿ ಧರ್ಮರಾಜಃ ...............। - ಮ.ಭಾ.ತಾ.ನಿ. (೧೧/೧೩೫-೧೩೭)

ಗುಣಗಳು ಹಾಗೂ ತಾಯಿಯ ಜಾತಿ ಮಗನಿಗೆ ಬರುತ್ತವೆ ಎಂಬ ವಚನಕ್ಕೆ[೧] ಇದು ನಿದರ್ಶನವಾಗಿದೆ.

ಕ್ಷತ್ರಿಯನಾಗದ ಅವನಿಗೆ ರಾಜ್ಯಾಧಿಕಾರವೂ ಲಭಿಸದಂತಾಯಿತು. ಇದನ್ನರಿತ ಸತ್ಯವತಿಯು ಅಂಬಾಲಿಕೆಯಲ್ಲಿ ಮತ್ತೊಂದು ಸಂತಾನವನ್ನು ಬಯಸಿದಳಾದರೂ ವ್ಯಾಸರು ಒಪ್ಪಲಿಲ್ಲ; ಅದೃಶ್ಯರಾದರು.[೨] ವ್ಯಾಸರು ಹೇಳಿದ ಹಾಗೆ ಒಂದು ವರ್ಷದ ವ್ರತಾಚರಣೆಯನ್ನು ಸತ್ಯವತಿಯು ಸೊಸೆಯಿಂದ ಮಾಡಿಸದೆ ಇದ್ದದ್ದರ ಫಲ ಇದು ಎನ್ನಬಹುದು. ಶಾಸ್ತ್ರದ ವಿಧಿವಿಧಾನಗಳನ್ನು ಅನುಸರಿಸದೇ ಮಾಡುವ ಕಾರ್ಯಗಳು ಹೀಗೆ ನಿರೀಕ್ಷಿತ ಫಲಗಳನ್ನು ನೀಡದೇ ವಿಫಲವಾಗುವವು.

ಸತ್ಯವತಿಗೆ ಸಂಪೂರ್ಣ ಸಮಾಧಾನವಾಗುವಂತಹ ಸಂತತಿಯನ್ನು ನೀಡುವ ಸಂಕಲ್ಪವೇ ವ್ಯಾಸರಿಗಿರಲಿಲ್ಲ. ಅದಕ್ಕೆ ಮುಂದಾಗಬೇಕಿದ್ದ ಭೂಭಾರಹರಣಕ್ಕೆ ಇಲ್ಲಿಯೇ ನಾಂದಿ ಹಾಡಬೇಕಾಗಿದ್ದುದು ಪ್ರಧಾನ ಕಾರಣ. ಇಲ್ಲದಿದ್ದರೆ ಮುಂದೆ ಪ್ರಸಂಗದ ದುರ್ಲಾಭ ಪಡೆದು ದುರ್ಯೋಧನಾದಿಗಳು ಪಾಪಕಾರ್ಯಗಳನ್ನೆಸಗಲು ಅವಕಾಶವಂಚಿತರಾಗುತ್ತಿದ್ದರು. ಅದಕ್ಕೇ ವಿದುರನ ಉತ್ಪತ್ತಿಯ ಸಮಯದಲ್ಲೂ ವ್ಯಾಸರು ಅಂಬಿಕೆಗೆ ತಾವೇ ಪ್ರೇರೇಪಿಸಿದರು - **ಇತೀರಿತಾಽಪ್ಯಸ್ಯ ಹಿ ಮಾಯಯಾ** ಸಾ (ಮ.ಭಾ.ತಾ.ನಿ. ೧೧/೧೩೫). ಭೀಮನು ಹಿರಿಯ ಮಗನಾಗದೇ ಇದ್ದದ್ದರಿಂದ ದುರ್ಯೋಧನಾದಿಗಳ ಪೂರ್ಣ ಬಣ್ಣ ಬಯಲಾಗಲಿಕ್ಕೆ ಹಾಗೂ ಭೂಭಾರಹರಣಕ್ಕೆ ಅನುವಾದಂತೆ (ಮ.ಭಾ.ತಾ.ನಿ. ೧೯/೨೯-೩೦) ಇದನ್ನೂ ತಿಳಿಯಬೇಕು.

## ವಿದುರನ ಅವತಾರದ ಹಿನ್ನೆಲೆ

ಶೂದ್ರಜನ್ಮವನ್ನು ಯಮನು ಸ್ವೇಚ್ಛೆಯಿಂದಲೇ ಆರಿಸಿಕೊಂಡದ್ದು. ಅದರ ಹಿನ್ನೆಲೆ ಹೀಗಿದೆ[೩] (ಮ.ಭಾ. ೧/೧೧೬-೧೧೮). ಮಾಂಡವ್ಯರೆಂಬ ಋಷಿಗಳು ವಸಿಷ್ಠರ ಸಾಮ್ಯವನ್ನು

೧ ಗುಣಾಃ ಪಿತುರ್ಮಾತೃಜಾತಿಃ ಸುತಾನಾಂ ಯಸ್ಮಾತ್ ಸತಾಂ ಪ್ರಾಯಶಃ ...।
- ಮ.ಭಾ.ತಾ.ನಿ. (೨೦/೧೫೭)

೨ ಜ್ಞಾತ್ವಾಽಸ್ಯ ಶೂದ್ರತ್ವಮಥಾಸ್ಯ ಮಾತಾ ಪುನಶ್ಚ ಕೃಷ್ಣಂ ಪ್ರಣತಾ ಯಯಾಚೇ।
ಅಂಬಾಲಿಕಾಯಾಂ ಜನಯಾನ್ಯಮಿತ್ಯಥೋ ನೈಚ್ಛತ್ ಸ ಕೃಷ್ಣೋಽಭವದಪ್ಯದೃಶ್ಯಃ॥
- ಮ.ಭಾ.ತಾ.ನಿ. (೧೧/೧೪೦)

೩ ........................... ಮಾಂಡವ್ಯಶಾಪಾದ್ಯ ಉವಾಹ ಶೂದ್ರತಾಮ್।
ವಸಿಷ್ಠಸಾಮ್ಯಂ ಸಮಭೀಪ್ಸಮಾನಂ ಪ್ರಚ್ಯಾವಯನ್ನಿಚ್ಛಯಾ ಶಾಪಮಾಪ॥
ಅಯೋಗ್ಯಸಂಪ್ರಾಪ್ತಿಕೃತಪ್ರಯತ್ನದೋಷಾತ್ ಸಮಾರೋಪಿತಮೇವ ಶೂಲೇ।
ಚೋರೈರ್ಹೃತೇಽರ್ಥೇಽಪಿ ತು ಚೋರಬುದ್ಧ್ಯಾ ಮಕ್ಷೀವಧಾದಿತ್ಯವದದ್ಯಮಸ್ತಮ್॥
ನಾಸತ್ಯತಾ ತಸ್ಯ ಚ ತತ್ರ ಹೇತುತಃ ಶಾಪಂ ಗೃಹೀತುಂ ಸ ತಥೈವ ಚೋಕ್ತ್ವಾ।
ಅವಾಪ ಶೂದ್ರತ್ವಮ್ .....॥ - ಮ.ಭಾ.ತಾ.ನಿ. (೧೧/೧೩೬-೧೩೮)

ಬಯಸಿ ತಮ್ಮ ಆಶ್ರಮದಲ್ಲಿ ತಪಸ್ಸು ಮಾಡುತ್ತಿದ್ದರು. ವಾಸ್ತವವಾಗಿ ತಮಗೆ ಯೋಗ್ಯವಲ್ಲದ ಆ ಸಾಮ್ಯವನ್ನು ಅವರು ಬಯಸಬಾರದಿತ್ತು. ಹಾಗೆ ಬಯಸಿ ತಪಿಸಿದ್ದಕ್ಕಾಗಿ ಅವರಿಗೆ ಅಧಿಕ (ಯೋಗ್ಯತೆಗೆ ಮೀರಿದ) ಪುಣ್ಯ ಉಂಟಾಗಿತ್ತು. ಅದು ಹೆಸರಿಗೆ ಪುಣ್ಯವಾದರೂ, ಅದರ ಫಲ ಮಾತ್ರ ದುರಂತವೇ; ಅದನ್ನು ಇಳಿಸದ ಹೊರತು ಅವರಿಗೆ ಒಳಿತಾಗುವುದು ಸಾಧ್ಯವಿರಲಿಲ್ಲ. ಅದು ಸಾಧ್ಯವಾಗುವುದು ಅವರು ಸಲ್ಲದ ಶಾಪವನ್ನು ಕೊಟ್ಟಾಗ ಮಾತ್ರ. ಆದಕ್ಕೆ ಅವರಿಗೆ ಕೋಪ ಬರುವುದು ಅಗತ್ಯವಾಗಿತ್ತು. ಹಾಗೆ ಕೋಪವನ್ನು ತರಿಸುವ ಹೊಣೆಯನ್ನು ಯಮದೇವರು ಹೊತ್ತರು.

ಒಮ್ಮೆ ಧನಿಕನೊಬ್ಬನ ಸಂಪತ್ತನ್ನು ಕಳ್ಳರು ಅಪಹರಿಸಿದರು. ಭಟರು ಅವರನ್ನು ಹಿಡಿಯಲು ಹಿಂಬಾಲಿಸಿದರು. ಕಳ್ಳರು ಮಾಂಡವ್ಯರ ಆಶ್ರಮಕ್ಕೆ ನುಗ್ಗಿ, ಕದ್ದ ಸ್ವತ್ತನ್ನು ಅವರ ಮುಂದಿರಿಸಿ ಅಲ್ಲಿಯೇ ಅಡಗಿ ಕುಳಿತರು. ಹಿಂದೆ ಬಂದ ಭಟರು ಮುನಿಗಳನ್ನು ವಿಚಾರಿಸಿದರೂ ಅಸಂಪ್ರಜ್ಞಾತಸಮಾಧಿಸ್ಥಿತಿಯಲ್ಲಿದ್ದ ಅವರಿಗೆ ಏನೂ ಕೇಳಿಸಲೂ ಇಲ್ಲ, ಅವರೇನೂ ನುಡಿಯಲೂ ಇಲ್ಲ. ಕಳ್ಳರು ಅಲ್ಲೇ ಸಿಕ್ಕಿ ಬಿದ್ದರು. ಅವರನ್ನು ಕರೆದೊಯ್ಯುವಾಗ ಭಟರು ಮುನಿಗಳ ಮೌನವನ್ನು ಅರ್ಥಮಾಡಿಕೊಳ್ಳದೇ ಅವರನ್ನೂ ಕಳ್ಳನೆಂದೇ ಭಾವಿಸಿ ಕರೆದೊಯ್ದರು; ರಾಜನಿಗೆ ಒಪ್ಪಿಸಿದರು. ರಾಜನು ಶಿಕ್ಷೆ ವಿಧಿಸಲು, ಎಲ್ಲರನ್ನೂ ಶೂಲಕ್ಕೇರಿಸಲಾಯಿತು. ಕಳ್ಳರೆಲ್ಲ ಸತ್ತರು. ಬಹಳ ಕಾಲವಾದರೂ ನಿರಾಹಾರಿಯಾದರೂ ಶೂಲಕ್ಕೇರಿಸಲ್ಪಟ್ಟಿದ್ದರೂ ಮುನಿಗಳ ಪ್ರಾಣ ಹೋಗಿರಲಿಲ್ಲ.[೧] ವಿಷಯವನ್ನೆಲ್ಲ ತಿಳಿದ ರಾಜ ಪಶ್ಚಾತ್ತಾಪ ಪಟ್ಟ, ಕ್ಷಮೆ ಕೋರಿದ. ಸಾತ್ವಿಕಶಿರೋಮಣಿಗಳಾದ ಅವರು ಅವನ ತಪ್ಪನ್ನು ಮನ್ನಿಸಿದರು. ಶೂಲವನ್ನು ಕತ್ತಿನಿಂದ ತೆಗೆಯುವಾಗ ಅದರ ತುದಿ (ಅಣಿ) ಮಾತ್ರ ಕತ್ತಿನಲ್ಲಿಯೇ ಉಳಿದುಬಿಟ್ಟಿತು! ಅಂದಿನಿಂದ ಅವರು ಅಣಿಮಾಂಡವ್ಯರೆನಿಸಿದರು.

ಯಮನ ಬಳಿ ನಡೆದ ಮುನಿಗಳು ತಮ್ಮ ಯಾವ ತಪ್ಪಿನಿಂದ ಹೀಗೆಲ್ಲ ಆಯಿತೆಂದು ವಿಚಾರಿಸಿದರು. ತಮಗೆ ಯೋಗ್ಯವಲ್ಲದ ವಸಿಷ್ಠಸಾಮ್ಯಕ್ಕಾಗಿ ಪ್ರಯತ್ನಿಸಿದ್ದನ್ನು[೨] ನೇರವಾಗಿ ಕಾರಣವನ್ನಾಗಿ ನೀಡಿದರೆ ಮುನಿಗಳು ಶಾಪ ನಿಡುವುದಿಲ್ಲವೆಂದು ಎಣಿಸಿದ ಯಮನು, ಅವರಿಗೆ ಕೋಪ ತರೆಸಲೆಂದು, ಅವರ ಬಾಲ್ಯದಲ್ಲಿ ಮಕ್ಷಿಕೆಯನ್ನು ಚುಚ್ಚಿ ಕೊಂದದ್ದೇ

---

೧ ಮಾಂಡವ್ಯರು ಶೂಲಕ್ಕೇರಿಸಿದರೂ ಧ್ಯಾನಾವಸ್ಥೆಯಲ್ಲೇ ಇದ್ದದ್ದನ್ನು, ಯುದ್ಧದಲ್ಲಿ ತನ್ನ ಕೈ ಕಳೆದುಕೊಂಡಿದ್ದರೂ ಭೂರಿಶ್ರವಸ್ ತನ್ನ ಜೀವನದ ಕೊನೆಯ ಕ್ಷಣಗಳಲ್ಲಿ ಯೋಗಯುಕ್ತನಾಗಿ ಧ್ಯಾನಾವಸ್ಥೆಗೆ ತೆರಳುವುದರೊಂದಿಗೆ ಹೋಲಿಸಬಹುದು (ಮ.ಭಾ. ೭/೧೪೩/೩೮-೩೯; ಮ.ಭಾ. ತಾ.ನಿ. ೨೬/೧೦೭).

೨ ಮಾಂಡವ್ಯರೂ ಒಬ್ಬ ಋಷಿಗಳು. ಅವರು ಮತ್ತೊಬ್ಬ ಋಷಿಗಳಾದ ವಸಿಷ್ಠರ ಸಾಮ್ಯ ಬಯಸಿದ್ದಕ್ಕೇ ಶೂಲಕ್ಕೇರಿಸಲ್ಪಟ್ಟರೆ ಇನ್ನು ಜೀವನು ಪರಬ್ರಹ್ಮನ ಐಕ್ಯವನ್ನು ಬಯಸಿದರೆ ಆಗುವ ಅನರ್ಥವನ್ನು ಊಹಿಸಬಹುದು.

ಕಾರಣವೆಂದು ಹೇಳಿದನು.[೧] 'ಒಂದು ಚಿಕ್ಕ ಅಪರಾಧಕ್ಕೆ ಅದೂ ಬಾಲ್ಯದಲ್ಲಿ ಮಾಡಿದ್ದಕ್ಕೆ ಇಷ್ಟು ದೊಡ್ಡ ಶಿಕ್ಷೆಯನ್ನು ವಿಧಿಸಿರುವ ನೀನು ಶೂದ್ರನಾಗಿ ಹುಟ್ಟು' ಎಂದು ಮುನಿಗಳು ಯಮನನ್ನು ಶಪಿಸಿದರು.

ಯಮನಿಗೆ ಬೇಕಾಗಿದ್ದದ್ದೂ ಮುನಿಗಳು ನೀಡಿದ್ದೂ ಎರಡೂ ಒಂದೇ ಆಯಿತು. ಸ್ವೋತ್ತಮನಾದ ಯಮನಿಗೆ ಶಾಪ ನೀಡಿದ್ದರಿಂದ ಮುನಿಗಳ ಹೆಚ್ಚಿನ ತಪಸ್ಸೂ ಕರಗಿತು. ಶೂದ್ರನಾದರೆ ರಾಜಕಾರಣದ ಜಂಜಾಟವೇ ಇಲ್ಲದೇ ಸಾಧನೆ ಮಾಡಬಹುದೆಂದು ಯಮನೂ ಸಂತೋಷದಿಂದ ವಿದುರನಾದ.[೨]

ದೇವತೆಗಳು ಸಾಂಶರು.[೩] ಅವತಾರ ಮಾಡಿದಾಗಲೂ ಮೂಲರೂಪದಲ್ಲೂ ಇದ್ದೇ ಇರುತ್ತಾರೆ. ಕೆಲವೊಮ್ಮೆ ಅನೇಕ ಅವತಾರಗಳನ್ನು ಏಕಕಾಲಕ್ಕೇ ಮಾಡುವುದೂ ಉಂಟು. ಯಮನು ಆಗಾಗಲೇ ಜಾಂಬವಂತನ ರೂಪದಲ್ಲಿ (ಮ.ಭಾ.ತಾ.ನಿ. - ೩/೬೬) ಅವತರಿಸಿಯಾಗಿತ್ತು. ವಿದುರನಾಗಿ ಈಗ ಅವತರಿಸಿದ. ಮುಂದೆ ಯುಧಿಷ್ಠಿರನಾಗಿಯೂ (ಮ.ಭಾ.ತಾ.ನಿ. - ೧೨/೩೩) ಅವತರಿಸುತ್ತಾನೆಂಬುದು ವಿಶೇಷ.[೪]

---

೧ ಚಿಕ್ಕ ಹುಳುವನ್ನು ಕೊಂದ ಲೆಕ್ಕವೂ ಯಮಲೋಕದಲ್ಲಿ ದಾಖಲಾಗುವುದು ಎಂಬ ಈ ಕಥೆಯನ್ನು ಗೋವು ಮೊದಲಾದ ಪ್ರಾಣಿಗಳನ್ನು ಸ್ವಾರ್ಥಕ್ಕಾಗಿ ಚಿತ್ರಹಿಂಸೆ ನೀಡಿ ಹತ್ಯೆ ಮಾಡುವವರು, ಆ ಹತ್ಯೆಯನ್ನು ಬೆಂಬಲಿಸುವವರು ಹಾಗೂ ಅದರ ವಿರುದ್ಧ ತಮ್ಮ ಯಾವ ಪ್ರತಿಭಟನೆಯನ್ನೂ ವ್ಯಕ್ತಪಡಿಸದವರೆಲ್ಲ ತಪ್ಪದೇ ಕೇಳಬೇಕು.

೨ ಶೂದ್ರನ ಸಾಧನೆ ತ್ರೈವರ್ಣಿಕರಿಗಿಂತ ಸುಲಭ ಎಂಬುದಕ್ಕೆ ವಿಷ್ಣುಪುರಾಣದಲ್ಲಿನ ವೇದವ್ಯಾಸರ ಈ ಕೆಳಗಿನ ವಾಕ್ಯಗಳೇ ಪ್ರಮಾಣ:
ಜಯಂತಿ ತೇ ನಿಜಾನ್ ಲೋಕಾನ್ ಕ್ಲೇಶೇನ ಮಹತಾ ದ್ವಿಜಾಃ ॥
ದ್ವಿಜಶುಶ್ರೂಷಯೈವೈಷ ಪಾಕಯಜ್ಞಾಧಿಕಾರವಾನ್ ।
ನಿಜಾನ್ ಜಯತಿ ವೈ ಲೋಕಾನ್ ಶೂದ್ರೋ ಧನ್ಯತರಸ್ತತಃ ॥
ಭಕ್ಷ್ಯಾಭಕ್ಷ್ಯೇಷು ನಾಸ್ಯಾಸ್ತಿ ಪೇಯಾಪೇಯೇಷು ವೈ ಯತಃ ।
ನಿಯಮೋ ಮುನಿಶಾರ್ದೂಲಾಸ್ತೇನಾಸೌ ಸಾಧ್ವಿತೀರಿತಃ ॥ – ವಿಷ್ಣುಪುರಾಣ (೬/೨/೧೯-೨೪)

೩ ನ ದೇವಾನಾಂ ನ ದೇವೀನಾಂ ಸಾಮಸ್ತ್ಯೇನ ಜನಿರ್ಭುವಿ ।
ಅಂಶಾಂಶೇನೈವ ಜಾಯಂತೇ ... ॥ – ಭಾ.ತಾ. (೧/೧೨/೧೫)

೪ ಮಹಾಭಾರತದಲ್ಲಿ ಹೀಗೆ ಒಬ್ಬೇ ದೇವತೆಯ ಅನೇಕ ಅವತಾರಗಳು ಏಕಕಾಲದಲ್ಲಿ ಭೂಮಿಯಲ್ಲಿ ಇದ್ದ ಇನ್ನೂ ಕೆಲವು ಉದಾಹರಣೆಗಳಿವೆ; ಸಾಕ್ಷಾತ್ ಭಗವಂತನೇ ಪರಶುರಾಮ (ಮ.ಭಾ.ತಾ.ನಿ. ೩/೫೧), ವ್ಯಾಸ (ಮ.ಭಾ.ತಾ.ನಿ. ೧೦/೪೭) ಮತ್ತು ಕೃಷ್ಣನಾಗಿ (ಮ.ಭಾ.ತಾ.ನಿ. ೧೨/೫೯) ಕಾಣಿಸಿಕೊಂಡಿದ್ದ; ಬೃಹಸ್ಪತಿಯು ದ್ರೋಣರಾಗಿಯೂ (ಮ.ಭಾ.ತಾ.ನಿ. ೧೧/೬೫) ಉದ್ಧವರಾಗಿಯೂ (ಮ.ಭಾ.ತಾ.ನಿ. ೧೨/೧೦೦) ಹುಟ್ಟಿದ್ದುಂಟು; ಪತ್ರತಾಪನೆಂಬ ರುದ್ರನಂತೂ ಜರಾಸಂಧಪುತ್ರ ಸಹದೇವನಾಗಿ (ಮ.ಭಾ. ತಾ.ನಿ. ೨೧/೧೫೦) ಹಾಗೂ ಸೋಮದತ್ತನಾಗಿ (ಮ.ಭಾ.ತಾ.ನಿ. ೧೧/೧೦) ಹುಟ್ಟಿ ಕುರುಕ್ಷೇತ್ರಯುದ್ಧದಲ್ಲಿ ವಿರುದ್ಧಪಕ್ಷಗಳನ್ನು ಆಶ್ರಯಿಸಿದ್ದನು!

## ವಿದುರನಿಗೆ ಲಭಿಸಿದ ಸಂಸ್ಕಾರಗಳು

ಈ ಹಿಂದೆ ವಿದುರನಿಗೆ ಸಾಕ್ಷಾತ್ ಶ್ರೀವೇದವ್ಯಾಸರಿಂದ ಗರ್ಭಾಧಾನ ಸಂಸ್ಕಾರವಾದದ್ದನ್ನು ವಿವರಿಸಲಾಯಿತು. ವಿದುರನ ಸುಯೋಗ ಇಷ್ಟಕ್ಕೇ ಮುಗಿಯಲಿಲ್ಲ. 'ವಿದುರ' ಎಂಬುದಾಗಿ ನಾಮಕರಣ ಸಂಸ್ಕಾರ ಮಾಡಿದ್ದೂ ಸಹ ಶ್ರೀವೇದವ್ಯಾಸರೇ.[೧] ಅದಕ್ಕೆ ಅವನು ತತ್ತ್ವವಿದ್ಯೆಯಲ್ಲಿ ರತನಾದದ್ದೇ ಕಾರಣ.[೨] ಜ್ಞಾನಿಯೂ ಬಲಶಾಲಿಯೂ ಒಳ್ಳೆಯ ಬಿಲ್ಲುಗಾರನೂ, ಬಾಹುಬಲಸಂಪನ್ನನೂ, ಒಳ್ಳೆಯ ನೀತಿಯನ್ನು ತಿಳಿದವನೂ ಆಗುವನೆಂದು ಹರಸಿದರು.

ವಿದುರನು ಧನುರ್ಧಾರಿಯಾಗಿದ್ದ ಎಂಬುದಕ್ಕೆ **ಸ್ವಯನ್ ಧನುರ್ದ್ವಾರಿ ನಿಧಾಯ** - (ಭಾಗವತ ೩/೧/೧೬) ಎಂದು ಧನುಸ್ಸನ್ನು ಬಾಗಿಲ ಬಳಿ ಇಟ್ಟು ವಿದುರ ತೀರ್ಥಯಾತ್ರೆಗೆ ಹೋದದ್ದನ್ನು ಭಾಗವತವು ಉಲ್ಲೇಖಿಸುವುದೇ ಸಾಕ್ಷಿ. ನೀತಿಜ್ಞ ಎಂಬುದಕ್ಕೆ ಮುಂದೆ ಅವನು ಉಪದೇಶಿಸಿದ ನೀತಿಯು 'ವಿದುರನೀತಿ' ಎಂಬುದಾಗಿ ಪ್ರಸಿದ್ಧವಾದದ್ದೇ ಸಾಕ್ಷಿ.

ಹುಟ್ಟುತ್ತಲೇ ವಿದುರನು ಜ್ಞಾನಿಯಾಗಿದ್ದ ಎಂಬುದಾಗಿ ಶ್ರೀಮದಾಚಾರ್ಯರು ಸೂತ್ರಭಾಷ್ಯದಲ್ಲಿ ಹೇಳಿರುವುದನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ಹೆಸರಿನಲ್ಲೂ ಆತ ವಿದ್ಯಾವಂತ. ಶೂದ್ರವರ್ಣಕ್ಕೆ ವಿಹಿತವಾದ ಸಂಸ್ಕಾರಗಳನ್ನು ಭೀಷ್ಮರು ಮಾಡಿಸಿದರು. ವೇದವ್ಯಾಸರು ಸಮಸ್ತ ವಿದ್ಯೆಗಳನ್ನೂ ಅನುಗ್ರಹಿಸಿದರು. ವಿದುರನ ಸರ್ವವಿದ್ಯಾಪ್ರಾವೀಣ್ಯವು (ಮ.ಭಾ. ೧/೧೧೮/೧೭-೨೭) ತನ್ನ ಅಣ್ಣಂದಿರಿಗಿಂತಲೂ ವಿಶಿಷ್ಟವಾಗೇ ಇದ್ದಿತು.[೩]

ಶೂರರಾಜನಿಗೆ ಶೂದ್ರಸ್ತ್ರೀಯಲ್ಲಿ ಜನಿಸಿದ್ದ ಆರುಣೀ ಎಂಬ ಗುಣವತಿಯಾದ ಕನ್ಯೆಯನ್ನು ಭೀಷ್ಮರು ವಿದುರನೊಂದಿಗೆ ವಿವಾಹ ಮಾಡಿಸಿದರು.[೪] ಆರುಣಿಯ ತಂದೆಯಾದ ಶೂರರಾಜ

---

೧ ............... ಅಥಾಸ್ಯ ನಾಮ ಚಕ್ರೇ ಕೃಷ್ಣಃ ಸರ್ವವಿತ್ತ್ವಂ ತಥಾऽದಾತ್ ॥
ವಿದ್ಯಾರತೇರ್ವಿದುರೋ ನಾಮ ಜಾಯಂ ಭವಿಷ್ಯತಿ ಜ್ಞಾನಬಲೋಪಪನ್ನಃ ।
ಮಹಾಧನುರ್ಬಾಹುಬಲಾಧಿಕಶ್ಚ ಸುನೀತಿಮಾನಿತ್ಯವದತ್ ಸ ಕೃಷ್ಣಃ ॥
- ಮ.ಭಾ.ತಾ.ನಿ. (೧೧/೧೩೮-೧೩೯)

೨ ಕೋಶಗಳಲ್ಲೂ ವಿದುರನೆಂಬುದಕ್ಕೆ ಇದೇ ಅರ್ಥವಿದೆ:
**ಜ್ಞಾತಾ ತು ವಿದುರೋ ವಿಂದುಃ** - ಅಮರಕೋಶ ೧೦೭೬

೩ ಯೋಗ್ಯಾನಿ ಕರ್ಮಾಣಿ ತತಸ್ತು ತೇಷಾಂ ಚಕಾರ ಭೀಷ್ಮೋ ಮುನಿಭಿರ್ಯಥಾವತ್ ।
ವಿದ್ಯಾಃ ಸಮಸ್ತಾ ಅದದಾಚ್ಚ ಕೃಷ್ಣಸ್ತೇಷಾಂ ಪಾಂಡೋರಸ್ತ್ರಶಸ್ತ್ರಾಣಿ ಭೀಷ್ಮಃ ॥
ತೇ ಸರ್ವವಿದ್ಯಾಪ್ರವರಾ ಬಭೂವುರ್ವಿಶೇಷತೋ ವಿದುರಃ ಸರ್ವವೇತ್ತಾ ।
- ಮ.ಭಾ.ತಾ.ನಿ. (೧೧/೧೪೧,೧೪೨)

೪ ಶೂರಾಚ್ಛೂದ್ರ್ಯಾಂ ಜಾತಾಂ ವಿದುರೋऽವಹದಾರುಣೀಂ ಗುಣಾಢ್ಯಾಂ ಸಃ ।
- ಮ.ಭಾ.ತಾ.ನಿ. (೧೧/೧೬೦)

ಕ್ಷತ್ರಿಯ. ಇವನಿಗೆ ಕ್ಷತ್ರಿಯ ಪತ್ನಿಯಲ್ಲಿ ಹುಟ್ಟಿದವರೇ ಪಾಂಡವರ ತಾಯಿಯಾದ ಕುಂತಿ (ಮ.ಭಾ.ತಾ.ನಿ. ೧೧/೧೪೬) ಹಾಗೂ ಶ್ರೀಕೃಷ್ಣನ ತಂದೆಯಾದ ವಸುದೇವ (ಮ.ಭಾ.ತಾ.ನಿ. ೧೧/೨೨೩). ವೈಶ್ಯಸ್ತ್ರೀಯಲ್ಲಿ ಹುಟ್ಟಿದವ ನಂದಗೋಪ (ಮ.ಭಾ.ತಾ.ನಿ. ೧೧/೨೨೫). ವಿದುರನಂತೆ, ತಾಯಿಯು ಶೂದ್ರಳಾದ್ದರಿಂದ ಆರುಣೆಯೂ ಶೂದ್ರಳಾದಳು. ವಿದುರನು ಪಾಂಡವರಿಗೆ ತಂದೆಯ ಕಡೆಯಿಂದಲೂ ಹಾಗೂ ತಾಯಿಯ ಕಡೆಯಿಂದಲೂ ಹತ್ತಿರದ ಸಂಬಂಧಿಯಾದದ್ದು ವಿಶೇಷ. ಈ ಸಂಬಂಧದ ಮೂಲಕ ಶ್ರೀಕೃಷ್ಣನ ಪರಮ ಭಕ್ತನಾದ ವಿದುರನು ಅವನಿಗೆ ಸೋದರಮಾವನೆನಿಸಿಕೊಂಡ. ಅಣ್ಣನಾದ ಧೃತರಾಷ್ಟ್ರನಿಗೆ ದುರ್ಯೋಧನನಂತಹ ದುಷ್ಟರಾದ ಮಕ್ಕಳಾದರೆ ವಿದುರನಿಗೆ ಅವನಂತೆಯೇ ಗುಣಸಂಪನ್ನರಾದ, ವಿನೀತರಾದ ಮಕ್ಕಳಾಗುತ್ತಾರೆ.[೧] ಹಾಗೆ ಅವರು ವಿನೀತರಾಗುವಲ್ಲಿ ವಿದುರನ ಸೂಕ್ತವಾದ ಮಾರ್ಗದರ್ಶನ ಕಾರಣವಾಗಿತ್ತು. ಹೀಗೆ ವಿದುರನು ಒಬ್ಬ ಆದರ್ಶ ತಂದೆಯಾಗಿಯೂ ಮಾನ್ಯನಾಗುವನು.

ಧೃತರಾಷ್ಟ್ರ ಹಾಗೂ ಪಾಂಡುವಿನ ವಿವಾಹದ ಮುಂಚೆಯೂ ಭೀಷ್ಮರು ವಿದುರನೊಂದಿಗೆ ಸಮಾಲೋಚನೆ ಮಾಡಿಯೇ ಮುನ್ನಡೆಯುತ್ತಾರೆ.[೨] ಇದಕ್ಕೆ ವಿದುರನು ಧರ್ಮತತ್ತ್ವಜ್ಞ ಹಾಗೂ ವಿಶೇಷವಾಗಿ ನೀತಿಜ್ಞನಾಗಿದ್ದೇ ಕಾರಣ.

ಹಿರಿಯರು ಕಾರಣಾಂತರದಿಂದ ಸಲಹೆಯನ್ನು ಕೇಳಿದಾಗ ಧಾರ್ಷ್ಟ್ಯದಿಂದ ವರ್ತಿಸುವುದು ಮನುಷ್ಯನ ಸಹಜ ಗುಣ. ಆದರೆ ಮೇಲಿನ ಪ್ರಶ್ನೆಗೆ ವಿದುರನು 'ತಂದೆ, ತಾಯಿ, ಗುರುಗಳ ಸ್ಥಾನದಲ್ಲಿರುವ ನೀವೇ ಕುಲಕ್ಕೆ ಹಿತವಾದದ್ದನ್ನು ವಿಚಾರಮಾಡಿ ಮುನ್ನಡೆಯಿರಿ' ಎಂದು ಸಮ್ಮತಿಸಿದ್ದರಲ್ಲಿ ಆತನ ವಿನಯವನ್ನೂ ಸಂಸ್ಕಾರವನ್ನೂ ಗಮನಿಸಬೇಕು.[೩]

ಮುಂದೆ ವಿದುರನ ತಾಯಿಯು ವ್ಯಾಸರ ಅನುಗ್ರಹದಿಂದ ಹಾಗೂ ಮಗನ ಸದ್ಗುಣಗಳಿಂದ ಬ್ರಹ್ಮಲೋಕವನ್ನು ಪಡೆದಳು; ಸಾತ್ವಿಕಳಾದ ಅವಳು ಕೊನೆಗೆ ಮುಕ್ತಿಯನ್ನೂ ಪಡೆದಳು.[೪] ತಾಯಂದಿರ ಗುಣದೋಷಗಳು ಮಕ್ಕಳಾದ ಧೃತರಾಷ್ಟ್ರಾದಿಗಳಿಗೆ ಬಂದದ್ದನ್ನು

---

೧ ತಸ್ಯಾಂ ಚೋತ್ಪಾದಯಾಮಾಸ ವಿದುರಃ ಕುರುನಂದನ।
ಪುತ್ರಾನ್ ವಿನಯಸಂಪನ್ನಾನಾತ್ಮನಃ ಸದೃಶಾನ್ ಗುಣೈಃ॥ – ಮ.ಭಾ. (೧/೧೨೬/೩)

೨ ಮನ್ಯೇ ವರಯಿತವ್ಯಾಸ್ತಾ ಇತ್ಯಹಂ ಧೀಮತಾಂ ವರ।
ಸಂತಾನಾರ್ಥಂ ಕುಲಸ್ಯಾಸ್ಯ ಯದ್ವಾ ವಿದುರ ಮನ್ಯಸೇ॥ – ಮ.ಭಾ. (೧/೧೧೯/೭)

೩ ಭವಾನ್ ಪಿತಾ ಭವಾನ್ ಮಾತಾ ಭವಾನ್ ನಃ ಪರಮೋ ಗುರುಃ।
ತಸ್ಮಾತ್ ಸ್ವಯಂ ಕುಲಸ್ಯಾಸ್ಯ ವಿಚಾರ್ಯ ಕುರು ಯದ್ಧಿತಮ್॥ – ಮ.ಭಾ. (೧/೧೧೯/೮)

೪ ಮಾತಾ ಚ ಸಾ ವಿದುರಸ್ಯಾಪ ಲೋಕಂ ವೈರಿಂಚಮನ್ವೇವ ಗತಾಂಬಿಕಾಂ ಸತೀ।
ವ್ಯಾಸಪ್ರಸಾದಾತ್ ಸುತಸದ್ಗುಣೈಶ್ಚ ಕಾಲೇನ ಮುಕ್ತಿಂ ಚ ಜಗಾಮ ಸನ್ಮತಿಃ॥
– ಮ.ಭಾ.ತಾ.ನಿ. (೧೧/೧೭೦)

ಈ ಹಿಂದೆ ನೋಡಿದ್ದೇವೆ.[೧] ಈಗ ಪುತ್ರನ ಗುಣಗಳಿಂದ ತಾಯಿಗಾದ ಸದ್ಗತಿಯ ಸರದಿ.[೨]

ಸ್ತ್ರೀಯರಿಗೂ, ಶೂದ್ರರಿಗೂ ಸದ್ಗತಿಯೇ ಇಲ್ಲವೆಂದು ಹೇಳಿದವರು ಕೆಲವರು. ಶ್ರೀಮದಾಚಾರ್ಯರೂ ಹಾಗೆ ಹೇಳಿದ್ದಾರೆಂದು ಮಿಥ್ಯಾರೋಪ ಮಾಡಿದವರು ಇನ್ನೂ ಕೆಲವರು. ಅವರೆಲ್ಲರಿಗೂ ಉತ್ತರ ನೀಡಲು ವಿದುರನ ತಾಯಿಗೆ ಸದ್ಗತಿಯಾದ ಈ ಪ್ರಸಂಗವೊಂದೇ ಸಾಕು.

## ರಾಜ್ಯಭಾರದಲ್ಲಿ ವಿದುರ

ಭೀಷ್ಮರು ಧೃತರಾಷ್ಟ್ರನನ್ನೇ ಮಹಾರಾಜನನ್ನಾಗಿಸಿದರು. ಪಾಂಡುವನ್ನು ಯುವರಾಜನನ್ನಾಗಿಸಿದರು. ಆದರೂ ಧೃತರಾಷ್ಟ್ರ ಕುರುಡನೆಂಬ ಕಾರಣಕ್ಕೆ ಪಾಂಡುವೇ ರಾಜ್ಯವನ್ನಾಳಿದ. ಆಗ ವಿದುರನೇ ಪಾಂಡುರಾಜನಿಗೆ ಮಾರ್ಗದರ್ಶಕನಾಗಿದ್ದ.[೩] ಈ ವ್ಯವಸ್ಥೆಗೂ ವಿದುರನ ಅಪಾರ ಪ್ರಜ್ಞಾಶಕ್ತಿ, ನೀತಿಶಾಸ್ತ್ರದ ಆಳವಾದ ಅಧ್ಯಯನ ಕಾರಣವಾಗಿತ್ತು. ರಾಜ್ಯಭಾರದಲ್ಲಿ ವಿದುರನ ತಂತ್ರನೈಪುಣ್ಯವನ್ನು ಭಾಗವತವೂ ಕೊಂಡಾಡಿದೆ:

ಅಥಾಹ ತಂ ಮಂತ್ರದೃಶಾಂ ವರೀಯಾನ್ ಯನ್ಮಂತ್ರಿಣೋ ವೈದುರಿಕಂ ವದಂತಿ ॥[೪]

ಪಾಂಡುವಿನ ನಿರ್ಯಾಣದ ಬಳಿಕವೂ ಧೃತರಾಷ್ಟ್ರನ ಆಪ್ತ ಸಲಹೆಗಾರನಾಗಿ ವಿದುರನು ಕಾರ್ಯ ನಿರ್ವಹಿಸುತ್ತಾನೆ. ಆದಕ್ಕೆಂದೇ ಧೃತರಾಷ್ಟ್ರನು ಹಂತಹಂತದಲ್ಲೂ 'ವಿದುರ ವಿದುರ'

---

೧ ಅಂಧ ಆಸೀತ್ ಸ ತು ಮಾತೃದೋಷತಃ – ಮ.ಭಾ.ತಾ.ನಿ. (೧೧/೧೩೦)
ಪಾಂಡುತ್ವಂ ವರ್ಣತಸ್ತಸ್ಯ ಮಾತೃದೋಷಾದ್ಭವಿಷ್ಯತಿ – ಮ.ಭಾ. (೧/೧೧೫/೨೮)
ಗುಣಾಸ್ತು ಕಾಲಾತ್ ಪಿತೃಮಾತೃದೋಷಾತ್ – ಮ.ಭಾ.ತಾ.ನಿ. (೩/೩೦)

೨ 'ಸೂತ್ವಾ ತು ಭರತಂ ನೈಷಾ ಗಚ್ಛೇತ ನಿರಯಾನಿತಿ' – ಮ.ಭಾ.ತಾ.ನಿ. (೯/೯೪) ಎಂಬುದಾಗಿ ಕೈಕೇಯಿಗಾದ ಸದ್ಗತಿಯ ಬಗ್ಗೆ ಹೇಳಿರುವುದನ್ನೂ, 'ಪಾಂಡುಶ್ಚ ಪುತ್ರಕಗುಣೈಃ ಸ್ವಗುಣೈಶ್ಚ ..... ಲೋಕಾನವಾಪ ವಿಮಲಾನ್' – ಮ.ಭಾ.ತಾ.ನಿ. ೧೪/೫೪ ಎಂಬುದಾಗಿ ಪಾಂಡುವಿಗಾದ ಸದ್ಗತಿಯ ಬಗ್ಗೆ ಹೇಳಿರುವುದನ್ನೂ, 'ಪುತ್ರೇಣ ವಿದ್ಯಯಾ ನಿತ್ಯಮೇಕೈಕೇನಾಪಿ ಯುಜ್ಯತೇ । ಉಭಾಭ್ಯಾಂ ಕಿಮು ವಕ್ತವ್ಯಮಷ್ಟಭಾಗಫಲಂ ಸುತಾತ್ ॥ (ನಾರಾಯಣಶ್ರುತಿ)' – ಬೃಹದಾರಣ್ಯಕೋಪನಿಷದ್ಭಾಷ್ಯ ೩/೬, 'ತ್ರಾತಾ ಯ ಏವ ನರಕಾತ್ ಸ ಹಿ ಪುತ್ರನಾಮಾ' – ಸುಮಧ್ವವಿಜಯ ೨/೧೭ ಇತ್ಯಾದಿಗಳನ್ನೂ ಇಲ್ಲಿ ಸ್ಮರಿಸಬಹುದು.

೩ ಅಮಾತ್ಯೋ ಮನುಜೇಂದ್ರಸ್ಯ ಬಾಲ ಏವ ಯಶಸ್ವಿನಃ ।
ಭೀಷ್ಮೇಣ ಸರ್ವಧರ್ಮಾಣಾಂ ಪ್ರಣೇತಾ ವಿದುರಃ ಕೃತಃ ॥ – ಮ.ಭಾ. (೧/೧೧೮/೨೫)
ಅಪೀಪಲದ್ಧರ್ಮಸಮಾಶ್ರಯೋ ಮಹೀಂ
ಜ್ಯೇಷ್ಠಾಪಚಾಯೀ ವಿದುರೋಕ್ತಮಾರ್ಗತಃ ॥ – ಮ.ಭಾ.ತಾ.ನಿ. (೧೧/೧೬೫)

೪ ಭಾಗವತ (೩/೧/೧೦)

ಎಂದು ಹಲುಬುತ್ತಿದ್ದದ್ದು, ಸ್ವತಃ ತಾನು ವಿದುರನಿಂದ ವಿದುರನೀತಿಯನ್ನು ಶ್ರವಣ ಮಾಡಿದ್ದು. ವಿದುರನೀತಿಯ ಉದ್ದಕ್ಕೂ ಅನೇಕ ರಾಜನೀತಿಯ ವಿಚಾರಗಳು ವಿದುರನ ಅನುಭವದಿಂದ ಹೊರಹೊಮ್ಮುತ್ತವೆ.

ಧೃತರಾಷ್ಟ್ರನು ವಿದುರನ ಸಲಹೆಯನ್ನು ಸ್ವೀಕರಿಸಿದಾಗಲೆಲ್ಲ ಶುಭವಾಗಿದೆ. ಅದಕ್ಕೆ ಒಂದು ಉದಾಹರಣೆ (ಮ.ಭಾ. ೧/೨೨೪-೨೨೬) ಎಂದರೆ - ಅರಗಿನ ಮನೆಯಲ್ಲಿ ಪಾಂಡವರು ದಗ್ಧರಾಗಲಿಲ್ಲವೆಂದು ತಿಳಿದಾದ ಮೇಲೆ ಒಂದು ವರ್ಷ ಕಳೆದರೂ ಪಾಂಡವರನ್ನು ಕರೆಸಿಕೊಳ್ಳದೇ ಧೃತರಾಷ್ಟ್ರ ಉಪೇಕ್ಷೆ ತೋರಿದ್ದ.[೧] ದುರ್ಯೋಧನಾದಿಗಳಂತೂ ಪಾಂಡವರ ಏಳಿಗೆಯನ್ನು ಸಹಿಸಲಾಗದೇ ಅವರ ಮೇಲೆ ಯುದ್ಧಕ್ಕೆಂದೇ ಅಣಿಯಾಗಿ ಹೊರಡುತ್ತಾರೆ. ಆಗ ವಿದುರನು ಧೃತರಾಷ್ಟ್ರನಿಗೂ ಭೀಷ್ಮಾದಿಗಳಿಗೂ ಭೀಮಾರ್ಜುನರ ಪರಾಕ್ರಮವನ್ನೂ ಅವರ ಮೇಲೆ ಯುದ್ಧಕ್ಕೆ ಹೊರಟ ದುರ್ಯೋಧನಾದಿಗಳ ಮೂರ್ಖತನವನ್ನೂ ಯಥಾವತ್ತಾಗಿ ತಿಳಿಸುತ್ತಾನೆ. ಧೃತರಾಷ್ಟ್ರನ ಔದಾಸೀನ್ಯವನ್ನು ಖಂಡಿಸುತ್ತಾನೆ. ಭೀಷ್ಮದ್ರೋಣಾದಿಗಳ ಸಹಮತವನ್ನೂ ಪಡೆದು, ಯುದ್ಧದಿಂದ ಹಿಂದೆ ಸರಿಯುವ ಬಗ್ಗೆ ಮತ್ತು ಪಾಂಡವರನ್ನು

---

೧ ಯುದ್ಧಾಯ ತೇಷು ಪುನರೇವ ರಥೈಃ ಪ್ರಯಾತೇ-
ಷ್ವಾಹಾಗ್ರಜಂ ಸ ವಿದುರೋಽಪಿ ನದೀಜಮುಖ್ಯಾನ್ ।
ಏತೇ ಹಿ ಪಾಪತಮಚೇತಸ ಏತ್ಯ ಪಾರ್ಥಾನ್
ಯುದ್ಧಾಯ ಮೃತ್ಯುಮುಪಯಾಂತಿ ನ ಸಂಶಯೋಽತ್ರ ॥
ಭೀಮಾರ್ಜುನೌ ವಿಷಹಿತುಂ ನ ಹಿ ಕಶ್ಚನಾಸ್ತಿ
ಸಾಮರ್ಥ್ಯಯುಕ್ ಸುರವರೇಷ್ವಪಿ ವರ್ಧಿತಾಸ್ತೇ ।
ಜ್ಞಾತ್ವೈವ ವತ್ಸರತ ಏವ ಮಹಾನಧರ್ಮ-
ಸ್ತೇಷಾಮುಪೇಕ್ಷಣಕೃತಸ್ತದಲಂ ನಿಯುಂಕ್ಷ್ವ ॥
ಆನೀತಯೇ ಚ ವಿನಿಯುಜ್ಯ ಸುಸಾಂತ್ವಪೂರ್ವ-
ಮಾನೀಯ ಯೋಜಯ ನೃಪೇಷು ತಥಾಽರ್ಧರಾಜ್ಯಮ್ ।
ಏವಂ ಕೃತೇ ತವ ಭವೇತ್ ಕುಲವೃದ್ಧಯೇ ಹಿ
ಧರ್ಮಾಯ ಚೋಭಯವಿನಾಶಕರೋಽನ್ಯಥಾ ಸ್ಯಾಃ ॥
ಇತ್ಯುಕ್ತವತ್ಯನು ತಥೇತ್ಯವದನ್ನದೀಜೋ
ದ್ರೋಣಃ ಕೃಪಶ್ಚ ವಿದುರಂ ಸ ನೃಪೋಽಪ್ಯುವಾಚ ।
ಯಾಹ್ಯಾನಯೇತಿ ಸ ಚ ವೇಗವತಾ ರಥೇನ
ತತ್ರಾಗಮತ್ ತದನು ತೈರಭಿಪೂಜಿತಶ್ಚ ॥
ತತ್ಕಾಲ ಏವ ವಸುದೇವಸುತಶ್ಚ ಕೃಷ್ಣೋ
ವ್ಯಾಸಶ್ಚ ತಾನುಪಸಮೇತ್ಯ ದುರಂತಶಕ್ತೀ ।
ಆದಾಯ ಕುಂತಿಸಹಿತಾನ್ ವಿದುರೇಣ ಯುಕ್ತೌ
ನಾಗಾಹ್ವಯಂ ಪುರಮಿತಾಂ ಸಹ ಭಾರ್ಯಯೈವ ॥ - ಮ.ಭಾ.ತಾ.ನಿ. (೧೯/೧೭೫-೧೭೯)

ಆದರದಿಂದ ಕರೆತರುವ ಬಗ್ಗೆ ಧೃತರಾಷ್ಟ್ರನನ್ನು ಒಪ್ಪಿಸುತ್ತಾನೆ. ಆ ಮೂಲಕ, ಧೃತರಾಷ್ಟ್ರನಿಗೆ ಅಂದೇ ಆಗಿಬಿಡುತ್ತಿದ್ದ ಪುತ್ರವಿಯೋಗವನ್ನು ತಪ್ಪಿಸುತ್ತಾನೆ. ವಿದುರನ ಇಂತಹ ಮಾತುಗಳಿಂದ ಧಾರ್ಮಿಕಪ್ರಜ್ಞೆಯ ಜೊತೆಗೆ ಯುದ್ಧಕ್ಕೆ ತೆರಳುವ ಮುನ್ನ ರಾಜನೆನಿಸಿಕೊಂಡವನಿಗೆ ತನ್ನ ಮತ್ತು ಶತ್ರುವಿನ ಬಲಾಬಲದ ಬಗ್ಗೆ ಮತ್ತು ಯುದ್ಧದ ಪರಿಣಾಮಗಳ ಬಗ್ಗೆ ನಿಖರವಾದ ಅರಿವಿರಬೇಕೆಂಬ ರಾಜನೀತಿಯನ್ನೂ ಕಲಿಯುವುದಿದೆ.

ಉಪದೇಶ ಹೇಳುವುದು ಒಂದು ಬಗೆಯ ಹಿರಿಮೆಯಾದರೆ, 'ಸರಿ, ಕರೆದು ತಾ' ಎಂದು ಧೃತರಾಷ್ಟ್ರ ಹೇಳಿದಾಕ್ಷಣ ತನ್ನ ಚಿಂತನೆಯನ್ನು ಕಾರ್ಯರೂಪಕ್ಕೆ ತರುವುದು ಮತ್ತೊಂದು. ಇದರಲ್ಲೂ ವಿದುರ ಸೈ ಎನಿಸಿಕೊಂಡ.

ಇನ್ನು ಧೃತರಾಷ್ಟ್ರನು ವಿದುರನ ಸಲಹೆಯನ್ನು ತಿರಸ್ಕರಿಸಿದಾಗಲೆಲ್ಲ ಅನಾಹುತವಾಗಿದೆ. ಅದಕ್ಕೆ, ಪಾಂಡವರಿಗೆ ಅವರ ರಾಜ್ಯ ಹಿಂದಿರುಗಿಸದೇ ಕುರುಕ್ಷೇತ್ರಯುದ್ಧಕ್ಕೆ ನಡೆದದ್ದೇ ಒಂದು ಉದಾಹರಣೆಯಾದರೆ ಮತ್ತೊಂದು ಹೀಗಿದೆ: ದುರ್ಯೋಧನ ಹುಟ್ಟುತ್ತಲೇ ಅನೇಕ ವಿಧವಾದ ದುಃಶಕುನಗಳು ಕಾಣಿಸಿಕೊಂಡವು. ಕೂಡಲೇ ಧೃತರಾಷ್ಟ್ರನು ಬ್ರಾಹ್ಮಣರನ್ನೂ, ಭೀಷ್ಮರನ್ನೂ, ವಿದುರನನ್ನೂ, ಬಾಂಧವರನ್ನೂ ಕರೆದು ಅವನ ಭವಿಷ್ಯ ವಿಚಾರಿಸಿದನು. ಆಗ ಬ್ರಾಹ್ಮಣರೂ, ವಿದುರನೂ, ಆ ದುಃಶಕುನಗಳನ್ನು ವಿಮರ್ಶಿಸಿ ಇವನು ಕುಲನಾಶಕನಾಗುವನು; ಕ್ಷತ್ರಿಯ ಕುಲಕ್ಕೂ ಮಾರಕ. ಆದ್ದರಿಂದ ಇವನೊಬ್ಬನನ್ನು ತ್ಯಜಿಸು; ಹಾಗೆ ಮಾಡುವುದು ಉಳಿದ ಮಕ್ಕಳಿಗೂ, ಕುಲಕ್ಕೂ, ಲೋಕಕ್ಕೂ ತಾರಕ ಎಂದರು.[೧]

ಅನಿವಾರ್ಯವಾದಲ್ಲಿ ಕುಲದ ಉನ್ನತಿಗಾಗಿ ಒಬ್ಬನನ್ನು ತ್ಯಜಿಸಬೇಕು; ಗ್ರಾಮದ ಉನ್ನತಿಗಾಗಿ ಕುಲವನ್ನು ತ್ಯಜಿಸಬೇಕು; ದೇಶದ ಉನ್ನತಿಗಾಗಿ ಗ್ರಾಮವನ್ನು ತ್ಯಜಿಸಬೇಕು; ಆತ್ಮೋನ್ನತಿಗಾಗಿ (ಪರಮಾತ್ಮನ ಪ್ರೀತಿಗಾಗಿ) ಭೂಮಿಯನ್ನೇ ತ್ಯಜಿಸಬೇಕು ಎಂಬ ಉತ್ತಮ ಮಾತನ್ನು ಧೃತರಾಷ್ಟ್ರನಿಗೆ ತಿಳಿಸಿದ ಜ್ಞಾನಿಗಳಲ್ಲಿ ವಿದುರ ಪ್ರಧಾನನಾದವನು. ತನ್ನ ಪೂರ್ವಜನಾದ ಭರತನ ಮಕ್ಕಳನ್ನು ಇಂತಹುದೇ ಪ್ರಸಂಗದಲ್ಲಿ ಸ್ವತಃ ಆ ಮಕ್ಕಳ ತಾಯಂದಿರೇ ಕೊಂದದ್ದಾದರೂ ಧೃತರಾಷ್ಟ್ರನಿಗೆ ಮಾದರಿಯಾಗಬಹುದಿತ್ತು:

ಜಘ್ನುಸ್ತ್ಯಾಗಭಯಾತ್ ಪುತ್ರಾನ್ ನಾನುರೂಪಾ ಇತೀರಿತೇ ।[೨]

---

೧ ಶತಮೇಕೋನಮಪ್ಯಸ್ತು ಪುತ್ರಾಣಾಂ ತೇ ಮಹೀಪತೇ ।
ತ್ಯಜೈನಮೇಕಂ ಶಾಂತಿಂ ಚೇತ್ ಕುಲಸ್ಯೇಚ್ಛಸಿ ಭಾರತ ।
ಏಕೇನ ಕುರು ವೈ ಕ್ಷೇಮಂ ಕುಲಸ್ಯ ಜಗತಸ್ತಥಾ ।
ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥ - ಮ.ಭಾ. (೧/೧೨೯/೮೧-೮೩)

೨ ಭಾಗವತ (೯/೧೭/೩೪)

ಆದರೆ, ಅವರು ತೋರಿದ ವಿವೇಕವನ್ನು ಪುತ್ರಮೋಹಕ್ಕೆ ಮನಸೋತ ಧೃತರಾಷ್ಟ್ರ ತೋರಲಿಲ್ಲ. ಆದರಿಂದಾಗಿ ಮುಂದೆ ದುರ್ಯೋಧನನ ನಿಮಿತ್ತದಿಂದಾದ ಅಗಾಧ ಲೋಕನಾಶ ಮಾತ್ರ ಇತಿಹಾಸ.

## ವಿದುರನು ಶೋಷಿತನೇ?

ಕೆಲವರು ವಿದುರನು ಶೂದ್ರನೆಂಬ ಕಾರಣಕ್ಕೆ ಶೋಷಿತನಾದನು ಎಂಬುದಾಗಿ ವರ್ಣಾಶ್ರಮವ್ಯವಸ್ಥೆಯನ್ನೇ ದೂಷಿಸುವುದುಂಟು. ಆದರೆ, ಮಹಾಭಾರತವನ್ನು ನೋಡಿದಾಗ ಈ ವಿಚಾರದಲ್ಲಿ ಕೆಳಗಿನ ನಾಲ್ಕು ಪ್ರಮೇಯಗಳು ಸ್ಪಷ್ಟಪಡುವವು.

೧. ವಿದುರನು ವರ್ಣಾಶ್ರಮವ್ಯವಸ್ಥೆಯನ್ನು ಒಪ್ಪಿ ಗೌರವಿಸುತ್ತಿದ್ದವನು. ತಾನು ಕ್ಷತ್ರಿಯನಾಗದ ಕಾರಣ ರಾಜ್ಯಾಡಳಿತದಲ್ಲಿ ಉತ್ತಮ ಮಾರ್ಗದರ್ಶಕನಾದನೇ ಹೊರತು ರಾಜನಾಗಲಿಲ್ಲ, ಅದನ್ನು ಬಯಸಲೂ ಇಲ್ಲ. ಹಾಗೂ, ವಿದುರನೀತಿಯ ಪ್ರಸಂಗದಲ್ಲಿ ವರ್ಣಧರ್ಮಗಳ ಬಗ್ಗೆ ವಿದುರನೇ ಉಪದೇಶಿಸುತ್ತಾನೆ (ಮ.ಭಾ. ೫/೪೦/೨೫-೨೯). ಅಲ್ಲದೇ, ವಿದುರನೀತಿಯನ್ನು ಕೇಳಿದ ಧೃತರಾಷ್ಟ್ರ ವಿಷ್ಣುವಿನ ಸ್ವರೂಪದ ಬಗ್ಗೆ ಕೇಳಿದಾಗ ವಿದುರನು ಆ ಉಪದೇಶ ಮಾಡಲು ತಾನು ಅರ್ಹನಲ್ಲನೆಂದು[೧] ಹೇಳಿ ಬ್ರಹ್ಮಯೋನಿಗಳಾದ ಸನತ್ಸುಜಾತರಿಂದ[೨] ಉಪದೇಶ ಮಾಡಿಸುತ್ತಾನೆ:

ಶೂದ್ರಯೋನಾವಹಂ ಜಾತೋ ನಾತೋಽನ್ಯದ್ವಕ್ತುಮುತ್ಸಹೇ।
ಕುಮಾರಸ್ಯ ತು ಯಾ ಬುದ್ಧಿರ್ವೇದ ತಾಂ ಶಾಶ್ವತೀಮಹಂ॥
ಬ್ರಾಹ್ಮೀಂ ಹಿ ಯೋನಿಮಾಪನ್ನಃ ಸುಗುಹ್ಯಮಪಿ ಯೋ ವದೇತ್।[೩]

ಹಾಗೂ, ವಿದುರನು ತಾನು ಪಾಂಡವರಿಗೆ ಎಷ್ಟೇ ಹತ್ತಿರನಿದ್ದರೂ, ಸಮರ್ಥನಿದ್ದರೂ ಕುರುಕ್ಷೇತ್ರ ಯುದ್ಧದ ಸಮಯದಲ್ಲಿ ಶಸ್ತ್ರ ಹಿಡಿದು ಯುದ್ಧಮಾಡುವುದಿಲ್ಲ.

೨. ವಿದುರನು ತನ್ನ ವರ್ಣಧರ್ಮವನ್ನು ಮೀರದೇ ದ್ರೋಣ, ಅಶ್ವತ್ಥಾಮರಂತಹ ಬ್ರಾಹ್ಮಣರಿಗಿಂತ ಹೆಚ್ಚಿನ ಗರಿಮೆ ಪಡೆದ; ಸ್ವರೂಪದಲ್ಲಿ ಉತ್ತಮರಾದ ಅವರನ್ನೂ ಮೀರಿಸಲು ಅವನಿಗೆ ಸಾಧ್ಯವಾದದ್ದು ಭೀಮಾದಿ ಪಾಂಡವರ ಸಂಪರ್ಕದಿಂದಾಗಿ, ಧರ್ಮದ ಮೇಲಿನ ನಿಷ್ಠೆಯಿಂದಾಗಿ. ಅವನ ಉನ್ನತಿಯಲ್ಲಿ ಜಾತಿಯು ತೊಡಕಾಗಲಿಲ್ಲ. ಮಹಾತ್ಮರ ಬದುಕೇ ಹಾಗೆ.

ರಾಮಾಯಣದಲ್ಲಿನ ಶಂಬೂಕನ ಪ್ರಸಂಗವನ್ನು (ಮ.ಭಾ.ತಾ.ನಿ. - ೯/೧೯-೨೧) ತಪ್ಪಾಗಿ ಅರ್ಥೈಸಿಕೊಂಡ ಕೆಲವರು ಶೂದ್ರರು ತಪಸ್ಸನ್ನು ಮಾಡುವುದೇ ನಿಷಿದ್ಧವಾದ್ದರಿಂದ

---

೧ ಶೂದ್ರಸ್ಯ ಪರಮಾಪದಿ - ಮ.ಭಾ.ತಾ.ನಿ. (೨೯/೩೨)
೨ ಸೋಽಸ್ಮರಚ್ಚ ಸನಾತನಮ್ - ಮ.ಭಾ.ತಾ.ನಿ. (೨೪/೩೮)
೩ ಮ.ಭಾ. ೫/೪೧/೫-೬

ವರ್ಣಾಶ್ರಮವ್ಯವಸ್ಥೆಯಲ್ಲಿ ಕುಂದಿದೆ ಎಂದು ಭ್ರಮಿಸಿ ಆಕ್ಷೇಪಿಸುವುದುಂಟು. ಶೂದ್ರನೂ ಯೋಗ್ಯನೂ ಆದ ವಿದುರನು ಅಂತ್ಯಕಾಲದಲ್ಲಿ ತಪೋನಿರತನಾಗಿ ಸ್ವಗತಿ ಹೊಂದಿದ ಮಾಹಿತಿಯು ಅವರಿಗೆ ನೇರ ಉತ್ತರವಾಗಿದೆ.[೧]

ದುಷ್ಕುಲೀನಃ ಕುಲೀನೋ ವಾ ಮರ್ಯಾದಾಂ ಯೋ ನ ಲಂಘಯೇತ್ ।
ಧರ್ಮಾಪೇಕ್ಷೀ ಮೃದುರ್ಹ್ರೀಮಾನ್ ಸ ಕುಲೀನಶತಾದ್ವರಃ ॥[೨]

(ಕುಲವಂತನೋ ಕೆಟ್ಟಕುಲದವನೋ, ಯಾವನು ವಿಧಿನಿಷೇಧಗಳನ್ನು ಮೀರುವುದಿಲ್ಲವೋ, ಧರ್ಮದ ನೆಲೆಗಟ್ಟನ್ನು ಗೌರವಿಸುವನೋ, ಮೃದುಸ್ವಭಾವದವನೋ, ಕೆಟ್ಟದ್ದಕ್ಕೆ ನಾಚುವನೋ ಅವನು ನೂರು ಕುಲವಂತರಿಗಿಂತ ಮಿಗಿಲು.) ಎಂದು ವಿದುರನು ವಿದುರನೀತಿಯಲ್ಲಿ ಹೇಳಿದ್ದಕ್ಕೆ ತಾನೇ ದೃಷ್ಟಾಂತ.

೩. ಪಾಂಡವರು ಮೊದಲಾದ ಸಜ್ಜನರಿಂದ ವಿದುರನಿಗೆ ಶೋಷಣೆಯಾಗಲೀ ಅವಮಾನವಾಗಲೀ ಎಂದೂ ಆಗಿರಲಿಲ್ಲ. ಬದಲಾಗಿ ಅವನಿಗೆ ಗುಣನಿಮಿತ್ತಕವಾದ ಯಥೋಚಿತ ಗೌರವಾದರಗಳನ್ನು ಸದಾ ಕೊಡಲಾಗುತ್ತಿತ್ತು.[೩] ಶಾಸ್ತ್ರದ ನಿಯಮವೇ ಹಾಗೆ.

ಅಲ್ಲದೇ, ಅನೇಕ ಪ್ರಮುಖ ಸನ್ನಿವೇಶಗಳಲ್ಲಿ ವಿದುರ ಪಾಲ್ಗೊಂಡಿದ್ದರ ಉಲ್ಲೇಖವಿದೆ. ಉದಾಹರಣೆಗೆ, ಪಾಂಡವರೆಲ್ಲ ಪಾಂಡುವಿನ ಅಂತ್ಯಸಂಸ್ಕಾರದ ಬಳಿಕ ಹಸ್ತಿನಾಪುರಕ್ಕೆ ಆಗಮಿಸಿಯಾದ ಮೇಲೆ ಪಾಂಡುರಾಜನ ಶ್ರಾದ್ಧಾದಿಗಳನ್ನು ಮಾಡಿಸುವ ಜವಾಬ್ದಾರಿಯನ್ನು ವಿದುರ ಹೊತ್ತಿದ್ದ.[೪] ಕುರುಪಾಂಡವರ ಅಸ್ತ್ರವಿದ್ಯಾಪ್ರದರ್ಶನದಲ್ಲಿ ವಿದುರನ ಪಾತ್ರವಿತ್ತು.[೫]

---

೧ ಕ್ಷತ್ತಾ ಚ ಧರ್ಮಾರ್ಥವಿದಗ್ರ್ಯಬುದ್ಧಿಃ ಸಸಂಜಯಸ್ತಂ ನೃಪತಿಂ ಸದಾರಮ್ ।
ಉಪಾಚರದ್ಘೋರತಪೋ ಜಿತಾತ್ಮಾ ತದಾ ಕೃಶೋ ವಲ್ಕಲಚೀರವಾಸಾಃ ॥
 - ಮ.ಭಾ. (೧೫/೨೦/೧೮)
ಕುಶಲೀ ವಿದುರಃ ಪುತ್ರ ತಪೋ ಘೋರಂ ಸಮಾಶ್ರಿತಃ ॥ - ಮ.ಭಾ. (೧೫/೨೮/೧೬)
ಸಕ್ಷತೃಗಾಂಧಾರಿಪೃಥೇ ಸಸಂಜಯೇ ತಪೋಭಿರಾರಾಧಯತಿ ಪ್ರಭುಂ ಹರಿಂ ।
 - ಮ.ಭಾ.ತಾ.ನಿ. (೩೧/೫೭)

೨ ಮ.ಭಾ. ೫/೩೯/೪೭

೩ ರಾಜಾ ತಮರ್ಹಯಾಂಚಕ್ರೇ ಕೃತಾಸನಪರಿಗ್ರಹಮ್ - ಭಾಗವತ (೧/೧೨/೬)

೪ ವಿದುರಸ್ತಂ ತಥೇತ್ಯುಕ್ತ್ವಾ ಭೀಷ್ಮೇಣ ಸಹ ಭಾರತ ।
ಪಾಂಡುಂ ಸಂಸ್ಕಾರಯಾಮಾಸ ದೇಶೇ ಪರಮಪೂಜಿತೇ ॥ - ಮ.ಭಾ. (೧/೧೩೬/೫)

೫ ತತೋ ರಾಜಾನಮಾಮಂತ್ರ್ಯ ವಿದುರಾನುಮತೋಽಪಿ ಹಿ ।
ಭಾರದ್ವಾಜೋ ಮಹಾಪ್ರಾಜ್ಞೋ ಮಾಪಯಾಮಾಸ ಮೇದಿನೀಮ್ ॥ -ಮ.ಭಾ. (೧/೧೪೪/೮)

ರಾಜಸೂಯಯಾಗಕ್ಕೆ ವಿದುರ ಆಮಂತ್ರಿತನಾಗಿ ಆಗಮಿಸಿದ್ದನು.[೧] ಶ್ರೀಕೃಷ್ಣನು ದ್ರೋಣ, ಭೀಷ್ಮಾದಿಗಳನ್ನು ಕಡೆಗಣಿಸಿ ವಿದುರನ ಮನೆಗೆ ನಡೆದದ್ದಂತೂ ಇತಿಹಾಸದಲ್ಲಿ ಚಿರಸ್ಥಾಯಿ.

೪. ಅನೇಕ ಬಾರಿ ದುರ್ಜನರಾದ ದುರ್ಯೋಧನಾದಿಗಳು ವಿದುರನ ನ್ಯಾಯೋಪೇತವಾದ ಮಂಡನೆಗಳನ್ನು ಸಹಿಸಲಾಗದೇ ತಮ್ಮ ಅನುಕೂಲಕ್ಕೆ ತಕ್ಕಂತೆ ಜಾತಿಯನ್ನು ಮುಂದಿಟ್ಟು ಅವನನ್ನು ತುಳಿಯಲೆತ್ನಿಸಿದ್ದೂ ಹೌದು. ಉದಾಹರಣೆಗೆ, **ಕ ಏನಮತ್ರೋಪಜುಹಾವ ಜಿಹ್ಮಂ ದಾಸ್ಯಾಃ ಸುತಂ ... ।** – ಭಾಗವತ ३/೧/೧೫ ಎಂಬಲ್ಲಿ ಇದು ಕಾಣುತ್ತದೆ.

ಇವೆಲ್ಲವೂ, ವರ್ಣವ್ಯವಸ್ಥೆಯ ಸಾತ್ವಿಕ ಅನುಷ್ಠಾನದ ಬಗ್ಗೆಯೂ, ಚರಿತ್ರೆಯ ಪುಟಗಳಲ್ಲಿ ಆ ವ್ಯವಸ್ಥೆಯು ಕೆಲವೆಡೆ ದುರ್ಬಳಕೆಯಾದದ್ದರ ಬಗ್ಗೆಯೂ ಹಿಡಿದ ಕನ್ನಡಿಯಂತಿದೆ. ಮೇಲೆ ವಿವರಿಸಿದ ನಾಲ್ಕೂ ಅಂಶಗಳಲ್ಲೂ ದ್ವಾಪರಯುಗದ ವಿದುರನಿಗೂ ಕಲಿಯುಗದ ಶ್ರೀಕನಕದಾಸರಿಗೂ ಬಹಳಷ್ಟು ಸಾಮ್ಯವಿದೆ. ಅಲ್ಲದೇ, ಇಬ್ಬರೂ ಶ್ರೀಕೃಷ್ಣನ ಕೃಪಾದೃಷ್ಟಿಗೆ ಬಿದ್ದವರೇ. ಅವರಿಗೆ ಒದಗಿದ ಸನ್ನಿವೇಶಗಳಲ್ಲಿ ಆ ಇಬ್ಬರು ಯಥೋಚಿತವಾಗಿ ಸ್ಪಂದಿಸಿರುವುದೂ ಎಲ್ಲರಿಗೂ ಮಾರ್ಗದರ್ಶಕವಾಗಿದೆ.

## ಪಾಂಡವರ ಹಿತಚಿಂತಕನಾಗಿ ವಿದುರ

ಪಾಂಡವರ ಪರ ನ್ಯಾಯವಿತ್ತು. ಧರ್ಮಿಷ್ಠರಾದ ಅವರ ಪರ ಯಮಧರ್ಮನಾದ ವಿದುರ ನಿಂತ - ನ್ಯಾಯಾಲಯದಲ್ಲಿ ನ್ಯಾಯವಂತರ ಪರ ತೀರ್ಪು ನೀಡುವ ನ್ಯಾಯಾಧೀಶನಂತೆ. ಕೌರವರು ಆತನ ಮೇಲೆ ಕಿಡಿ ಕಾರಿದರು; ಬಳಿಕ ತಾವೇ ಬೂದಿಯಾದರು. ಈಗ ವಿಮರ್ಶಕರೆನಿಸಿದವರ ಸರದಿ.[೨] ವಿದುರನ ಆ ನಿಲುವನ್ನು ಅರಿತು ಮೆಚ್ಚಲಾಗದೇ ಕೀಳು ಮಟ್ಟದಲ್ಲಿ ಆಲೋಚಿಸಿ ಕೆಲವರು ವಿದುರನೇ ಯುಧಿಷ್ಠಿರನ ತಂದೆ ಎಂದರು; ಇನ್ನೂ ಕೆಲವರು ಪಾಂಡವರೆಲ್ಲರಿಗೂ ವಿದುರನೇ ತಂದೆ ಎಂದರು; ಸಾತ್ವಿಕರ ಭಾವನೆಯನ್ನು ಕೆರಳಿಸಿದ್ದಕ್ಕೆ ಹಲವು ಪ್ರಶಸ್ತಿಗಳಿಗೂ ಭಾಜನರಾದರು. ಆದರೆ, ಇದಕ್ಕೆ ಮೂಲಭಾರತದ ಸಹಮತಿಯು ಎಳ್ಳಷ್ಟೂ ಇಲ್ಲ, ಬದಲಾಗಿ ಇದು ಅದಕ್ಕೆ ಸಂಪೂರ್ಣ

---

ತೇ ಭೀಷ್ಮದ್ರೋಣವಿದುರಗಾಂಧಾರೀಧೃತರಾಷ್ಟ್ರಕಾನ್ ।
ಸರಾಜಮಂಡಲಾನ್ ನತ್ವಾ ಕುಂತೀಂ ಚಾದರ್ಶಯಂಚ್ಚ್ರಮಮ್ ॥ – ಮ.ಭಾ.ತಾ.ನಿ. (೧೮/೩೧)

೧ ಧೃತರಾಷ್ಟ್ರಂ ಚ ಭೀಷ್ಮಂ ಚ ವಿದುರಂ ಚ ಮಹಾಮತಿಮ್ ॥ –ಮ.ಭಾ. (೨/೩೭/೬)
ಭೀಷ್ಮೋ ದ್ರೋಣಶ್ಚ ವಿದುರೋ ಧೃತರಾಷ್ಟ್ರಃ ಸಹಾತ್ಮಜಃ ।
ಸಸ್ತ್ರೀಕಾ ಆಯಯುಸ್ತತ್ರ ಬಾಹ್ಲೀಕಶ್ಚ ಸಹಾತ್ಮಜಃ ॥ – ಮ.ಭಾ.ತಾ.ನಿ. (೨೧/೨೩೪)

೨ ಉದಾಹರಣೆಗೆ, ಇರಾವತಿ ಕರ್ವೆಯವರ ಯುಗಾಂತ ಎಂಬ ಪುಸ್ತಕ.

ವಿರುದ್ಧವೇ ಆಗಿದೆ.[೧] ವಿದುರನನ್ನು ಬಹಳವಾಗಿ ದ್ವೇಷಿಸುತ್ತಿದ್ದ ದುರ್ಯೋಧನನೂ ಈ ಆರೋಪವನ್ನು ಮಾಡಿರಲಿಲ್ಲ. ಪ್ರಚಾರಪ್ರಿಯರಾದವರು ಇತಿಹಾಸವನ್ನು ಧಾರ್ಮಿಕಗ್ರಂಥವನ್ನು ಊಹಾಪೋಹ ಮಾಡಿ ಹೀಗೆ ತಿರುಚುವುದು ವಿಮರ್ಶನಪ್ರಪಂಚಕ್ಕೆ ಮಾಡುವ ಅಪಚಾರ.

ಮಹಾಭಾರತದ ವಿವಿಧ ಪ್ರಸಂಗಗಳಲ್ಲಿ ವಿದುರನ ಸಹಜವಾದ ಪಾಂಡವಪ್ರೇಮವನ್ನು ಕಾಣಬಹುದು. ಅದರಲ್ಲಿ ಕೆಲವು ಉದಾಹರಣೆಗಳು ಹೀಗಿವೆ:

೧. ಪಾಂಡವರು ಮೊದಲಬಾರಿಗೆ ಹಸ್ತಿನಾಪುರಕ್ಕೆ ಆಗಮಿಸುತ್ತಿದ್ದಂತೆಯೇ ವಿದುರನಿಗೆ ಆನಂದವಾಗಿತ್ತು.[೨] ಚಂದ್ರನು ಉದಯಿಸುತ್ತಿದ್ದಂತೆಯೇ ಕನ್ನೈದಿಲೆ ಅರಳುವುದಿಲ್ಲವೇ.....

೨. ಭೀಮಾರ್ಜುನರು ದಿಗ್ವಿಜಯ ಮಾಡಿ ಅಪಾರ ಸಂಪತ್ತನ್ನು ಹಸ್ತಿನಾಪುರಕ್ಕೆ ತಂದಾಗ ವಿದುರನಿಗೆ ಆನಂದವಾಗಿತ್ತು.[೩]

೩. ಧೃತರಾಷ್ಟ್ರನು ತನ್ನ ಪುತ್ರರ ಕೈಗೊಂಬೆಯಾಗಿದ್ದುದನ್ನು ತಿಳಿದಿದ್ದ ಶ್ರೀಕೃಷ್ಣನು ಅವನ ವಿಪರೀತವರ್ತನೆಯನ್ನು ನಿಯಂತ್ರಿಸಲು ಅಕ್ರೂರನನ್ನು ಹಸ್ತಿನಾವತಿಗೆ ಕಳುಹಿಸುತ್ತಾನೆ. ಅಕ್ರೂರನು ಮೊದಲಿಗೆ ಪಾಂಡವರ ಬಗ್ಗೆ ಕೌರವರ ಮನಸ್ಸನ್ನು ತಿಳಿಯಲು ಕೆಲವು ತಿಂಗಳು ಅಲ್ಲಿಯೇ ವಾಸಮಾಡುತ್ತಾನೆ. ಆಗ ಪಾಂಡವರಿಗೆ ಹಿತೈಷಿಗಳಾರು, ವೈರಿಗಳಾರು, ಉದಾಸೀನರಾರು ಎಂಬುದನ್ನು ಅವನು ಅರ್ಥಮಾಡಿಕೊಳ್ಳಲು ವಿದುರನ ಪಾತ್ರ ಪ್ರಧಾನವಾಗುತ್ತದೆ.[೪]

೪. ಅರಗಿನ ಮನೆಯ ಪ್ರಸಂಗದಲ್ಲಂತೂ ವಿದುರನು ಹೆಜ್ಜೆ ಹೆಜ್ಜೆಗೂ ರಾಜನೀತಿಯ ಬಗ್ಗೆ ತನ್ನ ಸಮಸ್ತ ಜ್ಞಾನ ಹಾಗೂ ಅನುಭವವನ್ನು ಧಾರೆಯೆರೆಯುತ್ತಾನೆ. ಪ್ರತಿಹಂತದಲ್ಲೂ

---

೧ ಸಾ ಕುಂತೀ ಪುತ್ರಾನುತ್ಪಾದಯಾಮಾಸ।
ಧರ್ಮಾದ್ಯುಧಿಷ್ಠಿರಂ ಮಾರುತಾದ್ಭೀಮಸೇನಂ ಇಂದ್ರಾದರ್ಜುನಮಿತಿ। - ಮ.ಭಾ. (೧/೬೩/೬೫)
ಸಾ ಕುಂತೀ ತಸ್ಯೈ ಮಾದ್ರ್ಯೈ ವ್ರತಮಾದಿದೇಶ।
ತತಸ್ತಸ್ಯಾಂ ನಕುಲಸಹದೇವೌ ಯಮಾವಶ್ವಿಭ್ಯಾಂ ಜಜ್ಞಾತೇ॥ - ಮ.ಭಾ. (೧/೬೩/೬೬)

೨ ತೂಷ್ಣೀಂ ಸ್ಥಿತೇ ತು ನೃಪತೌ ತನುಜೇ ಚ ನದ್ಯಾಃ ಕ್ಷತ್ತರ್ಯುತಾಪ್ತ ಉರುಮೋದಮ್ .....।
- ಮ.ಭಾ.ತಾ.ನಿ. (೧೪/೫೬)

೩ ತದ್ಬಾಹುವೀರ್ಯಮಥ ವೀಕ್ಷ್ಯ ಮುಮೋದ ಧರ್ಮ-
ಸೂನುಃ ಸಮಾತೃಯಮಜೋ ವಿದುರಃ ಸಭೀಷ್ಮಃ। - ಮ.ಭಾ.ತಾ.ನಿ. (೧೪/೯೪)

೪ ಕೃತಂ ಚ ಧಾರ್ತರಾಷ್ಟ್ರೈರ್ಯದ್ಗರದಾನಾದ್ಯಕೌಶಲಮ್।
ಆಚಖ್ಯೌ ಸರ್ವಮೇತಸ್ಮೈ ಪೃಥಾ ವಿದುರ ಏವ ಚ॥ - ಭಾಗವತ (೧೦/೪೮/೬)
ಜ್ಞಾತ್ವಾ ಸ ಕುಂತಿವಿದುರೋಕ್ತಿತ ಆತ್ಮನಾ ಚ
ಮಿತ್ರಾರಿಮಧ್ಯಮಜನಾಂಸ್ತನಯೇಷು ಪಾಂಡೋಃ॥ - ಮ.ಭಾ.ತಾ.ನಿ. (೧೪/೯೭)

ಆತ ತೋರುವ ಸಮಯಪ್ರಜ್ಞೆ ಅನುಪಮವಾದುದು. ಪಾಂಡವರಿಗೆ ಹಿತೈಷಿಯಾಗಿ ತನ್ನ ಪಾಲಿನ ಕರ್ತವ್ಯವನ್ನು ಪ್ರಾಮಾಣಿಕವಾಗಿ ಪೂರೈಸುತ್ತಾನೆ ವಿದುರ.

ಮೊಟ್ಟಮೊದಲಿಗೆ, ವಿದುರನು ದುರ್ಯೋಧನಾದಿಗಳ ಸಂಚನ್ನು ಪತ್ತೆ ಹಚ್ಚುವನು.[೧] ಬಳಿಕ, ಪಾಂಡವರು ವಾರಣಾವತಕ್ಕೆ ಹೊರಡುವಾಗಲೇ ಧರ್ಮರಾಜನಿಗೆ ವಿಷ , ಬೆಂಕಿ ಮೊದಲಾದವುಗಳ ಬಗ್ಗೆ ಜಾಗರೂಕರಾಗಿರಿ ಎಂದು ಎಚ್ಚರಿಸುವನು. ಅದಕ್ಕೆ ಅವನು ಉಪಾಯದಿಂದ ಆರಿಸಿಕೊಂಡದ್ದೂ ಸಹ, ಧರ್ಮರಾಜನಿಗೆ ತಿಳಿಯಬಹುದಾದಂತಹ ಹಾಗೂ ಇದನ್ನೆಲ್ಲ ಕೇಳಿಸಿಕೊಳ್ಳುತ್ತಿರುವ ಕೌರವರಿಗೆ ತನಗೆ ವಿಚಾರ ಗೊತ್ತಾಗಿದೆ ಎಂದು ತಿಳಿಯಲಾಗದಂತಹ (ಮ.ಭಾ. ೧/೧೫೭/೧೯-೨೫) ನಿಗೂಢ ಭಾಷೆ.[೨]

ವಿದುರ ಇಷ್ಟಕ್ಕೇ ತನ್ನ ಕೆಲಸ ಮುಗಿದು ಹೋಯಿತೆಂದು ಕೈಕಟ್ಟಿ ಕೂಡಲಿಲ್ಲ. ತನ್ನ ನೀತಿಬಲದಿಂದ ಮತ್ತು ಚಾರರ ಮೂಲಕ ವರ್ತಮಾನಗಳ ಬಗ್ಗೆ ಸದಾ ಜಾಗ್ರತನಾಗಿದ್ದು ಅರಗಿನ ಮನೆಯಿಂದ ಬಹುದೂರದವರೆಗೆ (ಮ.ಭಾ. ೧/೧೫೯) ಸುರಂಗಮಾರ್ಗವನ್ನು ಖನಕನೊಬ್ಬನ ಮೂಲಕ ತೋಡಿಸುವನು.[೩] ಪಾಂಡವರು ಸುರಂಗಮಾರ್ಗದಿಂದ[೪] ಬಂದು, ಗಂಗಾನದಿಯನ್ನು ತಲುಪುವ ವೇಳೆಗೆ (ಮ.ಭಾ. ೧/೧೬೧) ಗಂಗಾನದಿಯನ್ನು ದಾಟಲು ನಾವೆಯನ್ನೂ ನಾವಿಕರನ್ನೂ ಸಿದ್ಧಪಡಿಸಿದ್ದ.[೫]

---

೧ ತೇಷಾಮಿಂಗಿತಭಾವಜ್ಞೋ ವಿದುರಸ್ತತ್ತ್ವದರ್ಶಿವಾನ್ ।
ಆಕಾರೇಣ ಚ ತಂ ಮಂತ್ರಂ ಬುಬುಧೇ ದುಷ್ಟಚೇತಸಾಮ್ ॥ -ಮ.ಭಾ. (೧/೧೫೪/೩)

೨ ಕ್ಷತ್ತಾಽಥ ಚಾಹ ಸುವಚೋಽಂತ್ಯಜಭಾಷಯೈವ
ಧರ್ಮಾತ್ಮಜಂ ವಿಷಹುತಾಶಭಯಾತ್ ಪ್ರತೀತಾಃ ।
ಆಧ್ವಂ ತ್ವಿತಿ ಸ್ಮ ಸ ತಥೇತಿ ವಚೋಽಭ್ಯುದೀರ್ಯ
ಪ್ರಾಯಾಚ್ಚ ವಾರಣವತಂ ಪೃಥಯಾನುಜೈಶ್ಚ ॥ - ಮ.ಭಾ.ತಾ.ನಿ. (೧೯/೩೧)

೩ ಕ್ಷತ್ತಾಽಥ ನೀತಿಬಲತೋಽಖಿಲಲೋಕವೃತ್ತಂ
ಜಾನನ್ ಸ್ವಚಾರಮುಖತಃ ಖನಕಾಯ ಚೋಚೇ ।
ಉಕ್ತ್ವೈವ ಧರ್ಮತನಯಾಯ ಮದೀಯವಾಕ್ಯಂ
ಪೂರ್ವೋಕ್ತಮಾಶು ಕುರು ತತ್ರ ಬಿಲಂ ಸುದೂರಮ್ ॥ - ಮ.ಭಾ.ತಾ.ನಿ. (೧೯/೩೬)

೪ ವಾರಣಾವತದಲ್ಲಿ ಅರಗಿನ ಮನೆಯ ಅವಶೇಷಗಳು ಮತ್ತು ಅದರ ಬಳಿ ಸುರಂಗಮಾರ್ಗವೊಂದು ಈಗಲೂ ಉಪಲಬ್ಧವಿರುವುದು ಈ ಪ್ರಸಂಗದ ಐತಿಹಾಸಿಕತೆಗೆ ಸಾಕ್ಷಿಯಾಗಿದೆ. ಅದರ ಚಿತ್ರಗಳನ್ನು 'ಶ್ರೀವ್ಯಾಸಮಧ್ವ' ಮಾಸಪತ್ರಿಕೆಯ ಏಪ್ರಿಲ್-೨೦೧೭ರ ಸಂಚಿಕೆಯ ಎರಡನೇ ರಕ್ಷಾಪುಟವನ್ನು ನೋಡಬಹುದು.

೫ ...................... ದ್ಯುನದೀಂ ಚ ತೀರ್ತ್ವಾ
ಕ್ಷತ್ರಾತಿಸೃಷ್ಟಮಧಿರುಹ್ಯ ಜಲಪ್ರಯಾಣಮ್ ॥
ವಿಶ್ವಾಸಿತಾ ವಿದುರಪೂರ್ವವಚೋಭಿರೇವ
ದಾಶೋದಿತಾಭಿರಧಿರುಹ್ಯ ಚ ಭೀಮಪೃಷ್ಠಮ್ ।
ಸರ್ವೇ ಯಯುರ್ವನಮ್ ................ ॥ - ಮ.ಭಾ.ತಾ.ನಿ. (೧೯/೪೩,೪೪)

ಪುರೋಚನಾದಿಗಳ ಸುಟ್ಟ ಶವಗಳನ್ನು ಕಂಡು ಪಾಂಡವರೇ ಸುಟ್ಟರೆಂದು ಭ್ರಮಿಸಿ ಎಲ್ಲರೂ ಗೋಳಾಡುವಾಗ ವಿದುರನೂ ಅಳುವ ನಾಟಕವಾಡುತ್ತಾನೆ.[೧]

ಹೀಗೆಲ್ಲ ಮಾಡದೆ ಕೌರವರ ಸಂಚು ತಿಳಿದಾಗಲೇ ಅದನ್ನು ಪ್ರಕಟಪಡಿಸಿದ್ದರೆ ಅಥವಾ ಕೊನೆಯಲ್ಲಿ ಅಳುವಂತೆ ನಟಿಸದಿದ್ದರೆ, ಕೌರವರಿಗೆ ವಿದುರನ ಸಾಮರ್ಥ್ಯೋದ್ದೇಶಗಳು ಸ್ಪಷ್ಟ ತಿಳಿಯುತ್ತಿತ್ತು. ಆಗ ಮುಂದಿನ ಸಂಚಿನಲ್ಲಿ ದುರ್ಯೋಧನಾದಿಗಳು ತನ್ನ ಬಗ್ಗೆ ಇನ್ನೂ ಹೆಚ್ಚಿನ ಕಾಳಜಿ ವಹಿಸುವುದರಿಂದ ಈ ಬಾರಿಯಂತೆ ತನ್ನ ಪಾಲಿನ ಕರ್ತವ್ಯ ನಿರ್ವಹಿಸಲು ಕಷ್ಟವಾದೀತೆಂಬುದು ಆತನ ಆಲೋಚನೆ. ಎಂತಹ ಶ್ರೇಷ್ಠ ರಾಜನೀತಿ! ಒಟ್ಟಾರೆ ಎಲ್ಲವೂ ತಾನು ರೂಪಿಸಿದ ಯೋಜನೆಯಂತೆಯೇ ನಡೆಯುವಂತಹ ಜಾಣ್ಮೆ ಮತ್ತು ಎಚ್ಚರಗಳನ್ನು ವಿದುರ ವಹಿಸುತ್ತಾನೆ. ಶಕುನಿಯ ಕಣಿಕನೀತಿಯ ಕುತಂತ್ರಕ್ಕೆ ಪ್ರತಿಯಾಗಿ ವಿದುರನ ಬೃಹಸ್ಪತಿನೀತಿಯ ರಾಜತಂತ್ರ ಜಯಿಸುತ್ತದೆ. ಬಹಳ ನೊಂದಿದ್ದ ಭೀಷ್ಮರಿಗೆ ಮಾತ್ರ ಸೂಚ್ಯವಾಗಿ ವಿದುರ ಸತ್ಯ ತಿಳಿಸುತ್ತಾನೆ.

೫. ಪಾಂಡವರ ಯಶೋಗಾಥೆಯನ್ನು ವರ್ಣಿಸಲೂ ವಿದುರನಿಗೆ ಎಲ್ಲಿಲ್ಲದ ಆನಂದ. ಉದಾಹರಣೆಗೆ, ಹಿಡಿಂಬವಧೆ, ಬಕವಧೆ, ದ್ರೌಪದೀ ಸ್ವಯಂವರ ಮುಂತಾದ ಪ್ರಸಂಗಗಳಲ್ಲಿ ಭೀಮಾದಿಗಳ ಪರಾಕ್ರಮವನ್ನು ಭೀಷ್ಮಾದಿ ಎಲ್ಲರಿಗೂ ತಿಳಿಸಿ ಆನಂದಪಡಿಸುತ್ತಾನೆ.[೨]

೬. ಶಲ್ಯನು ಯುದ್ಧದಲ್ಲಿ ಕರ್ಣನ ಸಾರಥಿಯಾಗಿ ಪದೇ ಪದೇ ಅವನ ತೇಜೋವಧೆ ಮಾಡುತ್ತಿದ್ದಂತೆ ವಿದುರನೂ ದುರ್ಯೋಧನನ ಬಳಿಯೇ ಇದ್ದುಕೊಂಡು ಅವನಿಗೆ ಪಾಂಡವರ ಸಾಮರ್ಥ್ಯವನ್ನು ಮತ್ತೆ ಮತ್ತೆ ತಿಳಿಸುತ್ತಾ ಭಯಪಡಿಸುತ್ತಿದ್ದನು. ಉದಾಹರಣೆಗೆ, ವನವಾಸದ ಸಮಯದಲ್ಲಿ ಮೈತ್ರೇಯರ ಶಾಪದಿಂದ ನೈತಿಕವಾಗಿ ಕುಗ್ಗಿದ್ದ ದುರ್ಯೋಧನನನ್ನು , ಪಾಂಡವರ, ಅದರಲ್ಲೂ ಭೀಮನ ಸಾಮರ್ಥ್ಯವನ್ನು ಬಿಂಬಿಸುವ ಕಿರ್ಮೀರವಧೆಯನ್ನು ಹೇಳುವ ಮೂಲಕ (ಮ.ಭಾ. ೩/೧೧) ಮಾನಸಿಕವಾಗಿಯೂ ಮತ್ತಷ್ಟು ಕುಗ್ಗಿಸುವುದರಲ್ಲಿ ವಿದುರನ ಪಾತ್ರವಿದೆ.[೩] ವಿದುರ ಹೀಗೆ ಹೆಜ್ಜೆಹೆಜ್ಜೆಗೂ

---

೧ ವಿದುರಸ್ತ್ವಲ್ಪಶಶ್ಚಕ್ರೇ ಶೋಕಂ ವೇದ ಪರಂ ಹಿ ಸಃ। – ಮ.ಭಾ. ೧/೧೬೨/೨೫
ಊಚುಃ ಸುದುಃಖಿತಧಿಯೋಽಥ ಸುಯೋಧನಾದ್ಯಾಃ
ಕ್ಷತ್ತಾ ಮೃಷೈವ ರುರುದುರ್ಯುಯುಜುಶ್ಚ ಕರ್ಮ ॥ – ಮ.ಭಾ.ತಾ.ನಿ. ೧೯/೪೬

೨ ಇತ್ಯುಕ್ತ ಆಹ ವಿದುರಃ ಸ ಹಿಡಿಂಬವಧ್ಯಾ-
ಪೂರ್ವಾಂ ಪ್ರವೃತ್ತಿಮಖಿಲಾಮಪಿ ಲಕ್ಷ್ಯವೇಧಮ್ ।
ಉದ್ವಾಹಮಪ್ಯಥ ನದೀಜಮುಖಾಶ್ಚ ಸರ್ವೇ
ತುಷ್ಟಾ ಬಭೂವುರಪಿ ವತ್ಸರಮೂಷುರೇವಮ್ ॥ – ಮ.ಭಾ.ತಾ.ನಿ. (೧೯/೧೭೩)

೩ ಶ್ರುತ್ವಾ ತು ಕಿರ್ಮೀರವಧಂ ಸ್ವಪಿತ್ರಾ ಪೃಷ್ಟಕ್ಷತ್ರೋಕ್ತಂ ಸೋಽತ್ರಸದ್ಧಾರ್ತರಾಷ್ಟ್ರಃ।
– ಮ.ಭಾ.ತಾ.ನಿ. (೨೨/೨೩)

ದುಃಶಕ್ತಿಗಳ ದಮನ ಮಾಡುವ ಕರ್ತವ್ಯಪ್ರಜ್ಞೆಯನ್ನು ಮರೆಯುತ್ತಿದ್ದ. ಸಿಕ್ಕ ಅವಕಾಶ-ಗಳನ್ನು ಹೀಗೆ ಸದುಪಯೋಗ ಪಡಿಸಿಕೊಳ್ಳುವುದರಲ್ಲಿಯೇ ಸಾಧನೆಯ ಗುಟ್ಟು ಅಡಗಿದೆ.

೭. ವಿದುರನು ತೀರ್ಥಯಾತ್ರೆ ಮುಗಿಸಿ ಬಂದಾಗ ಅವನು ತಮಗೆ ವಿವಿಧ ಪ್ರಸಂಗಗಳಲ್ಲಿ ಮಾಡಿದ ಉಪಕಾರಗಳನ್ನೆಲ್ಲ ಒಟ್ಟಾಗಿ ಯುಧಿಷ್ಠಿರ ನೆನೆಯುವುದು ಇದಕ್ಕೆಲ್ಲ ಪುರಾವೆ:

ಅಪಿ ಸ್ಮರಥ ನೋ ಯುಷ್ಮತ್ಪಕ್ಷಚ್ಛಾಯಾಸಮೇಧಿತಾನ್ ।
ವಿಪದ್ಗಣಾದ್ವಿಷಾಗ್ನ್ಯಾದೇರ್ಮೋಚಿತಾ ಯತ್ಸಮಾತೃಕಾಃ ॥[೧]

(ನಿನ್ನ ಕೃಪಾಚ್ಛತ್ರದ ಅಡಿಯಲ್ಲಿ ಬೆಳೆದದ್ದರಿಂದಲೇ ವಿಷ, ಅಗ್ನಿ ಮೊದಲಾದಂತಹ ಆಪತ್ತುಗಳ ಹಿಂಡಿನಿಂದ ನಾವೆಲ್ಲ ನಮ್ಮ ತಾಯಿಯ ಸಮೇತ ಸುರಕ್ಷಿತವಾಗಲು ಸಾಧ್ಯವಾಯಿತು.)

೮. ಇದಕ್ಕೆ ತದ್ವಿರುದ್ಧವಾದದ್ದು ಕೌರವರೊಂದಿಗೆ ವಿದುರನ ಒಡನಾಟ. ಅವರ ಯಾವ ಪ್ರಲೋಭನೆಗಳಿಗೂ ವಿದುರನು ಒಳಗಾಗುವುದಿಲ್ಲ. ಅರಗಿನ ಮನೆಯ ಪ್ರಸಂಗಕ್ಕೂ ಮುನ್ನ ದುರ್ಯೋಧನ, ವಿದುರನು ಪಾಂಡವರಿಗೆ ಬೆನ್ನೆಲುಬಾಗಿರುವುದನ್ನೂ ಅವನಿಂದಾಗಿ ಪ್ರಜೆಗಳೆಲ್ಲರೂ ತನಗೆ ವಿರುದ್ಧವಾಗಿರುವುದಲ್ಲದೇ ಪಾಂಡವರಲ್ಲಿ ಹೆಚ್ಚಾಗಿ ಪ್ರೀತಿಯುಳ್ಳವರಾಗಿರುವುದನ್ನೂ ತಿಳಿಸುತ್ತಾನೆ.[೨] ವಿರೋಧಪಕ್ಷದವರ ಮೆಚ್ಚುಗೆಯಂತಹ ಮಾತು ಸುಳ್ಳಾಗಿರಲು ಹೇಗೆ ಸಾಧ್ಯ?

೯. ವಿದುರನು ಪಾಂಡವರೊಂದಿಗೆ ಶಾಸ್ತ್ರಾರ್ಥಚರ್ಚೆಯಲ್ಲೂ ಪಾಲ್ಗೊಳ್ಳುತ್ತಾನೆ. ಭೀಷ್ಮೋಪದೇಶದ ತರುವಾಯ ಧರ್ಮರಾಜನು ತನ್ನ ತಮ್ಮಂದಿರನ್ನೂ ವಿದುರನನ್ನೂ ಧರ್ಮ, ಅರ್ಥ ಹಾಗೂ ಕಾಮವೆಂಬ ಪುರುಷಾರ್ಥತ್ರಯದಲ್ಲಿ ಯಾವುದು ಮಿಗಿಲು? ಎಂದು ಪ್ರಶ್ನಿಸಿದ. ವಿದುರನು ಧರ್ಮವನ್ನೇ ಸಾರವೆಂದು, ಅರ್ಥವನ್ನು ಮಧ್ಯಮವೆಂದು, ಕಾಮವನ್ನು ಅಧಮವೆಂದು ನುಡಿಯುತ್ತಾನೆ.[೩]

---

೧ ಭಾಗವತ (೧/೧೨/೮)

೨ ಕ್ಷತ್ತೈಕ ಏವ ಸತತಂ ಪರಿಪೋಷಕೋಽಲಂ ತೇಷಾಂ ಮಮ ದ್ವಿಡಥ ಮಂತ್ರಬಲಾದಮುಷ್ಯ ।
ಪೌರಾಶ್ಚ ಜಾನಪದಿಕಾಃ ಸತತಂ ದ್ವಿಷಂತಿ ಮಾಂ ತೇಷ್ವತೀವ ದೃಢಸೌಹೃದಚೇತಸಶ್ಚ ॥
– ಮ.ಭಾ.ತಾ.ನಿ. (೧೯/೨೦)

೩ ಧರ್ಮೋ ರಾಜನ್ ಗುಣಃ ಶ್ರೇಷ್ಠೋ ಮಧ್ಯಮೋ ಹ್ಯರ್ಥ ಉಚ್ಯತೇ ।
ಕಾಮೋ ಯವೀಯಾನಿತಿ ಚ ಪ್ರವದಂತಿ ಮನೀಷಿಣಃ ॥ – ಮ.ಭಾ. (೧೨/೧೬೫/೮)

... ಧರ್ಮಸುತೋಽನುಜಾನ್ ।
ಪಪ್ರಚ್ಛ ವಿದುರಂ ಚೈವ ಸಾರಂ ಧರ್ಮಾದಿಷು ತ್ರಿಷು ॥
ಆಹ ಕ್ಷತ್ತಾ ಧರ್ಮಮೇವ ಸಾರಮರ್ಥಂ ಚ ಮಧ್ಯಮಮ್ ।
ನೀಚಂ ಕಾಮಂ ನಿಷ್ಫಲತ್ವಾತ್ ... – ಮ.ಭಾ.ತಾ.ನಿ. (೨೯/೪೬,೪೭)

ಅರ್ಜುನನೂ ಕಾಮವನ್ನು ಅಧಮವೆಂದು ಅರ್ಥವನ್ನು ಎತ್ತಿಹಿಡಿದದ್ದಕ್ಕೆ ನಕುಲ–ಸಹದೇವರು ಸಹಮತ ಸೂಚಿಸುತ್ತಾರೆ. ಭೀಮನು ಕಾಮವೆಂಬ ಪುರುಷಾರ್ಥದ ನಿಜಾರ್ಥವನ್ನು ವಿವರಿಸಿ ಕಾಮವನ್ನೇ ಪುರುಷಾರ್ಥತ್ರಯದಲ್ಲಿ ಅತ್ಯುತ್ತಮವೆಂದು ಪ್ರತಿಪಾದಿಸುತ್ತಾನೆ. ವಿದುರ ಮತ್ತು ಅರ್ಜುನರ ದೃಷ್ಟಿಯಲ್ಲಿ ಕಾಮದ ವ್ಯಾಖ್ಯೆ ಅಸಮಗ್ರವಾಗಿತ್ತು; ಪೂರ್ಣಪ್ರಜ್ಞನಾದ ಭೀಮಸೇನನ ವ್ಯಾಖ್ಯಾನದಲ್ಲಿ ಸಮಗ್ರತೆ ಇತ್ತು.

ಪಾಂಡವರಿಗೂ ವಿದುರನ ಮೇಲೆ ಅಪಾರ ವಿಶ್ವಾಸವಿತ್ತು. ಯುದ್ಧಕ್ಕೂ ಮುನ್ನ, 'ಧೃತರಾಷ್ಟ್ರನು ರಾಜ್ಯವನ್ನು ನೀಡುವುದಾದಲ್ಲಿ ಸಂಜಯ ಅಥವಾ ವಿದುರ ಬಂದು ತಿಳಿಸಲಿ' ಎಂದು ಹೇಳುವುದು ಇದಕ್ಕೆ ಒಂದು ಉದಾಹರಣೆ.[೧]

## ದ್ಯೂತದ ಆಹ್ವಾನಕ್ಕೆ ವಿದುರ

ಪಾಂಡವರಿಗೆ ವಿದುರನೊಂದಿಗಿದ್ದ ಇಂತಹ ನಿಕಟ ಸಂಬಂಧವನ್ನು ಚೆನ್ನಾಗಿ ತಿಳಿದೇ, ಅವರ ಅಪಾರ ಏಳಿಗೆಯನ್ನು ಸಹಿಸಲಾಗದ ದುರ್ಯೋಧನಾದಿಗಳಿಂದ ಪ್ರೇರಿತನಾದ ಧೃತರಾಷ್ಟ್ರನು, ದ್ಯೂತಕ್ಕೆ ಅವರನ್ನು ಆಹ್ವಾನಿಸಲು ವಿದುರನನ್ನೇ ಆರಿಸಿದ್ದು. ಧೃತರಾಷ್ಟ್ರನು ಕಲಿಪ್ರವಿಷ್ಟನಾಗಿ ಹಾಗೂ ಪುತ್ರವ್ಯಾಮೋಹಕ್ಕೊಳಗಾಗಿ ಹಾಗೆ ವಿದುರನಿಗೆ ಆಜ್ಞಾಪಿಸುತ್ತಾನೆ.[೨]

ಅಕೀರ್ತಿಕರವಾದ, ಕುಲನಾಶಕವಾದ ಈ ದ್ಯೂತ ಬೇಡವೆಂದು ಮಹಾಮತಿವಂತನಾದ ವಿದುರ ಧೃತರಾಷ್ಟ್ರನನ್ನು ತಡೆಯುತ್ತಾನೆ.[೩] ವಿದುರ ಎಷ್ಟು ಹೇಳಿದರೂ ಧೃತರಾಷ್ಟ್ರ ಕೇಳುವುದಿಲ್ಲ. 'ನಾವೆಲ್ಲ ಎದುರಿಗೇ ಇರುವಾಗ ಗಲಾಟೆ–ಗದ್ದಲಕ್ಕೆಲ್ಲಿಯ ಅವಕಾಶ? ಪಾಂಡವಕೌರವರು ಕೂಡಿ ಆಡುವುದನ್ನು ನೋಡ ಬಯಕೆಯಷ್ಟೇ ನನ್ನದು. ಆದ್ದರಿಂದ ಬೇಗನೇ ಪಾಂಡವರನ್ನು ಕರೆದು ತಾ' ಎಂದು ಅಂಧನಾದ ಅಣ್ಣನು ಹಠ ಹಿಡಿದಿದ್ದರಿಂದ ಅನಿವಾರ್ಯವಾಗಿ ವಿದುರನು ಪಾಂಡವರಿದ್ದಲ್ಲಿಗೆ ತೆರಳಿ ಯುಧಿಷ್ಠಿರನನ್ನು ದ್ಯೂತಕ್ಕೆ ಆಹ್ವಾನಿಸಲೇಬೇಕಾಯಿತು.[೪]

---

೧ ರಾಜ್ಯಂ ತದಾ ತ್ವಮಾಗಚ್ಛ ವಿದುರೋ ವಾ ನ ಚೇನ್ನ ಚ। – ಮ.ಭಾ.ತಾ.ನಿ. (೨೪/೪೧)

೨ ಏವಂ ಬ್ರುವನ್ನಪಿ ನೃಪ ಆವಿಷ್ಟಃ ಕಲಿನಾ ಸ್ವಯಮ್।
ಪುತ್ರಸ್ನೇಹಾಚ್ಚ ವಿದುರಮಾದಿಶತ್ ಪಾಂಡವಾನ್ ಪ್ರತಿ॥ – ಮ.ಭಾ.ತಾ.ನಿ. (೨೧/೨೯೮)

೩ ನ್ಯವಾರಯತ್ ತಂ ವಿದುರೋ ಮಹಾಮತಿಃ ಪಾಪಂ ಕುಲಸ್ಯಾಪಿ ವಿನಾಶಕೋಽಯಮ್।
ಸಮುದ್ಯಮೋ ನಾತ್ರ ವಿಚಾರ್ಯಮಸ್ತಿ ಕೃಥಾ ನ ತಸ್ಮಾದಯಶಶ್ಚ ತೇ ಸ್ಯಾತ್॥
– ಮ.ಭಾ.ತಾ.ನಿ. (೨೧/೩೦೧)

೪ ತದದ್ಯ ವಿದುರ ಪ್ರಾಪ್ಯ ರಾಜಾನಂ ಮಮ ಶಾಸನಾತ್।
ಕ್ಷಿಪ್ರಮಾನಯ ದುರ್ಧರ್ಷಂ ಕುಂತೀಪುತ್ರಂ ಯುಧಿಷ್ಠಿರಮ್॥ –ಮ.ಭಾ. (೨/೮೨/೨೯)

ಇಂತಹ ಪ್ರಸಂಗಗಳಲ್ಲೆಲ್ಲ, ಹಿರಿಯರು ಅಧರ್ಮವೆಸಗಲು ಹೊರಟಾಗ ತನಗೆ ತಿಳಿದ ಸ್ವಧರ್ಮವನ್ನು ಹೇಳದಿರಲೂಬಾರದು, ಅವರನ್ನು ಉಲ್ಲಂಘಿಸಿ ನೋಯಿಸಲೂಬಾರದೆಂಬ ಮಹತ್ತರ ನಿಲುವು ವಿದುರನದಾಗಿತ್ತು. ಇದು ಮೂಲತಃ ಭೀಮ ನಡೆದ ಹಾದಿ.[೧] ಆದ್ದರಿಂದಲೇ, ತನ್ನ ಅಣ್ಣನ ಆದೇಶದ ಮೇಲೆ ಧರ್ಮರಾಜನನ್ನು ದ್ಯೂತಕ್ಕೆ ಆಹ್ವಾನಿಸಿದರೂ ಅದರ ಅನಾಹುತಗಳನ್ನು ತಿಳಿದಿದ್ದ ವಿದುರ ದ್ಯೂತದಿಂದೊದಗುವ ಅನೇಕ ದೋಷಗಳನ್ನು ವಿವರಿಸುವ ಮೂಲಕ ಬರಬೇಡವೆಂದೂ ಹೇಳಿದ. 'ದ್ಯೂತದಿಂದಾಗುವ ಅನಾಹುತಗಳನ್ನು ಒಂದು ಬದಿಯಿಟ್ಟು, ದೊಡ್ಡಪ್ಪನ ಅಪ್ಪಣೆಯನ್ನು ಇನ್ನೊಂದು ಬದಿಯಿಟ್ಟು, ತೂಕ ಮಾಡಿ ಮುನ್ನಡೆ' ಎಂದ.[೨] ವಿದುರ ಇಲ್ಲಿ ತೋರಿದ ಕರ್ತವ್ಯಪ್ರಜ್ಞೆ ಅಪೂರ್ವವಾದದ್ದು. ಧರ್ಮಾಚರಣೆಯನ್ನು ಪಾಲಿಸುವ ಭರದಲ್ಲಿ ಗುರುಹಿರಿಯರಿಗೆ ನೋವುಂಟುಮಾಡುವ ಅವಿವೇಕವನ್ನೂ ತೋರಬಾರದು; ಹಾಗೂ ಅವರನ್ನು ಗೌರವಿಸುವ ಭರದಲ್ಲಿ ಧರ್ಮಕ್ಕೂ ಅಪಚಾರವೆಸಗಬಾರದು ಎಂಬುದು ಇಲ್ಲಿಯ ಧರ್ಮಸೂಕ್ಷ್ಮ.

**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು** - ಭಗವದ್ಗೀತಾ ೧೮/೬೩ ಎಂದು ಗೀತೆಯಲ್ಲಿ ಕೃಷ್ಣ ಅರ್ಜುನನಿಗೆ ಉಪದೇಶಿಸಿದ ಹಿನ್ನೆಲೆಯಲ್ಲಿ ವಿದುರನ ಈ ಮಾತನ್ನು ತಿಳಿಯಬೇಕು. ಅಲ್ಲಿ ಅರ್ಜುನನು ಸರಿಯಾದ ಹಾದಿಯನ್ನು ಮೆಟ್ಟುತ್ತಾನೆ; ಇಲ್ಲಿ ಮಾತ್ರ ಧರ್ಮರಾಜ ಎಡವುತ್ತಾನೆ; ವಿದುರ ಎಷ್ಟೇ ಹೇಳಿದರೂ, ತಮ್ಮಂದಿರೂ ದ್ರೌಪದಿಯೂ ಎಷ್ಟೇ ತಡೆದರೂ ಕೇಳದೇ ಅವರನ್ನೂ ತಾಯಿಯನ್ನೂ ಕರೆದುಕೊಂಡು ದ್ಯೂತಕ್ಕೆಂದು ಹೊರಟೇ ಹೋದನು.

---

ಅತಃ ಕ್ಷಿಪ್ರಮುಪಾನೇಯಾಃ ಪಾರ್ಥಾ ಇತಿ ಬಲೋದಿತಃ ।
ಯಯೌ ಸ ವಿದುರಃ ಪಾರ್ಥಾನ್ ದ್ವಾರಕಾಂ ಕೇಶವೇ ಗತೇ ॥ - ಮ.ಭಾ.ತಾ.ನಿ. (೨೧/೩೦೩)

ವಿದುರಸ್ತು ತತೋ ಗತ್ವಾ ಧರ್ಮರಾಜಮಥಾಹ್ವಯತ್ । - ಮ.ಭಾ.ತಾ.ನಿ. (೨೧/೩೧೦)

೧ ದೋಷೋ ಭವೇದುಭಯತೋ ಯತ ಏವ ತೇನ
ವಾಚ್ಯಃ ಸ್ವಧರ್ಮ ಉತ ನ ಸ್ಥಿತಿರತ್ರ ಕಾರ್ಯಾ ॥ - ಮ.ಭಾ.ತಾ.ನಿ. (೧೯/೨೮)

೨ ಜಾನಾಮ್ಯಹಂ ದ್ಯೂತಮನರ್ಥಮೂಲಂ ಕೃತಶ್ಚ ಯತ್ನೋಽಸ್ಯ ಮಯಾ ನಿವಾರಣೇ ।
ರಾಜಾ ಚ ಮಾಂ ಪ್ರಾಹಿಣೋತ್ ತ್ವತ್ಸಕಾಶಂ ಶ್ರುತ್ವಾ ವಿದ್ವನ್ ಶ್ರೇಯ ಇಹಾಚರಸ್ವ ॥
-ಮ.ಭಾ. (೨/೮೩/೧೧)

ಜ್ಯೇಷ್ಠಾಜ್ಞಯೈವ ವಿದುರ ಆಹ್ವಯನ್ನಪಿ ಧರ್ಮಜಮ್ ।
ನಾಗಂತವ್ಯಮಿತಿ ಪ್ರಾಹ ದೋಷಾನುಕ್ತ್ವಾಽಕ್ಷಜಾನ್ ಬಹೂನ್ ॥
ಇತೀಹ ದೋಷಸಂಚಯಸ್ತಥಾಽಪಿ ತೇ ಪಿತುರ್ವಚಃ ।
ಸಮೀಕ್ಷ್ಯ ತದ್ದ್ವಯಂ ಸ್ವಯಂ ಕುರುಷ್ವ ಕಾರ್ಯಮಾತ್ಮನಃ ॥
- ಮ.ಭಾ.ತಾ.ನಿ. (೨೧/೩೧೧,೩೧೨)

ಅಂದು ಅರಗಿನ ಮನೆಯ ಪ್ರಸಂಗದಲ್ಲಿ ವಿದುರ ಹೇಳಿದ ಗೂಢಭಾಷೆಯನ್ನೂ ಧರ್ಮರಾಜ ಗ್ರಹಿಸಿದ. ಆದರೆ, ಇಂದು ವಿದುರನು ದ್ಯೂತಕ್ಕೆ ಬರಬೇಡವೆಂದು ಎಷ್ಟು ಬಿಡಿಸಿ ಹೇಳಿದರೂ ಅದರ ಹೃದಯವನ್ನು ಗ್ರಹಿಸಲೇ ಇಲ್ಲ ಎಂಬುದು ವಿಪರ್ಯಾಸ. ದೈವಲೀಲೆ ಎಂದರೆ ಇದೇ. ಅಲ್ಲದೇ, ವಿದುರ ಧರ್ಮರಾಜರಿಬ್ಬರೂ ಯಮನ ಅವತಾರವೇ. ಹಾಗಿದ್ದರೂ ತನ್ನ ಇಂಗಿತವನ್ನು ತಾನೇ ಅರಿಯದ ಸ್ಥಿತಿ ಒದಗಿತ್ತು. ಇವು ಋಜುಗಳಲ್ಲದ ದೇವತೆಗಳ ಇತಿಮಿತಿಯನ್ನು ತೋರಿಸುವ ಮೂಲಕ ದೇವತಾತಾರತಮ್ಯಕ್ಕೂ ಗಮಕವಾಗಿದೆ.

ಧರ್ಮರಾಜನು ತನ್ನ ನಿಲುವಿಗೆ ತಾನು ಹಿಂದೆಯೇ 'ದ್ಯೂತಕ್ಕೆ ಕರೆದಾಗ ತಡೆಯಲ್ಪಟ್ಟರೂ ಹೋಗದಿರಲಾರೆ' ಎಂದು ಪ್ರತಿಜ್ಞೆ ಮಾಡಿದ್ದನ್ನು ಸಮರ್ಥನೆಯನ್ನಾಗಿ ಮುಂದಿಡುತ್ತಾನೆ. ಆದರೆ, ಆತನ ಅಂದಿನ ವರ್ತನೆಗಳಿಗೂ ದ್ಯೂತದಲ್ಲಿನ ಮುಂದಿನ ವರ್ತನೆಗಳಿಗೂ ಹಾಗೂ ಅವನ ಹಿಂದಿನ ಪ್ರತಿಜ್ಞೆಗೂ ಕಲ್ಯಾವೇಶವೇ ಕಾರಣ ಎಂದಿದೆ ನಿರ್ಣಯ (ಉದಾ: ಮ.ಭಾ. ತಾ.ನಿ. ೨೧/೩೧೩-೩೧೫).

ವಿದುರಯುಧಿಷ್ಠಿರರಿಬ್ಬರೂ ಯಮಾವತಾರವೇ ಆದರೂ ಯುಧಿಷ್ಠಿರನನ್ನು ಪ್ರವೇಶಿಸಿದ ಕಲಿಯು ವಿದುರನನ್ನು ಪ್ರವೇಶಿಸಲಿಲ್ಲ; ಇದಕ್ಕೆ ವಿದುರನು ಕಲಿಮದವನ್ನು ಪರಿಹರಿಸುವ ಭೀಮಸೇನನ ಪಕ್ಷವನ್ನು ತಪ್ಪದೇ ಅವಲಂಬಿಸಿದ್ದೇ ಕಾರಣ ಎಂದು ಶ್ರೀವಾದಿರಾಜಸ್ವಾಮಿಗಳು ವಿವರಿಸಿರುವರು.[೧]

## ದ್ಯೂತಕ್ಕೆ ವಿದುರನ ಪ್ರತಿಭಟನೆ

ಸಮಗ್ರ ಮಹಾಭಾರತದಲ್ಲಿ ವಿದುರನ ಪಾತ್ರ ಎದ್ದು ಕಾಣುವುದು ದ್ಯೂತಸಭೆಯಲ್ಲಿ. ವಿದುರನ ಅಂದಿನ ನಡುವಳಿಕೆಯನ್ನು ಮುಂದೆ ಸಂಧಾನಕ್ಕೆಂದು ಬಂದಾಗ ಶ್ರೀಕೃಷ್ಣನೇ ಮೆಚ್ಚಿಕೊಳ್ಳುವನು. ಆ ಸಭೆಯಲ್ಲಿ ಕಲ್ಯಾವೇಶದಿಂದ ಭೀಷ್ಮದ್ರೋಣಾದಿ ಹಿರಿಯರೂ ಸಹ ಪಾಂಡವರಿಗಾದ, ದ್ರೌಪದಿಗಾದ ಅನ್ಯಾಯದ ವಿರುದ್ಧ ಪ್ರತಿಭಟಿಸಲಿಲ್ಲ. ಅದೇ ಅವರು ಎಸಗಿದ ಅನ್ಯಾಯ. ಉಗ್ರ ಪ್ರತಿಜ್ಞೆಗಳ ಮೂಲಕ, ತನ್ನ ಬಲಾಧಿಕ್ಯದ ಸ್ಥಾಪನೆಯ ಮೂಲಕ ಇಡೀ ಕೌರವಸಭೆಯನ್ನು ಗಡಗಡ ನಡುಗಿಸಿದ್ದು ಭೀಮಸೇನನಾದರೆ, ವಿದುರನನ್ನೂ ಸೇರಿ ಕೆಲವರಿಗಷ್ಟೇ ಅಲ್ಲಿ ನಡೆದದ್ದು ಪ್ರತಿಭಟನಾರ್ಹವೆಂದಾದರೂ ತೋರಿದ್ದು - ವೇದವಿದ್ಯೆಗೆ ಅಪವ್ಯಾಖ್ಯಾನಗಳಿಂದಾದ ಅಪಚಾರವನ್ನು ಸರಿಪಡಿಸಲು ಸಮರ್ಥರಾದದ್ದು ಶ್ರೀಮದಾಚಾರ್ಯರಾದರೆ, ಆ ಅಪಚಾರವು ಹಿಂದಿನ ಕೆಲವರಿಗಷ್ಟೇ ಸಮಸ್ಯೆಯೆಂದಾದರೂ ತೋರಿದಂತೆ: **ಸಾತಿಶೋಕಮಪಿ ಕೈಶ್ಚನ ದೃಷ್ಟಾಮ್** - ಮಧ್ವವಿಜಯ ೬/೨೮. ಅಂದು

೧ ವಿದುರಸ್ಯಾಪಿ ಯಮರೂಪತ್ವೇನ ಕಲ್ಯಾವೇಶಸಂಭವೇಽಪಿ 'ಅವಿದ್ಯಾನಿದ್ರಾಂ ವಿದ್ರಾವ್ಯ' ಇತಿ ವಚನಾತ್ (ಶ್ರೀಹರಿವಾಯುಸ್ತುತಿ - ೨೫) ಕಲಿಮದ-ನಿರ್ಭೇದಿ-ಭೀಮಸೇನಪಕ್ಷಪಾತಿತ್ವಾತ್ ನ ಕಲ್ಯಾವೇಶ ಇತಿ ಜ್ಞೇಯಮ್ ॥ ಭಾವಪ್ರಕಾಶಿಕಾ - ಮ.ಭಾ.ತಾ.ನಿ. (೨೧/೩೨೯)

ಕಲಿಪ್ರವೇಶಕ್ಕೆ ಒಳಗಾಗದಿದ್ದದ್ದು ಭೀಮಾದಿ ನಾಲ್ಕು ಪಾಂಡವರು, ಕುಂತೀ, ದ್ರೌಪದೀ ಹಾಗೂ ವಿದುರ ಮಾತ್ರ.[೧]

ವಿದುರನು 'ಯುಧಿಷ್ಠಿರನಿಗೆ ತಾನು ಒಮ್ಮೆ ಉಪದೇಶ ಮಾಡಿಯಾಗಿದೆ ಬಿಡು' ಎಂದು ವಿಶ್ರಮಿಸಲಿಲ್ಲ; ಹಂತಹಂತದಲ್ಲೂ ಅವನನ್ನು ಎಚ್ಚರಿಸುತ್ತಾನೆ; ತಾನು ಪ್ರತಿಭಟಿಸುತ್ತಾನೆ. ಆದರೆ, ಧರ್ಮರಾಜನು ಭೀಮಾದಿಗಳಿಂದ ಮತ್ತು ವಿದುರನಿಂದ ತಡೆಯಲ್ಪಟ್ಟರೂ ದ್ಯೂತವನ್ನೇ ಕಸುಬಾಗಿಸಿಕೊಂಡಿದ್ದ ಶಕುನಿಯಿಂದ ಪರಾಭವಗೊಳ್ಳುತ್ತಾ ನಡೆದ; ಒಂದೊಂದು ಎಂಬುದಾಗಿ ತನ್ನ ಎಲ್ಲವನ್ನೂ ಸೋತ; ಒಬ್ಬೊಬ್ಬರನ್ನೇ ಪಣಕ್ಕಿಟ್ಟು ತಮ್ಮಂದಿರನ್ನೂ ಸೋತ; ದ್ರೌಪದಿಯನ್ನೂ ಸೋತು ಕೊನೆಗೆ ತನ್ನನ್ನೂ ಸೋತ.[೨]

ಅಂದು, ಎಷ್ಟೇ ಸೋತರೂ ಎಚ್ಚೆತ್ತುಕೊಳ್ಳದ ಹಾಗೆ ಧರ್ಮರಾಜನನ್ನು ಮತ್ತೆ ಮತ್ತೆ ಆಟ ಆಡಿಸಿದ್ದು ಕಲ್ಯಾವೇಶ. ದ್ಯೂತಕ್ಕೆ ಇಂತಹ ಆಕರ್ಷಣಶಕ್ತಿ ಇರುವುದನ್ನು ಲೋಕದಲ್ಲಿ ಇಂದೂ ಕಾಣಬಹುದು. ಅದಕ್ಕೆ ದ್ಯೂತವು ಕಲಿಯ ಐದು ಆವಾಸಸ್ಥಾನಗಳಲ್ಲಿ (ಭಾಗವತ ೧/೧೭/೩೭-೩೮) ಒಂದಾಗಿ ಹಾಗೂ ಒಂದನೆಯದಾಗಿ ಇರುವುದೇ ಕಾರಣವೆಂದು ತಿಳಿಯಬಹುದು.

ಧರ್ಮರಾಜನು ತಮ್ಮಂದಿರನ್ನೂ ದ್ರೌಪದಿಯನ್ನೂ ಕೊನೆಗೆ ತನ್ನನ್ನೂ ಪಣಕ್ಕಿಟ್ಟು ಸೋಲುತ್ತಾನೆ. ದುರ್ಯೋಧನನಿಂದ ಪ್ರಚೋದಿತನಾದ ದುಃಶಾಸನನು ತನ್ನ ತಾಯಿ, ತಂದೆ, ಗುರುಹಿರಿಯರೆಲ್ಲರ ಎದುರೇ ದ್ರೌಪದಿಯನ್ನು ಕೇಶರಾಶಿಯಲ್ಲಿ ಹಿಡಿದೆಳೆದು ತರುವ ಹೀನಕೃತ್ಯಕ್ಕಿಳಿಯುತ್ತಾನೆ. ದ್ರೌಪದಿಯು ದ್ಯೂತಸಭೆಯ ಘಟನಾವಳಿಯ ಧಾರ್ಮಿಕತೆಯನ್ನೇ ಪ್ರಶ್ನಿಸಿದಾಗ ಭೀಷ್ಮಾದಿಗಳೆಲ್ಲ ಕಲ್ಯಾವೇಶಕ್ಕೆ ಸೋತು ಮೂಕರಾಗುತ್ತಾರೆ. ದುರ್ಯೋಧನನೆದುರು ನಡೆಯುವುದಿರಲಿ, ನುಡಿಯಲೂ ಶಕ್ತರಾಗುವುದಿಲ್ಲ. ನಡೆನುಡಿಗಳೆರಡನ್ನೂ ಪೂರೈಸಿದ್ದು ಭೀಮನಾದರೆ, ನುಡಿಯುವ ಮಟ್ಟಿಗಾದರೂ ಮುಂದಾದದ್ದು ವಿದುರ. ಅವನು ನಡೆಯಲ್ಲಿ ಅಧರ್ಮವನ್ನು ತಡೆಯಲು ತಾನು ಅಶಕ್ತನಾದಾಗ ಎರಡೂ ಕೈಗಳನ್ನೆತ್ತಿ ದೇವತೆಗಳಿಗೆ ತನ್ನ ಅಸಹಾಯಕತೆಯನ್ನು

---

೧ ಸರ್ವಾಂಶ್ಚ ತತ್ರ ಕಲಿರಾವಿಶದೇವ ಭೀಮ-
ಪೂರ್ವಾನ್ ವಿನೈವ ಚತುರಃ ಸಪೃಥಾಂ ಚ ಕೃಷ್ಣಾಮ್ ।
ಕ್ಷತ್ತಾರಮೇವ ಚ ತತೋ ನ ಹಿ ಭೀಷ್ಮಮುಖ್ಯೈ-
ಸ್ತೇ ವಾರಿತಾಃ ಕುಲವಿನಾಶನಕರ್ಮವೃತ್ತಾಃ ॥ – ಮ.ಭಾ.ತಾ.ನಿ. (೨೧/೩೧೮)

೨ ಭೀಮಾದಿಭಿಃ ಸ ವಿದುರೇಣ ಚ ವಾರ್ಯಮಾಣೋ
ದ್ಯೂತೇ ನಿಧಾಯ ಪಣಮಪ್ಯಖಿಲಂ ಸ್ವವಿತ್ತಮ್ ।
ಗಾಂಧಾರಕೇಣ ವಿದಿತಾಕ್ಷಹೃದಾ ಜಿತೋ ದ್ರಾಕ್
ಪಾಂಡೋಃ ಸುತಃ ..... ॥ – ಮ.ಭಾ.ತಾ.ನಿ. (೨೧/೩೧೯)

ವ್ಯಕ್ತಪಡಿಸುತ್ತಾನೆ. ದ್ರೌಪದಿಯನ್ನೂ ಕುರಿತು 'ನೀನು ನ್ಯಾಯಮಾರ್ಗದಲ್ಲಿ ಸೋಲಲ್ಪಟ್ಟಿಲ್ಲ' ಎಂದು ಹೇಳುತ್ತಾನೆ. ಇಡೀ ದ್ಯೂತಪ್ರಸಂಗದಲ್ಲಿ ಅಧರ್ಮ ತಾಂಡವವಾಡಿದ್ದನ್ನು ಅದೆಷ್ಟು ಬಾರಿ ಸಾರುತ್ತಾನೆ ವಿದುರ! ಈ ಮೊದಲೇ ತಿಳಿಸಿದಂತೆ ವಿದುರ ತೋರಿದ ಕರ್ತವ್ಯಪ್ರಜ್ಞೆಯನ್ನು ಧರ್ಮಪ್ರಜ್ಞೆಯನ್ನು ಭೀಷ್ಮಾದಿ ಹಿರಿಯರೂ ತೋರಿಸದಾದರು ಎಂಬಲ್ಲಿ ವಿದುರನ ಹಿರಿಮೆ ಗೋಚರಿಸುತ್ತದೆ. ಪುತ್ರವ್ಯಾಮೋಹದಿಂದ ಕುರುಡಾಗಿದ್ದ ಧೃತರಾಷ್ಟ್ರನಂತೂ ಮಕ್ಕಳ ಸಮೇತನಾಗಿ ವಿದುರನ ಕೂಗಿಗೆ ಕಿವುಡನೂ ಆಗುತ್ತಾನೆ.[೧]

ಧರ್ಮರಾಜನ ಸಹನೆಯು ಧರ್ಮದ ಎಲ್ಲೆಯನ್ನು ದಾಟಿದಾಗ, ದುರ್ಯೋಧನಾದಿಗಳ ವಿಕೃತವರ್ತನೆಗಳೂ ಅತಿರೇಕಕ್ಕೇರಿದಾಗ, ತನ್ನ ಎದುರಾಳಿಗಳನ್ನೆಲ್ಲ ಹೊಸಕಿಬಿಡುವೆನೆಂಬ ಭೀಮನ ಭೀಮನಾದಕ್ಕೆ ಸಭೆಯೆಲ್ಲ ಭೀತಭೀತವಾಯಿತು. ಆಗ, ಭೀಷ್ಮದ್ರೋಣಾದಿಗಳಿಂದ ಒಡಗೂಡಿ ವಿದುರನು 'ನೀನು ಹೇಳಿದ್ದೆಲ್ಲವೂ ಸತ್ಯ. ಆದರೂ ಕ್ಷಮಿಸು' ಎಂದು ಕೋರಿ ಭೀಮನನ್ನು ಕೈಹಿಡಿದು ಕೂರಿಸಿದನು.[೨]

ಶ್ರೀಹರಿಯ ಸಂಕಲ್ಪವನ್ನು ಬಲ್ಲವನಾದ ಭೀಮಸೇನ, ಅಣ್ಣನಾದ ಧರ್ಮರಾಜ ತಡೆದ ನಿಮಿತ್ತದಿಂದ (ಮ.ಭಾ.ತಾ.ನಿ. ೨೧/೩೪೨-೩೪೩) ಅಂದೇ ಕೌರವರನ್ನೆಲ್ಲ ಕೊಲ್ಲಲಿಲ್ಲ. ಹಾಗೆಯೇ ವಿದುರನು ತನ್ನ ಅಣ್ಣನಾದ ಧೃತರಾಷ್ಟ್ರನ ಮುಖ ನೋಡಿ ಕೌರವವಧೆಯಿಂದ ಭೀಮನನ್ನು ಅಂದು ತಡೆಯಲೆತ್ನಿಸಿದ ಎಂದು ತಿಳಿಯಬಹುದು.

ಭೀಷ್ಮಾದಿಗಳ ವರ್ತನೆಯು ದುರ್ಯೋಧನದುಃಶಾಸನಾದಿಗಳಿಗೆ **'ಮರ್ಕಟಸ್ಯ ಸುರಾಪಾನಂ..'** ಎಂದಂತೆ ಇನ್ನೂ ಹೆಚ್ಚಿನ ಅಪಚಾರವನ್ನು ಮಾಡುವಲ್ಲಿ ಕಾರಣವಾಯಿತು. ಪುಣ್ಯಕ್ಕೆ ತಮ್ಮ ಪ್ರಾಣ ಉಳಿಯಿತೆಂದು ಸುಮ್ಮನಾಗುವ ಬದಲು, ಭೀಮನ ಮತ್ತಷ್ಟು ಭಯಂಕರ ಪ್ರತಿಜ್ಞೆಗಳಿಂದ ಹೆದರಿದರಾದರೂ, ಹಿರಿಯರ ಶ್ರೀರಕ್ಷೆಯ ದುರ್ಲಾಭ ಪಡೆದು ದ್ರೌಪದೀವಸ್ತ್ರಾಪಹರಣಾದಿ ನೀಚಕಾರ್ಯಗಳಿಗೆ ಮುಂದಾಗುತ್ತಾರೆ. ಆಗ ಶ್ರೀಕೃಷ್ಣನು ಅಕ್ಷಯವಸ್ತ್ರ ನೀಡಿದ್ದರಿಂದ ದುಃಶಾಸನನು ಸಭೆಯಲ್ಲಿ ಶ್ರಾಂತನಾಗಿ, ದುರ್ಯೋಧನನ

---

೧ ಉವಾಚ ವಿದುರಸ್ತತ್ರ ನ ಧರ್ಮೋಽಯಮಿತಿ ಸ್ಫುಟಮ್ ॥
ನ ತಸ್ಯ ವಾಚಂ ಜಗ್ರಾಹ ಧೃತರಾಷ್ಟ್ರಃ ಸಹಾತ್ಮಜಃ ।
ಊರ್ಧ್ವಬಾಹುಃ ಸ ಚುಕ್ರೋಶ ದೇವಾನಾಂ ಖ್ಯಾಪಯಂಸ್ತದಾ ॥
ಸ್ವಾಶಕ್ತಿಂ ದ್ರೌಪದೀಂ ಚಾಹ ಜಿತಾ ನೈವಾಸಿ ಧರ್ಮತಃ ।
ಅಧರ್ಮೋ ಹಿ ಮಹಾನೇತಾಂ ಸಭಾಮಾಕ್ರಮ್ಯ ತಿಷ್ಠತಿ ॥ - ಮ.ಭಾ.ತಾ.ನಿ. (೨೧/೩೨೯-೩೩೧)

೨ ತಮುವಾಚ ತದಾ ಭೀಷ್ಮೋ ದ್ರೋಣೋ ವಿದುರ ಏವ ಚ ।
ಕ್ಷಮ್ಯತಾಮಿದಮಿತ್ಯೇವಂ ಸರ್ವಂ ಸಂಭಾವ್ಯತೇ ತ್ವಯಿ ॥ - ಮ.ಭಾ. ೨/೭೨/೧೪
ಭೀಷ್ಮೋ ದ್ರೋಣೋ ವಿದುರಾದ್ಯಾಃ ಕ್ಷಮಸ್ವ
ಸರ್ವಂ ತ್ವಯೋಕ್ತಂ ಸತ್ಯಮಿತ್ಯೇವ ಹಸ್ತೌ ।
ಗೃಹೀತ್ವೈನಂ ಸ್ಥಾಪಯಾಮಾಸುಃ ..... ॥ - ಮ.ಭಾ.ತಾ.ನಿ. ೨೧/೩೪೧

ಪ್ರಚೋದನೆಯಂತೆ ದ್ರೌಪದಿಯನ್ನು ಮನೆಯ ಕಡೆಗೆ ಎಳೆಯಲಾರಂಭಿಸಿದಾಗ, ಭೀಮಸೇನನು ಕೌರವರನ್ನೆಲ್ಲ ಕೊಂದೇಬಿಡುವೆನೆಂದು ನುಡಿಯುತ್ತ ಶತ್ರುಗಳಿಗೆ ಭೀಕರವಾದ ನೋಟವನ್ನು ಬೀರಿ ಪರಿಘವೆಂಬ ಆಯುಧದ ಕಡೆ ನೋಡುತ್ತಾನೆ.

ಆಗ ಘೋರವಾದ ಅನೇಕ ಅಪಶಕುನಗಳು ಸಂಭವಿಸುತ್ತವೆ. ಭೀಮನ ವರ್ತನೆಯನ್ನೂ ಆ ಅಪಶಕುನಗಳನ್ನೂ ಗಮನಿಸಿದ ಧೃತರಾಷ್ಟ್ರ ಅವುಗಳ ಫಲವೇನೆಂಬುದಾಗಿ ವಿದುರನನ್ನು ಕೇಳುತ್ತಾನೆ. ಆಗ ವಿದುರನು ಭೀಮನ ಅಪ್ರತಿಮ ಪರಾಕ್ರಮವನ್ನೂ ಕೌರವರ ಅಕ್ರಮವನ್ನೂ ಧೃತರಾಷ್ಟ್ರನಿಗೆ ತಿಳಿಹೇಳಿ ಆ ಭೀಮನ ಬಲದಿಂದ ಕೌರವರೆಲ್ಲ ನಾಶವಾಗುವುದು ಸನ್ನಿಹಿತವಾಗಿದೆಯೆಂದು ತಿಳಿಸುತ್ತಾನೆ.[೧] ಶಕುನಶಾಸ್ತ್ರದಲ್ಲಿಯೂ ವಿದುರನಿಗಿದ್ದ ಪಾಂಡಿತ್ಯ ಇದರಿಂದ ವ್ಯಕ್ತವಾಗುತ್ತದೆ.

ದ್ಯೂತದ ಬಗ್ಗೆಯೂ ಅನೇಕ ವಿಚಾರಗಳನ್ನು ಧೃತರಾಷ್ಟ್ರನಿಗೆ ಸ್ಪಷ್ಟಪಡಿಸುತ್ತಾನೆ. ಧರ್ಮರಾಜನು ಒಂದೊಂದನ್ನೇ ಪಣಕ್ಕಿಟ್ಟು ಸೋಲುತ್ತಿದ್ದಾಗ ಧೃತರಾಷ್ಟ್ರನು 'ಇನ್ನೇನನ್ನು ಗೆದ್ದದ್ದು, ಮತ್ತೇನನ್ನು ಗೆದ್ದದ್ದು' ಎಂದು ಚಿಕ್ಕ ಮಗುವಿನಂತಾಡುತ್ತಿದ್ದನು. ಆದರೆ, 'ವೇಶ್ಯೆಯರಿಗೆ ಅಥವಾ ದ್ಯೂತದಲ್ಲಿ ಅಥವಾ ಮದಾಂಧನಿಂದ ಕೊಟ್ಟದ್ದನ್ನು ವಿದ್ವಾಂಸರು ಕೊಟ್ಟಿಲ್ಲವೆಂದೇ ಕರೆಯುವುದರಿಂದ ಪಾಂಡವರ ದ್ಯೂತದಲ್ಲಿನ ಸೋಲು ಧರ್ಮಸಮ್ಮತವಲ್ಲದ್ದು; ಆ ಸೋಲು ಸೋಲೇ ಅಲ್ಲ' ಎಂಬುದನ್ನೂ ತಿಳಿಸುವನು. 'ನಿನ್ನ ಪುತ್ರರ ದೌರ್ಜನ್ಯವನ್ನು ಜಗತ್ತಿಗೆ ಸಾರಲೆಂದೇ, ದ್ಯೂತದಲ್ಲಿ ಸೋತದ್ದನ್ನು ಮರುಪಡೆವ ಸಾಮರ್ಥ್ಯ ಹಾಗೂ ಧರ್ಮಸಮ್ಮತಿ ಎರಡೂ ಇದ್ದರೂ ಪಾಂಡವರು ಹಾಗೆ ಮಾಡಿಲ್ಲವಷ್ಟೇ' ಎಂಬುದಾಗಿಯೂ ತಿಳಿಹೇಳುವನು ವಿದುರ.[೨]

ಹೀಗೆ ವಿದುರನು ಬಿಸಿ ಮುಟ್ಟಿಸಲು, ಧೃತರಾಷ್ಟ್ರನು ರಕ್ಷಣಾತ್ಮಕವಾದ ಮಾತುಗಳನ್ನಾಡಲಾರಂಭಿಸುತ್ತಾನೆ. ಆ ಅಪಶಕುನಗಳಿಗೆ ಉಪಶಾಂತಿಯನ್ನು ತಿಳಿಯಲು ಬಯಸುತ್ತಾನೆ. ಆಗ 'ಈ ಕೂಡಲೇ ದ್ರೌಪದಿಯನ್ನು ಬಿಡುಗಡೆ ಮಾಡಿ ಅವಳನ್ನು ವರಗಳಿಂದ ನೀನು ಸಂತೋಷಪಡಿಸಲಿಲ್ಲವೆಂದರೆ, ಭೀಮನಿಂದ ನಿನ್ನ ಮಕ್ಕಳ ಸಂಹಾರವಾಯಿತೆಂದೇ ತಿಳಿ. ಅವರೆಲ್ಲ ಸ್ವತಃ ಬಿಡಿಸಿಕೊಳ್ಳಲು ಸಮರ್ಥರು; ತಪೋಬಲದಿಂದಲೇ ವೈರಿಗಳನ್ನು

---

೧ ಆಹ ತಂ ವಿದುರೋ ಜ್ಯೇಷ್ಠಂ ಕ್ಷಣೇಽಸ್ಮಿಂಸ್ತವ ಪುತ್ರಕಾಃ।
ಸಾನುಬಂಧಾ ನಶಿಷ್ಯಂತಿ ವೃಕೋದರಬಲಾಹತಾಃ॥ – ಮ.ಭಾ.ತಾ.ನಿ. (೨೧/೩೬೮)

೨ ಕ್ರೀಡಸೇಽರ್ಭಕವತ್ ತ್ವಂ ಹಿ ಕಿಂ ಜಿತಂ ಕಿಂ ಜಿತಂ ತ್ವಿತಿ।
ಅಧರ್ಮೇಣ ಜಿತಾನತ್ರ ಜಿತಾನ್ ಪಶ್ಯಸಿ ಪಾಂಡವಾನ್ ॥
ಸ್ತ್ರೀಷು ದ್ಯೂತೇಷು ವಾ ದತ್ತಂ ಮದಾಂಧೇನ ನರೇಣ ವಾ।
ನ ದತ್ತಮಾಹುರ್ವಿದ್ವಾಂಸಸ್ತಸ್ಯ ಬಂಧುಭಿರೇವ ಚ॥
ಆಹಾರ್ಯಂ ಪುನರಾಹುಶ್ಚ ತಥಾಽಪಿ ನ ತು ಪಾಂಡವೈಃ।
ತ್ವತ್ಕೃತಂ ತವ ಪುತ್ರಾಣಾಂ ಖ್ಯಾಪಯದ್ಭಿರಶಿಷ್ಟತಾಮ್ ॥ – ಮ.ಭಾ.ತಾ.ನಿ. (೨೧/೩೭೯-೩೮೧)

ಸುಡಬಲ್ಲಂತಹವರು. ಹಾಗಿದ್ದರೂ ತಮ್ಮ ತಪಸ್ಸು ವ್ಯಯವಾಗದಿರಲಿ ಎಂದು ಸುಮ್ಮನಿದ್ದಾರೆಂಬ ಒಂದೇ ಕಾರಣಕ್ಕೆ ನಿನ್ನ ಮಕ್ಕಳಿನ್ನೂ ಜೀವಂತರಾಗಿರುವರು. ಇನ್ನೂ ನೀನು ದ್ರೌಪದಿಯನ್ನು ಬಿಡಿಸಲು ಮುಂದಾಗದಿದ್ದಲ್ಲಿ ಭೀಮಸೇನನು ತನ್ನ ಬಾಹುಬಲದಿಂದಲೇ ನಿನ್ನ ಮಕ್ಕಳನ್ನು ಇಂದೇ ಕೊಂದು ಹಾಕುವನು.' ಎಂದು ವಿದುರನು ಎಚ್ಚರಿಸುವನು.[೧]

ಪಿತಾಮಹರಾಗಿ ಭೀಷ್ಮರು, ಕುಲಗುರುಗಳಾಗಿ ದ್ರೋಣರು, ಕುಲವೃದ್ಧರಾಗಿ ಬಾಹ್ಲೀಕಾದಿಗಳು, ಗುರುಪುತ್ರನಾಗಿ ಅಶ್ವತ್ಥಾಮರು, ತಂದೆತಾಯಿಯರಾಗಿ ಧೃತರಾಷ್ಟ್ರಗಾಂಧಾರಿಯರು ದ್ಯೂತವನ್ನು ಅಧರ್ಮವೆಂದು ನುಡಿಯಲೂ ಹಿಂಜರಿದಿದ್ದ ಸಮಯದಲ್ಲಿ ಪ್ರತಿಹಂತದಲ್ಲೂ ಹೀಗೆ ಕಟು ಸತ್ಯವನ್ನು ಸಾರುತ್ತಾ ಬಂದ ವಿದುರನ ಧರ್ಮನಿಷ್ಠೆ ಲೋಕೋತ್ತರವಾದುದು. ವಿಪಕ್ಷದಲ್ಲಿದ್ದೂ ಧರ್ಮದ ಬಗ್ಗೆ ತೋರುವ ವಿದುರನ ವಿವೇಕ ಅವನನ್ನು ತುಂಬ ಎತ್ತರದ ಸ್ಥಾನದಲ್ಲಿ ನಿಲ್ಲಿಸುವುದು.

ಧೃತರಾಷ್ಟ್ರನಿಗೆ ಹೀಗೆ ಬೋಧಿಸುವ ಪ್ರಸಂಗ ಒದಗುವುದೆಂಬ ದೂರದೃಷ್ಟಿಯಿಂದಲೇ ವಿದುರನು, ಅವನು ದ್ಯೂತಸಭೆಗೆ ಆಗಮಿಸಿದಾಗಿನಿಂದಲೂ ಅವನ ಬಳಿಯಿದ್ದ.[೨] ವಿದುರನು ಇಷ್ಟೆಲ್ಲ ಹೇಳಿದ ಮೇಲೆ ಧೃತರಾಷ್ಟ್ರನು ದುಃಶಾಸನನನ್ನು ದಬಾಯಿಸಿ, ದ್ರೌಪದಿಯನ್ನು ಬಿಡಿಸಿ, ಪಾಂಡವರದೇ ಆಗಿದ್ದ, ದ್ಯೂತದಲ್ಲಿ ಮೋಸದಿಂದ ಕೌರವರು ಪಡೆದುಕೊಂಡೆವು ಎಂದುಕೊಂಡಿದ್ದ, ಸ್ವತ್ತನ್ನು ಪಾಂಡವರಿಗೇ ಮರು ನೀಡಿದ – ಕೆರೆಯ ನೀರನು ಕೆರೆಗೆ ಚೆಲ್ಲಿದಂತೆ. ಧೃತರಾಷ್ಟ್ರನದು ಅನುಗ್ರಹವಾಗದೇ ಕೇವಲ ಅನಿವಾರ್ಯವಾದ ಪ್ರತಿಕ್ರಿಯೆಯಾಗಿತ್ತು. ಅದನ್ನು ಹಾಗೆಂದು ಹೇಳದೇ ಪಾಂಡವರು ಸಮ್ಮತಿಸಿದ್ದು ಅವರು ಗುರುಹಿರಿಯರ ಬಗ್ಗೆ ತೋರಿದ ವಿನಯವಷ್ಟೇ – **ವಿನಯೋ ಹಿ ಭೂಷಯತಿ ಸರ್ವರಸಮ್.**[೩]

ತನ್ನ ಆ ವರ್ತನೆಯಿಂದ ಧೃತರಾಷ್ಟ್ರನು ಮಕ್ಕಳ ಕೆಂಗಣ್ಣಿಗೆ ಗುರಿಯಾದ. ಭೀಮನಿಂದ ಭಯಭೀತರಾದ ಅವರೆಲ್ಲ ಮತ್ತೊಮ್ಮೆ ಪಾಂಡವರನ್ನು ದ್ಯೂತಕ್ಕಾಗಿ ಕರೆಸೆಂದು ಒತ್ತಾಯಿಸಲು

---

೧ ..... ಸ ಪ್ರಾಹ ದ್ರುತಂ ಕೃಷ್ಣಾ ವಿಮುಚ್ಯತಾಮ್ ॥
ತೋಷಯಸ್ವ ಪರೈಶ್ಚೈನಾಮನ್ಯಥಾ ತೇ ಸುತಾನ್ ಮೃತಾನ್ ।
ವಿದ್ಧಿ ಭೀಮೇನ ನಿಷ್ಪಿಷ್ಟಾನ್ ನಾತ್ರ ತೇ ಸಂಶಯೋ ಭವೇತ್ ॥
ಕೃಷ್ಣಾ ಚ ಪಾಂಡವಾಶ್ಚೈವ ತಪೋವೃದ್ಧಿಮಭೀಪ್ಸವಃ ।
ತಪಸಾ ನೈವ ಧಕ್ಷ್ಯಂತಿ ತೇನ ಜೀವಂತಿ ತೇ ಸುತಾಃ ॥
ತಥಾऽಪಿ ಯದಿ ಕೃಷ್ಣಾಂ ತ್ವಂ ನ ಮೋಚಯಸಿ ತೇ ಸುತಾನ್ ।
ಹನಿಷ್ಯತಿ ನ ಸಂದೇಹೋ ಬಲೇನೈವ ವೃಕೋದರಃ ॥ – ಮ.ಭಾ.ತಾ.ನಿ. (೨೧/೩.೭೨-೩.೭೫)

೨ ವೈಚಿತ್ರವೀರ್ಯನೃಪತಿರ್ವಿದುರಾನ್ವಿತಃ .... ಪ್ರಾಪ್ತಾಃ ಸಭಾತಲಂ ...
– ಮ.ಭಾ.ತಾ.ನಿ. (೨೧/೩೧೭)

೩ ಸುಮಧ್ವವಿಜಯ (೧೧/೫೪)

ಧೃತರಾಷ್ಟ್ರನು ಮತ್ತೊಮ್ಮೆ ಪಾಂಡವರನ್ನು ಆಹ್ವಾನಿಸಿದ ! ಧರ್ಮರಾಜನೂ ಮತ್ತೊಮ್ಮೆ ಒಪ್ಪಿಕೊಂಡ !!

ಆಗ ನಡೆದ ಅನುದ್ಯೂತದಲ್ಲಿ ಕೌರವರ ವಂಚನೆಯಿಂದ ಪಾಂಡವರು ವನವಾಸಕ್ಕೆ ಹೊರಟಾಗ ಕುಂತಿಯೂ ಕಣ್ಣೀರಿಡುತ್ತಾ ಹಿಂಬಾಲಿಸುತ್ತಾಳೆ. ಆಗ ಅವಳನ್ನು ತಡೆದು ಆಶ್ರಯ ನೀಡುವ ಜವಾಬ್ದಾರಿಯನ್ನಾದರೂ ಹಿರಿಯನೆನ್ನಿಸಿದ ಧೃತರಾಷ್ಟ್ರ ವಹಿಸಬೇಕಿತ್ತು. ಆದರೆ ಆ ಕೆಲಸಕ್ಕೆ ವಿದುರ ಮುಂದಾಗುತ್ತಾನೆ.[೧] ಕುಂತಿಯ ಜೊತೆ ಆಕೆಯ ಕೆಲವು ಸೊಸೆಯರೂ ವಿದುರನ ಮನೆಯಲ್ಲೇ ಉಳಿವರು.

ಪಾಂಡವರು ವನಕ್ಕೆ ತೆರಳುವಾಗ ಒಬ್ಬೊಬ್ಬರು ಒಂದೊಂದು ವಿಚಿತ್ರ ಶೈಲಿಯನ್ನು ಅನುಸರಿಸಿ ನಡೆಯುತ್ತಾರೆ. ಇದರ ಬಗ್ಗೆ ಧೃತರಾಷ್ಟ್ರನಿಗೆ ಜಿಜ್ಞಾಸೆ ಮೂಡಿ ಆ ಬಗ್ಗೆ ತಿಳಿಸಲು ವಿದುರನನ್ನು ಕೇಳಿಕೊಳ್ಳುವನು; ಅವನಿಗೆ ವಿದುರನು ಎಂತಹ ಸಂಕೇತವನ್ನೂ ಸಹ ಅರ್ಥಮಾಡಿಕೊಳ್ಳಲು ಸಮರ್ಥ ಎಂಬ ಅರಿವಿದ್ದದ್ದೇ ಕಾರಣ. ಅದಕ್ಕೆ ಅನುಗುಣವಾಗಿ ವಿದುರನು ಪ್ರತಿಯೊಬ್ಬರ ವರ್ತನೆಯ ಹಿಂದಿದ್ದ ಅಭಿಪ್ರಾಯಗಳನ್ನು ಸೂಕ್ತವಾಗಿ ವಿಶ್ಲೇಷಿಸುವನು (ಮ.ಭಾ. ೨/೧೦೨/೧-೨೪, ಮ.ಭಾ.ತಾ.ನಿ. ೨೧/೪೦೦-೪೦೫). ಅವು ಹೀಗಿವೆ:

ಧರ್ಮರಾಜನು ಅಧೋಮುಖನಾಗಿ ನಡೆದದ್ದನ್ನು 'ತನ್ನ ಕೋಪದೃಷ್ಟಿಗೆ ಕೌರವರು ಸುಟ್ಟುಹೋದಾರು' ಎಂಬ ಅಭಿಪ್ರಾಯದಿಂದ ಎಂದೂ[೨], ಭೀಮಸೇನನು ಎರಡೂ ಬಾಹುಗಳನ್ನೆತ್ತಿ ನಡೆದದ್ದನ್ನು 'ಇವೆರಡರಿಂದಲೇ ಎಲ್ಲ ಶತ್ರುಗಳನ್ನೂ ಕೊಲ್ಲಬಲ್ಲೆ' ಎಂಬ ಅಭಿಪ್ರಾಯದಿಂದ ಎಂದೂ, ದ್ರೌಪದಿಯು ತಲೆಗೂದಲನ್ನು ಬಿಗಿಯದೇ ನಡೆದದ್ದನ್ನು 'ದುರ್ಯೋಧನಾದಿಗಳ ಹೆಂಡಂದಿರು ವಿಧವೆಯರಾಗಿ ಸರ್ವದಾ ಮುಕ್ತಕೇಶರಾಗುತ್ತಾರೆ' ಎಂಬ ಅಭಿಪ್ರಾಯದಿಂದ ಎಂದೂ, ಅರ್ಜುನನು ಮಣ್ಣಿನ ಕಣಗಳನ್ನು ಸುರಿಸುತ್ತಾ

---

೧ ಆರ್ಯಾ ಪೃಥಾ ರಾಜಪುತ್ರೀ ನಾರಣ್ಯಂ ಗಂತುಮರ್ಹತಿ।
ಸುಕುಮಾರೀ ಚ ವೃದ್ಧಾ ಚ ನಿತ್ಯಂ ಚೈವ ಸುಖೋಚಿತಾ ॥
ಇಹ ವತ್ಸ್ಯತಿ ಕಲ್ಯಾಣೀ ಸತ್ಕೃತಾ ಮಮ ವೇಶ್ಮನಿ। – ಮ.ಭಾ. (೨/೧೦೦/೬,೭)
ಪ್ರಯತಾನನು ತಾನ್ ಕುಂತೀ ಪ್ರಯಯೌ ಪುತ್ರಗೃದ್ಧಿನೀ।
ರೋರುದ್ಯಮಾನಾಂ ವಿದುರಃ ಸ್ಥಾಪಯಾಮಾಸ ತಾಂ ಗೃಹೇ॥ – ಮ.ಭಾ.ತಾ.ನಿ. (೨೧/೩೯೯)

೨ ಧರ್ಮರಾಜನು ತನ್ನ ಕೋಪದೊಂದಿಗೆ ತಪಸ್ಸನ್ನೂ ಬೆರೆಸಿಕೊಳ್ಳುವುದರಿಂದ ಅವನ ನೋಟದಿಂದ ಅಪಾಯವಿದ್ದಂತೆ ಅವೆರಡನ್ನೂ ವಿಂಗಡಿಸಿ ನೋಡುವ ಸಾಮರ್ಥ್ಯವಿದ್ದದ್ದಕ್ಕಾಗಿ ಭೀಮನ ನೋಟದಿಂದ ಅಪಾಯವಿರಲಿಲ್ಲ. ಧರ್ಮರಾಜ ಇಲ್ಲಿ ತಪ್ಪು ಮಾಡಿದ ಕೌರವರ ಮೇಲೆ ತೋರಿದ ನಿಗ್ರಹವನ್ನು ಯುದ್ಧದನಂತರ ತಪ್ಪು ಮಾಡದ ಆತನ ಮೇಲೆ ಗಾಂಧಾರಿಯು ತೋರದವಳಾಗಿ (ಮ.ಭಾ.ತಾ.ನಿ. ೨೮/೨೦೩) ಆತನ ಉಗುರುಗಳನ್ನು ಸುಟ್ಟದ್ದೊಂದು ವಿಪರ್ಯಾಸ.

ನಡೆದದ್ದನ್ನು 'ಹೀಗೇ ಶತ್ರುಗಳ ಮೇಲೆ ಬಾಣಗಳನ್ನು ಸುರಿಸುವೆ' ಎಂಬ ಅಭಿಪ್ರಾಯದಿಂದ ಎಂದೂ, ನಕುಲ ಮತ್ತು ಸಹದೇವರು ಮುಖ ತಗ್ಗಿಸಿ ನಡೆದದ್ದನ್ನು 'ನಮ್ಮ ಮುಖವನ್ನು ಶತ್ರುಗಳು ಈ ಅವಸ್ಥೆಯಲ್ಲಿ ನೋಡದಿರಲಿ' ಎಂಬ ಅಭಿಪ್ರಾಯದಿಂದ ಎಂದೂ, ಪಾಂಡವರ ಪುರೋಹಿತರಾದ ಧೌಮ್ಯರು ಪ್ರೇತಸಂಸ್ಕಾರ ಸೂಕ್ತಗಳನ್ನು ಪಠಿಸುತ್ತ ನಡೆದದ್ದನ್ನು 'ದುರ್ಯೋಧನಾದಿಗಳು ಸತ್ತಾಗ ನನ್ನಿಂದ ಅವರ ಅಂತ್ಯಸಂಸ್ಕಾರ ಆಗಬೇಕಿದೆ' ಎಂಬ ಅಭಿಪ್ರಾಯದಿಂದ ಎಂದೂ ವ್ಯಾಖ್ಯಾನಿಸುತ್ತಾನೆ.

ಪಾಂಡವರಂತಹ ಮಹಾನುಭಾವರ ಪ್ರತಿಕಾರ್ಯವೂ ಸಹ ತನ್ನದೇ ಅರ್ಥ ವಿಶೇಷವನ್ನು ಹೊಂದಿರುತ್ತದೆ ಎಂಬುದು ಇದರ ಒಂದು ಮುಖವಾದರೆ, ವಿದುರನಂತಹ ಪ್ರಾಜ್ಞರು ಅಂತಹ ಅರ್ಥ ವಿಶೇಷಗಳನ್ನು ಅರಿಯಬಲ್ಲ ವಿವೇಕಿಗಳಾಗಿರುತ್ತಾರೆ ಎಂಬುದು ಇನ್ನೊಂದು ಮುಖ. ಧೃತರಾಷ್ಟ್ರನಿಗೆ ಮಾತ್ರ ವಿದುರನು ಎಷ್ಟೇ ಎಚ್ಚರಿಕೆ ನೀಡಿದರೂ ಅರ್ಥವಾಗಲಿಲ್ಲ.

## ವಿದುರನ ಭಾಗ್ಯ

ಧೃತರಾಷ್ಟ್ರನು ಪ್ರಜ್ಞೆ ಕಳೆದುಕೊಂಡು ಅಧರ್ಮದಿಂದ ತನ್ನ ಮಕ್ಕಳನ್ನು ಪೋಷಿಸುತ್ತಾ ಪಾಂಡವರಿಗೆ ಅರಗಿನ ಮನೆ, ದ್ಯೂತ, ವನವಾಸ ಮೊದಲಾದ ವಿಚಾರಗಳಲ್ಲಿ ಅಪಚಾರಗಳ ಸುರಿಮಳೆಯನ್ನೇ ಮಾಡಿದ್ದ. ವನವಾಸ ಅಜ್ಞಾತವಾಸಗಳನ್ನು ಕರಾರಿನಂತೆ ಮುಗಿಸಿ ಬಂದ ಮೇಲೂ ಪಾಂಡವರಿಗೆ ಅವರ ಪಾಲನ್ನು ಕೊಡಿಸಲಿಲ್ಲ. ಆಗೊಮ್ಮೆ ನಿದ್ರೆ ಬಾರದೇ ಪರಿತಪಿಸುತ್ತಿದ್ದ ಧೃತರಾಷ್ಟ್ರನಿಗೆ ವಿದುರನು ರಾತ್ರಿಯಿಡೀ ಬಗೆಬಗೆಯಾಗಿ ನೀತಿಯನ್ನು ಉಪದೇಶಿಸಿದ. ಆ ಭಾಗ ವಿದುರನೀತಿ[೧] ಎಂದೇ ಪ್ರಸಿದ್ಧವಾಗಿದೆ. ಆದರೆ ಅದನ್ನು ಶ್ರವಣ ಮಾಡಿದ ಮೇಲೂ ಅಧರ್ಮದ ಹಾದಿಯಿಂದ ನಿವೃತ್ತರಾಗುವಂತೆ ಧೃತರಾಷ್ಟ್ರ ತನ್ನ ಮಕ್ಕಳ ಮೇಲೆ ಒತ್ತಡ ಹೇರಲಿಲ್ಲ ಎಂಬುದು ಅವನ ಪುತ್ರವ್ಯಾಮೋಹದ ಪರಿಣಾಮವಷ್ಟೆ ಆದರೆ, ವಿದುರನೀತಿಯ ಭಾಗ ಮಹಾಭಾರತದ ಅತ್ಯಮೂಲ್ಯವಾದ ಪಂಚರತ್ನಗಳಲ್ಲಿ ಒಂದು ಎಂದು ಪರಿಗಣಿತವಾಗಿದ್ದು ಅದು ಇಂದಿಗೂ ಸಹ ವಿವೇಕಿಗಳಿಗೆ ಪಥ್ಯವೆನ್ನಿಸುವ ಮಹತ್ತ್ವವನ್ನು ಪಡೆದುಕೊಂಡಿದೆ.

ಬಳಿಕ ಪಾಂಡವರ ರಾಯಭಾರಿಯಾಗಿ ಹಸ್ತಿನಾಪುರಕ್ಕೆ ಆಗಮಿಸಿದ ಶ್ರೀಕೃಷ್ಣನನ್ನು ಜನಗಳು ಕಣ್ತುಂಬಿಕೊಂಡರು, ಭೀಷ್ಮಾದಿಗಳೊಂದಿಗೆ ಧೃತರಾಷ್ಟ್ರ ಪೂಜಿಸಿದ. ಆದರೆ, ತನಗೆ ಪಂಚಪ್ರಾಣರಾದ ಪಾಂಡವರ ದ್ವೇಷಿ ಎಂಬ ಕಾರಣಕ್ಕೆ ದುರ್ಯೋಧನನ ಆತಿಥ್ಯವನ್ನು ಶ್ರೀಕೃಷ್ಣ ಸ್ವೀಕರಿಸಲಿಲ್ಲ(ಮ.ಭಾ. ೫/೯೧/೨೭). ಭೀಷ್ಮಾದಿಗಳು ಎಷ್ಟೇ ಬೇಡಿಕೊಂಡರೂ, ದ್ಯೂತಸಭೆಯಲ್ಲಿ ದ್ರೌಪದಿಯ ಮೇಲೆ ಉಪೇಕ್ಷೆ ತೋರಿದ್ದಕ್ಕೆ ಅವರಾರ ಮನೆಗೂ

೧ ವಿದುರನೀತಿಯ ಸಂಗ್ರಹವನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ. ನಿದ್ರಾಹೀನತೆಯ ಬಗ್ಗೆ ವಿದುರನ ವಿಶ್ಲೇಷಣೆಯನ್ನೂ ಅಲ್ಲಿಯೇ ನೋಡಬಹುದು.

ಹೋಗಲಿಲ್ಲ(ಮ.ಭಾ. ೫/೯೧/೩೬-೫೯). ದ್ಯೂತಸಭೆಯಲ್ಲಿ ಎದ್ದುನಿಂತು ಪ್ರತಿಭಟಿಸಿದ ವಿದುರನ ಮನೆಗೆ ಹೋಗುತ್ತಾನೆ. ವಿದುರನು ಭಕ್ತಿ ಸಂಭ್ರಮಗಳಿಂದ ಶ್ರೀಕೃಷ್ಣನನ್ನು ಅರ್ಚಿಸುತ್ತಾನೆ.[೧] ಶ್ರೀಕೃಷ್ಣನು ವಿದುರ ನೀಡಿದ ಭೋಜನವನ್ನು ವಿಪ್ರರಿಗೆ ಮೊದಲು ಕೊಟ್ಟು ತಾನೂ ಉಣ್ಣುವನು.[೨] ಅಂದು ಅವನ ಮನೆಯಲ್ಲೇ ಉಳಿದುಕೊಳ್ಳುವನು. ಆ ಮೂಲಕ ವಿದುರ ನೀಡಿದ ಎಲ್ಲವನ್ನೂ ಸ್ವೀಕರಿಸಿ ಅವನ ಮೇಲೆ ತನ್ನ ಪ್ರೀತಿಯನ್ನು ಸಾರಿದ ಶ್ರೀಕೃಷ್ಣ ದುರ್ಯೋಧನ ನೀಡಿದ ಯಾವುದನ್ನೂ ಸ್ವೀಕರಿಸದೆ ಅವನ ಮೇಲೆ ತನ್ನ ಅಪ್ರೀತಿಯನ್ನೂ ತೋರಿದ.

ಅವು ವಿದುರನ ಜೀವನದ ಸುವರ್ಣಕ್ಷಣಗಳು. ದ್ಯೂತಪ್ರಸಂಗದಲ್ಲಿ ಆತ ಮಾಡಿದ ಸಾಧನೆಗೆ ಇದು ಫಲಶ್ರುತಿ.[೩] ಈ ಪ್ರಸಂಗವು ಧರ್ಮದ ಮೇಲಾಗುವ ಆಕ್ರಮಣಗಳಿಗೆ ಸ್ಪಂದಿಸುವವರಿಗೆ ಭಗವಂತ ಒಲಿಯುವನು ಎಂಬುದರ ಸಂಕೇತ. ಸಕಲವಿದ್ಯೆಗಳ ಸಂಕೇತವಾದ ದ್ರೌಪದಿಗೆ ಸಭೆಯಲ್ಲಾದ ಅವಮಾನವನ್ನು ವಿದುರ ತನ್ನ ಶಕ್ತಿಗೆ ಅನುಗುಣವಾಗಿ ಸೂಕ್ತವಾಗಿ ಪ್ರತಿಭಟಿಸಿದ್ದಕ್ಕೆ ದೊರೆತ ದೈವಾನುಗ್ರಹವನ್ನು ಇಲ್ಲಿ ಕಾಣಬಹುದು. ತಮ್ಮ ಕರ್ತವ್ಯವನ್ನು ಆ ಪ್ರಸಂಗದಲ್ಲಿ ಸೂಕ್ತವಾಗಿ ನಿರ್ವಹಿಸದ ಭೀಷ್ಮದ್ರೋಣಾದಿಗಳ ಮನೆಗೂ ತೆರಳದ ಶ್ರೀಕೃಷ್ಣ ವಿದುರನ ಮನೆಗೆ ಹೀಗೆ ತಾನಾಗಿ ತೆರಳುವ ಮೂಲಕ ಅವರ ಮೇಲೂ ಸಹ ತನಗೆ ಉಂಟಾಗಿದ್ದ ಅಪ್ರೀತಿಯನ್ನು ಸೂಚಿಸಿರುವನು.

---

೧ ಸ ಭೀಷ್ಮಮುಖ್ಯೈರಭಿಯಾಚಿತೋಽಪಿ ಜಗಾಮ ನೈಷಾಂ ಗೃಹಮಾದಿದೇವಃ।
ಉಪೇಕ್ಷಿತಾ ದ್ರೌಪದೀತ್ಯಪ್ರಮೇಯೋ ಜಗಾಮ ಗೇಹಂ ವಿದುರಸ್ಯ ಶೀಘ್ರಮ್ ॥
ಸ ತೇನ ಭಕ್ತ್ಯಾಽಭಿಗತಃ ಪ್ರಸನ್ನಃ ಪ್ರವಿಶ್ಯ ಚಾಂತರ್ಗೃಹಮೀಶ್ವರೋಽಜಃ।
ಭಕ್ತ್ಯಾಭಿಪೂರ್ಣೇನ ಸಸಂಭ್ರಮೇಣ ಸಂಪೂಜಿತಃ ಸರ್ವಸಮರ್ಪಣೇನ ॥
– ಮ.ಭಾ.ತಾ.ನಿ. (೨೪/೬೦-೬೧)

೨ ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿ ಚ। – ಮ.ಭಾ. (೫/೯೧/೪೫)
ತಾಳ ತನ್ನವರಲ್ಲಿ ಮಾಡುವ ಹೇಳನವ ಹೆದ್ದೈವ ವಿದುರನ
ಆಲಯದಿ ಪಾಲುಂಡು ಕುರುಪನ ಮಾನವನೆ ಕೊಂಡ ॥
ಎಂಬ ಶ್ರೀಜಗನ್ನಾಥದಾಸರ (ಹರಿಕಥಾಮೃತಸಾರ ೨/೧೪) ವಿವರಣೆಯನ್ನೂ ಇಲ್ಲಿ ಸ್ಮರಿಸಬಹುದು. ಇಲ್ಲಿ 'ಪಾಲುಂಡು' ಎಂದರೆ ಕೇವಲ ಹಾಲಲ್ಲ; ಮಹಾಭಾರತದ ವಾಕ್ಯದಂತೆ ಅದನ್ನು ಭೋಜನವೆಂದೇ ಅರ್ಥೈಸಬೇಕು. ಇದಕ್ಕೆ ಹರಿಕಥಾಮೃತಸಾರದ್ದೇ ಆದ ಈ ಕೆಳಗಿನ ಪದ್ಯವೂ (೨೨/೭) ಸಂವಾದಿಯಾಗಿದೆ:
ನೀಕರಿಸಿ ಕುರುಪತಿಯ ಭೋಜನ ಸ್ವೀಕರಿಸಿದನು ವಿದುರನೌತನ
ಬಾಕುಳಿಕನಂದದಲಿ ತೋರಿದ ಭಕ್ತವತ್ಸಲನು ॥

೩ ಅಂದು ವಿದುರನಿಗಾದ ಸಂಭ್ರಮ ಹಾಗೂ ಆನಂದೋದ್ರೇಕವನ್ನು ಶ್ರೀಪುರಂದರದಾಸರು ತಮ್ಮ ರಚನೆಯೊಂದರಲ್ಲಿ ಬಹಳ ಸೊಗಸಾಗಿ ವರ್ಣಿಸಿದ್ದಾರೆ. ಅದನ್ನು ಪರಿಶಿಷ್ಟದಲ್ಲಿ ನೀಡಲಾಗಿದೆ.

# ವಿದುರ ಎಡವಿದ್ದೆಲ್ಲಿ?

ವಿದುರನು ಹೀಗೆ ಮಹಾಭಾಗವತರ ಸಾಲಿಗೆ ಸೇರುವ ಪರಮಭಗವದ್ಭಕ್ತ. ಹಿರಣ್ಯಕಶಿಪುವಿನ ಪುತ್ರನಾಗಿ ವಿಪಕ್ಷದಲ್ಲಿದ್ದರೂ ಪ್ರಹ್ಲಾದ ಭಗವನ್ನಿಷ್ಠೆಯನ್ನು ತೊರೆಯದಿದ್ದಂತೆ ಧನಲೋಭಿಗಳಾದ ದುರ್ಯೋಧನಾದಿ ದುಷ್ಟರ ಕೂಟದಲ್ಲಿದ್ದರೂ ವಿದುರ ಭಗವದ್ಭಕ್ತಿಗೆ ಅಪಚಾರವಾಗದಂತೆ ನಡೆದುಕೊಂಡ; ಆದರೆ, ಈ ಎಲ್ಲ ಸಂಭ್ರಮದ ನಡುವೆಯೇ ಅವನಿಂದ ಪ್ರಮಾದವೊಂದು ಘಟಿಸಿಬಿಡುತ್ತದೆ.[೧] ಅದು ಹೀಗಿದೆ: ಅಂದು ರಾತ್ರಿಯಿಡೀ ಶ್ರೀಕೃಷ್ಣನೊಂದಿಗೆ ಸಂಭಾಷಣೆ ಮಾಡಿದ ಭಾಗ್ಯಶಾಲಿಯಾದ ಅವನು 'ಮಾರನೆಯ ದಿನ ದುರ್ಯೋಧನಾದಿಗಳು ಶ್ರೀಕೃಷ್ಣನನ್ನು ಬಂಧಿಸಿಬಿಟ್ಟಾರು' ಎಂಬ ಶಂಕೆಯಿಂದ (ಮ.ಭಾ. ೫/೯೨) ಕೌರವರ ಸಭೆಗೆ ಹೋಗುವುದು ತರವಲ್ಲವೆಂದು ಶ್ರೀಕೃಷ್ಣನಿಗೇ ಸಲಹೆ ನೀಡುತ್ತಾನೆ! ಭಗವಂತ ಎಂದು ತಾನು ಭಾವಿಸಿದ ಶ್ರೀಕೃಷ್ಣನ ಸಾಮರ್ಥ್ಯವನ್ನೂ, ವಿವೇಕವನ್ನೂ ಸಂದೇಹಿಸುವ ವಿದುರನ ಈ ಪ್ರವೃತ್ತಿ ಅವನ ಭಕ್ತಿಯ ಮಿತಿಗೆ ಒಂದು ನಿದರ್ಶನ. ಇದು ಅಚ್ಛಿನ್ನ ಭಾಗವತರ ಸಾಲಿಗೆ ವಿದುರ ಸೇರುವುದಿಲ್ಲವೆನ್ನುವುದಕ್ಕೆ ಸಾಕ್ಷಿ.

ನಿತ್ಯಮುಕ್ತನಾದ, ಸರ್ವತಂತ್ರಸ್ವತಂತ್ರನಾದ, ಅನಂತನಾದ ಅವನು ಬಂಧಿತನಾಗುವ ಸಾಧ್ಯತೆ ಇದೆ ಎಂದೆಣಿಸಿದರೆ ಅವನಲ್ಲಿ ದೋಷವನ್ನು ಚಿಂತಿಸಿದಂತೆ. ವಾಯುಭಾರತಿಯರನ್ನು ಹೊರತುಪಡಿಸಿ ಉಳಿದೆಲ್ಲ ಸಾಧಕವರ್ಗದವರು, ದೇವಾಂಶಸಂಭೂತರಾಗಿದ್ದರೂ, ಒಂದಲ್ಲ ಒಂದು ಪ್ರಸಂಗದಲ್ಲಿ ಶುದ್ಧ-ಭಾಗವತ-ಧರ್ಮದಿಂದ ಜಾರಿರುತ್ತಾರೆ.[೨] ವಿದುರನು ಜಾರಿದ್ದಿಲ್ಲಿ. ದುರ್ಯೋಧನಾದಿ ದುಷ್ಟರ ಸಂಚಿಗೆ ಶ್ರೀಕೃಷ್ಣ ಒಳಗಾಗಿ ಬಂಧನಕ್ಕೊಳಗಾಗಬಹುದು ಎಂಬ ಅವನ ಭಾವ ಹಿತೈಷಿಯದ್ದಾಗಬಹುದೇ ಹೊರತು ಭಗವಂತನ ಬಗ್ಗೆ ಭಕ್ತನದ್ದಲ್ಲ. ಭಕ್ತರ ಭಕ್ತಿಪಾಶಗಳಿಂದ ಮಾತ್ರ ಬಂಧಿಸಲ್ಪಡುವ ಶ್ರೀಕೃಷ್ಣನನ್ನು ದುರ್ಯೋಧನಾದಿ ದುಷ್ಟರ ಪಾಶಕ್ಕೆ ಒಳಗಾಗುವ ಸೀಮಿತಶಕ್ತಿಯವನು ಎಂದು ತಿಳಿಯುವಲ್ಲಿ ವಿದುರನ ವಿಚಾರಶಕ್ತಿ ಸೋತಿದೆ. ಶ್ರೀಕೃಷ್ಣ ಅವನಿಗೆ ಪ್ರತಿಯಾಗಿ ಧೈರ್ಯ ಹೇಳಿದ; ತನ್ನ ವಿಶ್ವರೂಪವನ್ನು ತೋರುವ ಮೂಲಕ ತನ್ನ ಸಾಮರ್ಥ್ಯವನ್ನು ತೋರಿದ. ಅಲ್ಲಿ ಸ್ಫುಟಪಟ್ಟದ್ದು ಶ್ರೀಕೃಷ್ಣನು ಭಗವಂತನೆಂಬ ತತ್ತ್ವದ ಜೊತೆಗೆ ದುರ್ಯೋಧನಾದಿಗಳ ದುರ್ಬುದ್ಧಿ ಮಾತ್ರ. ಅವರ ಪ್ರಯತ್ನವನ್ನು ವಿಫಲವಾಗಿಸುವ ಮೂಲಕ ಶ್ರೀಕೃಷ್ಣ ಅವರ ದುರಂತಕ್ಕೂ ನಾಂದಿ ಹಾಡಿದ. ವಿದುರ ತೋರಿದ ಆತಂಕ ಅರ್ಥರಹಿತ, ನಿರಾಧಾರ ಎಂಬುದನ್ನು ಹೀಗೆ ಕೃತಿಯ ಮೂಲಕವೇ ಶ್ರೀಕೃಷ್ಣ ತಿಳಿಸಿಕೊಟ್ಟ.

---

೧ ಬಂಧನಂ ಶಂಕಮಾನೋಽಪಿ ಕೃಷ್ಣಸ್ಯ ವಿದುರೋಽಪಿ ತು।
ಕೌರವೇಯಸಭಾಮಧ್ಯೇ ನಾವತಾರಮರೋಚಯತ್ ॥ – ಮ.ಭಾ.ತಾ.ನಿ. ೧೮/೨೨

೨ ಅನ್ಯೇ ಭಾಗವತತ್ವೇಽಪಿ ಭಿನ್ನಧರ್ಮಾಃ ಕ್ವಚಿತ್ ಕ್ವಚಿತ್। – ಮ.ಭಾ.ತಾ.ನಿ. (೧೮/೧೮)

# ತೀರ್ಥಯಾತ್ರೆಯಲ್ಲಿ ವಿದುರ

ವಿದುರನ ತೀರ್ಥಯಾತ್ರೆ ಒಂದು ಅಪೂರ್ವ ಪ್ರಸಂಗ. ಮಹಾಭಾರತದ ಅರ್ಥವಿನಿರ್ಣಯವೆಂದೇ ಖ್ಯಾತವಾದ ಶ್ರೀಮದ್ಭಾಗವತ ಮಹಾಪುರಾಣದಲ್ಲಿ ಬಂದ ಇದರ ಉಲ್ಲೇಖ ಹೀಗಿದೆ:

ಶ್ರೀಕೃಷ್ಣಪರಮಾತ್ಮನು ಸಂಧಾನಕ್ಕೆಂದು ಬಂದು ನುಡಿದ ಹಿತೋಕ್ತಿಯನ್ನೂ ಧೃತರಾಷ್ಟ್ರನಿಂದ ಒಪ್ಪಲು ಸಾಧ್ಯವಾಗಲಿಲ್ಲ. ಧೃತರಾಷ್ಟ್ರನು ವಿದುರನನ್ನು ಸಮಾಲೋಚನೆಗೆಂದು ಕರೆಸಿಕೊಳ್ಳಲು ವಿದುರನು ಪಾಂಡವರಿಗೆ ಅವರ ರಾಜ್ಯವನ್ನು ನೀಡಲೇಬೇಕೆಂದೂ, ಇಲ್ಲವಾದಲ್ಲಿ ಶ್ರೀಕೃಷ್ಣನಿಂದ ಸಂರಕ್ಷಿತರಾದ ಭೀಮಾರ್ಜುನರಿಂದ ಅಪಾಯ ತಪ್ಪಿದ್ದಲ್ಲವೆಂದೂ, ಕೃಷ್ಣದ್ವೇಷಿಯಾದ ದುರ್ಯೋಧನನನ್ನು ಕುಲದ ಕೌಶಲಕ್ಕಾಗಿ ತ್ಯಜಿಸಬೇಕೆಂದೂ ಸ್ಪಷ್ಟವಾಗಿ ಪ್ರತಿಪಾದಿಸುತ್ತಾನೆ.[೧] ಆಗ ದುರ್ಯೋಧನಾದಿಗಳು ವಿದುರನನ್ನು 'ಈ ದಾಸಿಯ ಮಗನನ್ನು ಇಲ್ಲಿ ಕರೆತಂದವರಾರು? ಇವನು ಮೋಸಗಾರ. ನಮ್ಮ ಅನ್ನವನ್ನೇ ತಿಂದು ನಮಗೇ ಎರಡು ಬಗೆಯಲು ಹೊರಟಿದ್ದಾನೆ. ಇವನನ್ನು ಊರಿನಿಂದ ಹೊರಹಾಕಿ' ಎಂಬುದಾಗಿ ಧೃತರಾಷ್ಟ್ರನ ಎದುರೇ ಬಹಳ ಕಠೋರವಾಗಿ ನಿಂದಿಸುತ್ತಾನೆ; ಆದರಿಂದಾಗಿ ವಿದುರ ಅಲ್ಲಿಂದ ತೀರ್ಥಯಾತ್ರೆಗೆ ಹೊರಡುತ್ತಾನೆ.[೨]

ದುರ್ಯೋಧನಾದಿಗಳ ವಾಕ್ಯದಲ್ಲಿ ತಮ್ಮ ಚಿಕ್ಕಪ್ಪನಾದ, ವ್ಯಾಸಪುತ್ರನಾದ, ಪರಮಧರ್ಮಿಷ್ಠನಾದ ವಿದುರನನ್ನು ನಿಕೃಷ್ಟವಾಗಿ ಕಾಣುವ ಬಗೆ ಎದ್ದು ಕಾಣುವುದು. ಇಂದು ಹೆಚ್ಚಿನ ಸರ್ಕಾರಗಳು ಧರ್ಮಿಷ್ಠರನ್ನು ನೋಡುವುದೂ ಹೀಗೆಯೇ ಆಗಿದೆ.

ಧೃತರಾಷ್ಟ್ರನು ಕೊನೆಯಲ್ಲಿ ಮನೆ ಬಿಟ್ಟು ವನಕ್ಕೆಂದು ಹೊರಟಿದ್ದು ಭೀಮನು ಅವನಿಗೆ ವೈರಾಗ್ಯ ಹುಟ್ಟುವ ರೀತಿಯಲ್ಲಿ ನಡೆದುಕೊಂಡಮೇಲೆ, ಆದರ ಆಂತರ್ಯವನ್ನು ವಿದುರನು

---

೧ ಇದೇ ಮಾತನ್ನು ದುರ್ಯೋಧನ ಹುಟ್ಟಿದ ತತ್ಕ್ಷಣವೂ ವಿದುರನು ನುಡಿದದ್ದನ್ನು ಹಿಂದೆ ವಿವರಿಸಲಾಗಿದೆ. ದ್ಯೂತ ನಡೆಯುವಾಗಲೂ (ಮ.ಭಾ. ೨/೮೬/೧೧) ವಿದುರನೀತಿಯಲ್ಲೂ (ಮ.ಭಾ. ೫/೩೯/೫) ವಿದುರನು ಇಂತಹುದೇ ಮಾತನ್ನು ಹೇಳುವನು.

೨ ಕ ಏನಮತ್ರೋಪಜುಹಾವ ಜಿಹ್ಮಂ ದಾಸ್ಯಾಃ ಸುತಂ ಯದ್ಬಲಿನೈವ ಪುಷ್ಟಃ।
ತಸ್ಮಿನ್ ಪ್ರತೀಪಃ ಪರಕೃತ್ಯ ಆಸ್ತೇ ನಿರ್ವಾಸ್ಯತಾಮಾಶು ಪುರಾಚ್ಛ್ವಸಾನಃ॥
ಸ ಇತ್ಥಮತ್ಯುಲ್ಬಣಕರ್ಣಬಾಣೈರ್ಭ್ರಾತುಃ ಪುರೋ ಮರ್ಮಸು ತಾಡಿತೋಽಪಿ।
ಸ್ವಯನ್ ಧನುರ್ದ್ವಾರಿ ನಿಧಾಯ ಮಾಯಾಂ ಗತವ್ಯಥೋಽಯಾದುರು ಮಾನಯಾನಃ॥
ಸ ನಿರ್ಗತಃ ಕೌರವಪುಣ್ಯಲಬ್ಧಗಜಾಹ್ವಯಾತ್ ತೀರ್ಥಪದಃ ಪದಾನಿ।
ಅನ್ವಾಕ್ರಮತ್ ಪುಣ್ಯಚಿಕೀರ್ಷಯೋರ್ವ್ಯಾಮಧಿಷ್ಠಿತೋ ಯಾನಿ ಸಹಸ್ರಮೂರ್ತಿಃ॥
– ಭಾಗವತ (೩/೧/೧೫-೧೮)

ಬಾಯ್ಬಿಟ್ಟು ಹೇಳಿದ ಮೇಲೆ. ಆದರೆ ವಿದುರನು ಸ್ವಬುದ್ಧಿಯಿಂದ ವಿವೇಕವನ್ನಾಶ್ರಯಿಸಿ ತೀರ್ಥಯಾತ್ರಾಪರನಾದ ಎಂಬುದು ವಿಶೇಷ.[೧]

ಸಾಮಾನ್ಯವಾಗಿ ಸತ್ಸಂಗಕ್ಕಿಂತ ಮಿಗಿಲಾದ ತೀರ್ಥಯಾತ್ರೆ ಬೇರೊಂದಿಲ್ಲ. ಹಾಗೆ ನೋಡಿದರೆ ಹಸ್ತಿನಾಪುರವೇ ಒಂದು ಕ್ಷೇತ್ರ. ಗಂಗಾತೀರದ ಪ್ರದೇಶ ಎಂಬುದರ ಜೊತೆಗೆ ಭೀಷ್ಮದ್ರೋಣಾದಿ ಸತ್ಪುರುಷರ ನಿವಾಸ ಎಂಬ ಹಿರಿಮೆಯೂ ಅದಕ್ಕಿತ್ತು. ಹೀಗಿರಲು, ಬೇರೊಂದು ತೀರ್ಥಕ್ಕೆ ತೆರಳುವ ಅಗತ್ಯವೇನು? ಎಂಬುದಕ್ಕೆ ಇದು ಉತ್ತರವಾಗಿದೆ. ದುರ್ಯೋಧನಾದಿಗಳಿಂದಾದ ಅವಮಾನ ಒಂದಾದರೆ, ಆ ಬಗ್ಗೆ ಭೀಷ್ಮಧೃತರಾಷ್ಟ್ರಾದಿಗಳ ಮೌನ ಮತ್ತೊಂದು ಎನ್ನಬಹುದು. ಸಾಲದ್ದಕ್ಕೆ ಆಗಲೇ ಸನ್ನಿಹಿತವಾಗಿದ್ದ ಕುರುಪಾಂಡವರ ಸಮರ. ಈ ಎಲ್ಲ ಕಾರಣಗಳಿಂದ ವಿದುರನ ತೀರ್ಥಯಾತ್ರೆ ಅರ್ಥವತ್ತಾಗುವುದು.

ಕೌರವರ ಹಾವಳಿಗಳು ವಿದುರನಿಗೆ ಹೊಸತೇನಲ್ಲ. ಅವುಗಳನ್ನು ಸಹಿಸಿಕೊಂಡು ಹಸ್ತಿನಾಪುರದಲ್ಲೇ ವಿದುರ ಏಕೆ ಇರುತ್ತಿದ್ದ? ತೀರ್ಥಾದಿಗಳಿಗೆಂದು ಮುಂಚೆಯೇ ಹೊರಟುಹೋಗಬಾರದಿತ್ತೇ ಎಂಬ ಪ್ರಶ್ನೆಗೂ ಶ್ರೀಮದಾಚಾರ್ಯರ ಈ ಕೆಳಗಿನ ವಾಕ್ಯದಲ್ಲಿ ಉತ್ತರವಿದೆ:

ಯುದ್ಧಕಾಲೇ ತು ವಿದುರಃ ತೀರ್ಥಯಾತ್ರಾಂಗತೋಽಪಿ ಸನ್ ।
ಪ್ರಾಯ ಆಸ್ತೇ ಗಜಪುರೇ ಪಾಂಡವಾನಾಂ ವ್ಯಪೇಕ್ಷಯಾ ॥[೨]

ಯುದ್ಧಕ್ಕಿಂತ ಮುಂಚೆ ಅರಗಿನ ಮನೆ, ದ್ಯೂತ ಮೊದಲಾದ ಪ್ರಸಂಗದಲ್ಲಿ ವಿದುರನು ತನ್ನ ಇರುವಿಕೆಯಿಂದ ಪಾಂಡವರಿಗೆ ಅನುಕೂಲನಾಗಿದ್ದ. ವಿದುರನ ಈ ಕರ್ತವ್ಯಪ್ರಜ್ಞೆಯಿಂದ ತನ್ನ ಸಾಧನೆಯ ಜೊತೆಗೆ ಲೋಕಕ್ಕೆ ರಾಜನೀತಿಯ ಬೋಧನೆಯೂ ಆಯಿತು. ಯುದ್ಧ ಇನ್ನೇನು ಖಚಿತವೆಂದಮೇಲೆ ತೀರ್ಥಯಾತ್ರೆಗೆ ಹೊರಟ. ಯುದ್ಧದ ಬಳಿಕ ಪಾಂಡವರ ಸತ್ಸಂಗ ದೊರೆಯಿತು; ಕೌರವರ ಹಾವಳಿಯೂ ಇರಲಿಲ್ಲ. ಪುನಃ ಹಸ್ತಿನಾಪುರಿಯಲ್ಲಿಯೇ ನೆಲೆಸಿ ಧೃತರಾಷ್ಟ್ರನ ಸೇವಾಪರನಾಗಿದ್ದ.

ತಮ್ಮಲ್ಲಿ ನೆಲೆಸಿರುವ ಶ್ರೀಹರಿಯ ದಿವ್ಯ ಸನ್ನಿಧಾನದಿಂದ ವಿದುರನಂಥವರ ತೀರ್ಥಯಾತ್ರೆಗಳು ತಮ್ಮ ಆತ್ಮಶುದ್ಧಿಗಲ್ಲದೇ ಗಂಗಾದಿತೀರ್ಥಗಳನ್ನೂ ಪವಿತ್ರೀಕರಿಸುವಂಥದ್ದು ಎಂಬುದಾಗಿ

---

೧ ವಿದುರಸ್ತು ತದಾಶ್ಚರ್ಯಂ ನಿಶಾಮ್ಯ ಕುರುನಂದನ ।
ಹರ್ಷಶೋಕಯುತಸ್ತಸ್ಮಾದ್ಗಂತಾ ತೀರ್ಥನಿಷೇವಕಃ ॥ – ಭಾಗವತ (೧/೧೨/೬೦)
ಇದಕ್ಕೆ ಶ್ರೀಮದಾಚಾರ್ಯರ ತಾತ್ಪರ್ಯ: ಏತತ್ಸರ್ವಂ ಪೂರ್ವಮೇವ ಜ್ಞಾತ್ವಾ ತಸ್ಮಾದೇವ ಕಾರಣಾತ್ ವಿದುರಃ ತೀರ್ಥಾನಿ ಯಯೌ ।

೨ ಭಾ.ತಾ. (೩/೧/೨)

ಧರ್ಮರಾಜನು ಬಣ್ಣಿಸುತ್ತಾನೆ.[೧] ಧರ್ಮರಾಜನ ಈ ಮಾತಿನಲ್ಲಿ ವಿದುರನ ತೀರ್ಥಯಾತ್ರೆಯ ಮಹತ್ತ್ವ ನಿರೂಪಿತವಾಗಿದೆ. ಅವನಂತಹ ಸಜ್ಜನರ ತೀರ್ಥಯಾತ್ರೆ ಆತ್ಮೋದ್ಧಾರಕ್ಕಿಂತ ಹೆಚ್ಚಾಗಿ ಲೋಕೋದ್ಧಾರಕ್ಕೆ ಕಾರಣ ಎಂಬುದು ಅದರ ಭಾವ.

**ವಿಶೇಷತೋ ವಿದುರಃ ಸರ್ವವೇತ್ತಾ** (ಮ.ಭಾ.ತಾ.ನಿ. ೧೧/೧೪೨) ಎಂಬ ಮಾತಿನಂತೆ ವಿದುರನು ಮಹಾಜ್ಞಾನಿಯಾಗಿದ್ದ. ಹಾಗೂ ದ್ಯೂತದ ಪ್ರಸಂಗದಲ್ಲಿ ಕಂಡಿರುವಂತೆ ಸತ್ಯವನ್ನು ಹೇಳಲು/ಕೇಳಲು ಹಿಂಜರಿಯುತ್ತಿರಲಿಲ್ಲ. ಆದ್ದರಿಂದ, ಸಹಜವಾಗಿಯೇ ಜೀವನದುದ್ದಕ್ಕೂ ವಿದುರನು ಅನೇಕ ಸಂವಾದಗಳಲ್ಲಿ ಭಾಗಿಯಾಗುತ್ತಾನೆ - ವಿದುರನೀತಿ ಮೊದಲಾದ ಪ್ರಸಂಗಗಳಲ್ಲಿ ವಕ್ತೃವಾಗಿ; ತೀರ್ಥಯಾತ್ರಾಪ್ರಸಂಗದಲ್ಲಿ ಶ್ರೋತೃವಾಗಿ. ಆತನದು ನೇರವಾಗಿ ತತ್ತ್ವನಿರ್ಣಯವನ್ನು ಉದ್ದೇಶಿಸಿ ಹೊರಟ ಸಂವಾದಗಳು. ಇವು ಶ್ರೀಮದಾಚಾರ್ಯರು ನಿರೂಪಿಸಿರುವ ವಾದಕಥೆಗೆ ಉತ್ತಮ ನಿದರ್ಶನಗಳು.

ವಿದುರನ ತೀರ್ಥಯಾತ್ರೆಯಲ್ಲಿ ಮುಖ್ಯವಾಗಿ ಇಬ್ಬರು ಮಹಾಭಾಗವತರ ಸಮಾಗಮವಾಗುತ್ತದೆ – ಮೊದಲು ಉದ್ಧವನೊಂದಿಗೆ ಮತ್ತು ಆ ಬಳಿಕ ಮೈತ್ರೇಯರೊಂದಿಗೆ. ತೀರ್ಥಯಾತ್ರೆಗೆ ಇದಕ್ಕಿಂತ ಹೆಚ್ಚಿನ ಫಲ ಇನ್ನೇನು ಬೇಕು? **ನಿನ್ನ ದರುಶನಕೆ ಬಂದವನಲ್ಲವೋ ಪುಣ್ಯವಂತರ ದಿವ್ಯ ಚರಣ ನೋಡಲು ಬಂದೆ** ಎಂದು ಶ್ರೀವಿಜಯದಾಸರು ಹೇಳಿಲ್ಲವೇ. ಅವರೊಂದಿಗೆ ವಿದುರ ನಡೆಸಿದ ತಾತ್ತ್ವಿಕ ಸಂವಾದಗಳ ಹಿನ್ನೆಲೆ ಭಾಗವತದ ತೃತೀಯ ಸ್ಕಂಧದಲ್ಲಿ ವಿಸ್ತಾರವಾಗಿ ನಿರೂಪಿತವಾಗಿವೆ.

ಯಮುನಾತೀರದಲ್ಲಿ ಉದ್ಧವನನ್ನು ಕಂಡು ಕೃಷ್ಣನ ಅಪಾರ ಮಹಿಮೆಗಳನ್ನು ಹಾಗೂ ಯಾದವರ ನಾಶವನ್ನೂ ವಿದುರನು ತಿಳಿಯುತ್ತಾನೆ.[೨]

---

೧ ಭವದ್ವಿಧಾ ಭಾಗವತಾಸ್ತೀರ್ಥಭೂತಾಃ ಸ್ವಯಂ ಪ್ರಭೋ ।
ತೀರ್ಥೀಕುರ್ವಂತಿ ತೀರ್ಥಾನಿ ಸ್ವಾತ್ಮಸ್ಥೇನ ಗದಾಭೃತಾ ॥ – ಭಾಗವತ (೧/೧೨/೧೦)

೨ ಇತ್ಯುದ್ಧವಾದುಪಾಕರ್ಣ್ಯ ಸುಹೃದಾಂ ದುಃಸಹಂ ವಧಮ್ ।
ಜ್ಞಾನೇನಾಶಮಯತ್ ಕ್ಷತ್ತಾ ಶೋಕಮುತ್ಪತಿತಂ ಬುಧಃ ॥ – ಭಾಗವತ (೩/೪/೨೩)
ಆದರೆ, ಮಹಾಭಾರತದ ಪ್ರಕಾರ ವಿದುರನು ತೀರ್ಥಯಾತ್ರೆ ಮುಗಿಸಿ ಬಂದ ಮೇಲೂ ಕೃಷ್ಣನಿದ್ದದ್ದು, ಯಾದವರಿದ್ದದ್ದು ಸ್ಪಷ್ಟ ತಿಳಿಯುತ್ತದೆ. ಅಷ್ಟೇ ಏಕೆ? 'ವಿದುರಂ ಚಾಗತಂ ಪುನಃ' ಎಂಬ ಭಾಗವತದ (೧೦/೯೮/೫) ವಾಕ್ಯದ ಪ್ರಕಾರವೇ – ಧರ್ಮರಾಜನನ್ನು ರಾಜ್ಯದಲ್ಲಿರಿಸಿ ಕೃಷ್ಣನು ದ್ವಾರಕೆಗೆ ಹಿಂದಿರುಗುವಾಗಲೂ ವಿದುರನಿದ್ದುದನ್ನು ಶ್ರೀಮದಾಚಾರ್ಯರು ಸ್ಪಷ್ಟಪಡಿಸಿರುವರು (ಭಾ.ತಾ. ೧/೧೨/೧೨). ಆದ್ದರಿಂದ ಇಲ್ಲಿ ಮಹಾಭಾರತದ ನಿರೂಪಣೆಗೂ ಭಾಗವತದ ನಿರೂಪಣೆಗಳಿಗೂ ವಿರೋಧ ಬಂದಂತೆ ಕಾಣುತ್ತದೆ.
ಇಂತಹುದನ್ನೇ ಕಾಯುವ ಕೆಲವರು ಅವೆರಡೂ ಕೃತಕ ಸಾಹಿತ್ಯಗಳೇ ಹೊರತು ಇತಿಹಾಸವಲ್ಲ ಎನ್ನುವರು. ಮೊದಲಿಗೆ, ಈ ರೀತಿಯ ಪ್ರಶ್ನೆಗಳಿಗೆಲ್ಲ ಅನ್ವಯಿಸುವಂತೆ ಶ್ರೀಮದಾಚಾರ್ಯರು ಒಂದು ಸಾಮಾನ್ಯ ಪರಿಹಾರವನ್ನು ನೀಡಿರುವರು:

ತೀರ್ಥಯಾತ್ರೆಯನ್ನು ಮುಗಿಸಿ ಬಂದ ಮೇಲೆ ತೀರ್ಥಯಾತ್ರೆಯ ಅನುಭವಗಳನ್ನೆಲ್ಲ ಧರ್ಮರಾಜನಿಗೆ ವಿವರಿಸುತ್ತಾ, ವಿದುರನು ಉದ್ಧವರಿಂದ ಯದುಕುಲನಾಶವನ್ನು ತಿಳಿದಿದ್ದರೂ ಅದನ್ನು ಪ್ರಕಾಶಪಡಿಸಲಿಲ್ಲ.[೧] ಯಾವಾಗಲೂ ಪ್ರಿಯವಾದ ಸತ್ಯವನ್ನಷ್ಟೇ ನುಡಿಯಬೇಕು[೨] ಎಂಬಂತೆ ವಿದುರನ ಅಪಾರ ವಿವೇಕಕ್ಕೆ ಇದೊಂದು ದೃಷ್ಟಾಂತ.[೩]

---

ವ್ಯಾಸಾದಯೋ ವರ್ತಮಾನಮತೀತಾನಾಗತೇ ತಥಾ ।
ವ್ಯತ್ಯಸ್ಯಾಪಿ ವದಂತ್ಯದ್ಧಾ ಮೋಹನಾರ್ಥಂ ದುರಾತ್ಮನಾಮ್ ॥ – ಭಾ.ತಾ. (೧/೧೨/೫೩)
ಎಂದರೆ, ದುರ್ಜನರ ಮೋಹಕ್ಕೆಂದು ವ್ಯಾಸಾದಿಗಳು ಕೆಲವೊಮ್ಮೆ ಘಟನೆಗಳನ್ನು ಹಿಂದುಮುಂದಾಗಿ ಹೇಳುವುದೂ ಉಂಟೆಂದು.

ಅಲ್ಲದೇ, ಈ ಪ್ರಸಂಗದಲ್ಲಂತೂ 'ಯದುಕುಲಕ್ಷಯಂ ಏಷ್ಯತ್' (ಭಾ.ತಾ. ೧/೧೨/೧೨), 'ಸುಹೃದ್ವಿನಷ್ಟಿಂ ಯದುಕುಲವಿನಷ್ಟಿಂ ಏಷ್ಯಾಮ್' (ಭಾ.ತಾ. ೩/೧/೨೧) ಎಂಬುದಾಗಿ ಶ್ರೀಮದಾಚಾರ್ಯರು ಈ ಸಮಸ್ಯೆಯನ್ನು ಬಗೆಹರಿಸಿದ್ದಾರೆ. ಎಂದರೆ, ವಿದುರ (ಮೊದಲಾದವರು) ತಿಳಿದದ್ದು ಮುಂದಾಗುವ ಯದುಕುಲನಾಶವನ್ನೇ ಹೊರತು ಆಗಾಗಲೇ ಆಗಿಹೋದದ್ದನ್ನಲ್ಲ. ಇದಕ್ಕೆ ಶ್ರೀಮದಾಚಾರ್ಯರು ಪ್ರಮಾಣವನ್ನೂ ಉಲ್ಲೇಖಿಸಿದ್ದಾರೆ:
ವಿದುರಂ ತೀರ್ಥಯಾತ್ರಾಸ್ಥಮಂತರಾಲೇ ಸ ಉದ್ಧವಃ ।
ದೃಷ್ಟ್ವಾ ನಶಿಷ್ಯಮಾಣಂ ಚ ಕುಲಂ ಜಿಗಮಿಷುಂ ಹರಿಂ ।
ಕಥಯಿತ್ವಾ ..... ॥ (ಇತಿ ಪಾದ್ಮೇ) – ಭಾ.ತಾ. (೧/೧೨/೧೨)

ಇನ್ನು, ವಿದುರನು ಮುಂದಾಗುವ ಯಾದವನಾಶವನ್ನು ತಿಳಿದದ್ದು ಪ್ರಭಾಸದಲ್ಲೋ ಯಮುನಾತೀರದಲ್ಲೋ? ಎಂಬುದು ಮತ್ತೊಂದು ಸಂದೇಹ. ಈ ಹಿಂದೆ ಉದಾಹರಿಸಿದ ವಾಕ್ಯದಲ್ಲಿ ವಿದುರನು ಯದುಕುಲಕ್ಕೆ ಶಾಪದಿಂದೊದಗಿದ ನಾಶವನ್ನು ಉದ್ಧವನಿಂದ ಕೇಳಿತಿಳಿದನೆಂಬುದಾಗಿದೆ. ಉದ್ಧವನೊಂದಿಗೆ ಸಮಾಗಮವಾದರೋ ಯಮುನಾತೀರದಲ್ಲಿ ಆದದ್ದು:
ಕಾಲೇನ ತಾವದ್ಯಮುನಾಮುಪೇತ್ಯ ತತ್ರೋದ್ಧವಂ ಭಾಗವತಂ ದದರ್ಶ । – ಭಾಗವತ (೩/೧/೨೪)
ಆದರೆ, ಇದಕ್ಕೂ ಮುಂಚೆ
ಗತವಾನ್ ಪ್ರಭಾಸಂ । ..... ತತ್ರಾಥ ಶುಶ್ರಾವ ಸುಹೃದ್ವಿನಷ್ಟಿಂ ..... ॥ – ಭಾಗವತ (೩/೧/೨೦,೨೧)
ಎಂಬುದಾಗಿ ಆ ವಿಚಾರವನ್ನು ಪ್ರಭಾಸದಲ್ಲಿ ಕೇಳಿದನೆಂಬುದಾಗಿಯೂ ಇದೆ. ಈ ಗೊಂದಲವನ್ನು ಶ್ರೀಮದಾಚಾರ್ಯರು ಹೀಗೆ ಬಗೆಹರಿಸಿರುವರು:
ವಿದುರಸ್ತು ಪ್ರಭಾಸಸ್ಥಃ ಶಾಪಂ ಸಂಕ್ಷೇಪತೋಽಶೃಣೋತ್ ।
ಯದೂನಾಂ ವಿಸ್ತರಾತ್ ಪಶ್ಚಾದುದ್ಧವಾದ್ಯಮುನಾಮನು ॥ ಇತಿ ಸ್ಕಾಂದೇ – ಭಾ.ತಾ. (೩/೧/೨೧)
ಎಂದರೆ, ಪ್ರಭಾಸದಲ್ಲಿ ಸಂಕ್ಷೇಪವಾಗಿ ಕೇಳಿದ್ದನ್ನು ಯಮುನಾತೀರದಲ್ಲಿ ಉದ್ಧವನಿಂದ ವಿಸ್ತಾರವಾಗಿ ಕೇಳಿದನೆಂದು ತಿಳಿಯಬೇಕು.

೧ ಇತ್ಯುಕ್ತೋ ಧರ್ಮರಾಜೇನ ಸರ್ವಂ ತತ್ ಸಮವರ್ಣಯತ್ ।
ಯಥಾನುಭೂತಂ ಭ್ರಮತಾ ವಿನಾ ಯದುಕುಲಕ್ಷಯಮ್ ॥ – ಭಾಗವತ (೧/೧೨/೧೨)

೨ ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾನ್ನ ಬ್ರೂಯಾತ್ ಸತ್ಯಮಪ್ರಿಯಮ್ ।
ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನಃ ॥ – ಮನುಸ್ಮೃತಿ (೪/೧೩೮)

೩ ವಿದುರಃ ಪಾಂಡವಾನಾಂ ಚ ವಿನಾ ಯದುವಿನಾಶನಮ್ ।

ಕೃಷ್ಣನ ಅಪ್ಪಣೆಯಂತೆ ಉದ್ಧವನು ಬದರಿಗೆ ತೆರಳಲು, ವಿದುರನು ಹರಿದ್ವಾರಕ್ಕೆ ಹೋಗಿ ಮೈತ್ರೇಯರಿಂದ ತತ್ತ್ವೋಪದೇಶ ಪಡೆದು ಹಸ್ತಿನಾಪುರಕ್ಕೆ ಹಿಂದಿರುಗುತ್ತಾನೆ.[೧] ವಿದುರನಂತಹ ವಿದುರನೇ ಪ್ರಶ್ನೆ ಮಾಡಿದಾಗ, ಮೈತ್ರೇಯರಂತಹ ಮೈತ್ರೇಯರೇ ಉತ್ತರಿಸಿದಾಗ ಅದನ್ನು ನಾವು ಶ್ರವಣ ಮಾಡುವುದು ಉತ್ತಮಫಲದಾಯಕವೇ ಆಗಿರಬೇಕೆನ್ನುತ್ತಾನೆ ಪರೀಕ್ಷಿದ್ರಾಜ.[೨] ಶ್ರೀಮದ್ಭಾಗವತವನ್ನು ರಚಿಸಿದ ಶ್ರೀಬಾದರಾಯಣರ ಪುತ್ರನಾದ ವಿದುರನು ಹೀಗೆ ಸ್ವಯಂ ಮಹಾಭಾಗವತನು ಮಾತ್ರನಲ್ಲದೇ ಶ್ರೀಮದ್ಭಾಗವತದ ಪ್ರಸಾರದ ಕಾರ್ಯದಲ್ಲೂ ಪಾತ್ರ ವಹಿಸುತ್ತಾನೆ.

ದೇವಗಣಕ್ಕೆ ಸೇರಿದ ವಿದುರನಿಗಿಂತ ಋಷಿಗಣಕ್ಕೆ ಸೇರಿದ ಮೈತ್ರೇಯರು ಸ್ವರೂಪದಲ್ಲಿ ಅವರರು. ಹೀಗೆ ಸ್ವರೂಪದಲ್ಲಿ ತಮಗಿಂತ ಅಧಮರಾದವರೂ ಕೆಲವೊಮ್ಮೆ ಕಾರಣಾಂತರದಿಂದ ಗುರುಗಳಾಗುವ ಸಂಭವವಿದೆ. ಅಂತಹ ಸನ್ನಿವೇಶದಲ್ಲಿ ಅವರೂ ಪೂಜ್ಯರೇ ಎಂಬ ಶ್ರೀಮದಾಚಾರ್ಯರ ನಿರ್ಣಯಕ್ಕೂ ವಿದುರ-ಮೈತ್ರೇಯರ ಸಂವಾದವು ನಿದರ್ಶನವಾಗಿದೆ.[೩]

ಕೆಲವೊಮ್ಮೆ ವಿದುರನು ತನಗೆ ತಿಳಿದಿಲ್ಲವೆಂಬಂತೆ, ಹಾಗೂ ಆ ಅಜ್ಞಾನದಿಂದ ತಾನು ಕ್ಲೇಶಕ್ಕೊಳಗಾದಂತೆ ಮೈತ್ರೇಯರನ್ನು ಪ್ರಶ್ನೆ ಕೇಳುವುದುಂಟು. ಇದಕ್ಕೆ ಶ್ರೀಮದಾಚಾರ್ಯರು ವಿದುರನನ್ನು ಹೀಗೆ ಸಮರ್ಥಿಸಿಕೊಂಡಿರುವರು:

> ಆತ್ಮನಸ್ತು ಗುಣಾಭಾವಂ ವದತೋ ನತ್ವಸತ್ಯತಾ ।
> ಅಪೃಷ್ಟಸ್ಯ ದಮಾರ್ಥಂ ಚ ಗುಣಾಯೈವ ಭವತ್ಯಪಿ ॥ ಇತಿ ವ್ಯಾಸಸ್ಮೃತೇಃ ।

---

ಷಟ್‌ತ್ರಿಂಶದ್ವರ್ಷತಃ ಪೂರ್ವಂ ಜ್ಞಾತ್ವಾಽಪ್ಯಪ್ರಿಯಮೇವ ತತ್ ।
ನಾವೋಚದ್ವಿದುರೋ ಧೀಮಾಂಸ್ತಸ್ಮಾನ್ನಾಪ್ರಿಯಮಾವದೇತ್ ॥ ಇತಿ ಪಾದ್ಮೇ
- ಭಾ.ತಾ. (೧/೧೨/೧೨)

೧ ವಿದುರಸ್ತೀರ್ಥಯಾತ್ರಾಯಾಂ ಮೈತ್ರೇಯಾದಾತ್ಮನೋ ಗತಿಮ್ ।
ಜ್ಞಾತ್ವಾಽಗಾದ್ಧಸ್ತಿನಪುರಂ ತಯಾಽವಾಪ್ತವಿವಿತ್ಸಿತಃ ॥
ಯಾವತಃ ಕೃತವಾನ್ ಪ್ರಶ್ನಾನ್ ಕ್ಷತ್ತಾ ಕೌಷಾರವಾಗ್ರತಃ ।
ಜಾತೈಕಭಕ್ತಿರ್ಗೋವಿಂದೇ ತೇಭ್ಯಶ್ಚೋಪರರಾಮ ಹ ॥ - ಭಾಗವತ (೧/೧೨/೧,೨)

೨ ನ ಹ್ಯಲ್ಪಾರ್ಥೋದಯಸ್ತಸ್ಯ ವಿದುರಸ್ಯಾಮಲಾತ್ಮನಃ ।
ತಸ್ಮಿನ್ ವರೀಯಸಿ ಪ್ರಶ್ನಃ ಸಾಧುವಾದೋಪಬೃಂಹಿತಃ ॥ - ಭಾಗವತ (೩/೧/೪)

೩ ಸ್ವಾವರಾಣಾಂ ಗುರುತ್ವಂ ತು ಭವೇತ್ ಕಾರಣತಃ ಕ್ವಚಿತ್ ।
ಮರ್ಯಾದಾರ್ಥಂ ತೇಽಪಿ ಪೂಜ್ಯಾ ನ ತು ಯದ್ವತ್ ಪರೋ ಗುರುಃ ॥
- ಮ.ಭಾ.ತಾ.ನಿ. (೧/೧೨೬)

ವಿದ್ಯಮಾನಮಪ್ಯನುಭವಮನ್ಯಥಾ ವದತಿ ವಿದುರಃ ।
ದ್ರೋಣದ್ರೌಣಿಕೃಪಾಃ ಪಾರ್ಥಾ ಭೀಷ್ಮೋ ವಿದುರಸಂಜಯೌ ।
ಯೇ ಚಾನ್ಯೇ ತತ್ರ ದೇವಾಂಶಾಃ ಸಮ್ಯಕ್ತತ್ತ್ವಾಪರೋಕ್ಷಿಣಃ ॥[೧] ಇತಿ ಸ್ಕಾಂದೇ

ಇದರಂತೆ, ವಿದುರಾದಿಗಳು ಪ್ರಶ್ನೆ ಕೇಳಿದರೆಂದರೆ ಅದು ಅವರ ಅಜ್ಞಾನಕ್ಕಾಗಲೀ ಗುಣಾಭಾವಕ್ಕಾಗಲೀ ದ್ಯೋತಕವಲ್ಲ, ಬದಲಾಗಿ, ಜ್ಞಾನಿಗಳು ಎದುರಾದಾಗ ಅವರಿಗೆ ವಿಷಯಗಳನ್ನು ಹೇಳಲು ಪ್ರಸಕ್ತಿ ತಂದುಕೊಡುವುದು ಒಂದು ಉದ್ದೇಶವಾಗಿರುತ್ತದೆ. **ಅಲ್ಲದೇ ಜಾನಂತೋಽಪಿ ವಿಶೇಷಾರ್ಥಜ್ಞಾನಾಯ ಸ್ಥಾಪನಾಯ ವಾ । ಪೃಚ್ಛಂತಿ ಸಾಧವಃ (ಇತ್ಯಾಗ್ನೇಯವಚನಾತ್)** – ಭಗವದ್ಗೀತಾತಾತ್ಪರ್ಯ ೪/೪ ಎಂದಂತೆ ತಿಳಿದದ್ದನ್ನೇ ವಿಶೇಷವಾಗಿ ತಿಳಿಯುವುದು ಹಾಗೂ ಪ್ರಶ್ನಿಸಲಾಗದ ಉಳಿದವರ ಪ್ರಯೋಜನವೂ ಉದ್ದೇಶವಾಗಿರುತ್ತದೆ. ವಿದುರನು ಮೂಲರೂಪದಲ್ಲಷ್ಟೇ ಅಲ್ಲದೇ ಅವತಾರದಲ್ಲೂ ಜ್ಞಾನಿಯೇ ಆಗಿದ್ದನೆಂಬುದನ್ನೂ ತಿಳಿಸಿದ್ದಾರೆ.

ಮೈತ್ರೇಯರಿಂದ ತತ್ತ್ವಾರ್ಥ ತಿಳಿದದ್ದು ವಿದುರನ ಸಾಧನೆಯಾದರೆ, ಅದೇ ಮೈತ್ರೇಯರು ತಾನಿದ್ದಲ್ಲಿಗೇ ಬಂದು ಉಪದೇಶ ನೀಡಿದಾಗಲೂ ಅವಜ್ಞೆ ತೋರಿ ಶಾಪ ಪಡೆದುಕೊಂಡದ್ದು (ಮ.ಭಾ.ತಾ.ನಿ. ೨೨/೨೦-೨೨) ದುರ್ಯೋಧನನ ಅವಿವೇಕ. ಇಲ್ಲಿ ವಿದುರನ ಸಜ್ಜನಿಕೆಯನ್ನೂ ದುರ್ಯೋಧನನ ಅವಿನಯವನ್ನೂ ಸ್ಪಷ್ಟವಾಗಿ ಕಾಣಬಹುದು.

ಯುದ್ಧಾನಂತರ ಧೃತರಾಷ್ಟ್ರ ಗಾಂಧಾರಿ ಮೊದಲಾದವರು ಬಂಧುಗಳ ಮೃತದೇಹಗಳನ್ನು ನೋಡಲು ರಣಭೂಮಿಗೆ ಹೋಗುವ ಸಮಯಕ್ಕಾಗಲೇ ವಿದುರನು ತೀರ್ಥಯಾತ್ರೆಯಿಂದ ಹಿಂದಿರುಗಿದ್ದ.[೨] ಇದು ಮಹಾಭಾರತದ ಸ್ತ್ರೀಪರ್ವದ ಉಲ್ಲೇಖಗಳಿಂದಲೂ ತಿಳಿಯುವುದು.

## ಧೃತರಾಷ್ಟ್ರನಿಗೆ ಮಾರ್ಗದರ್ಶನ

ವಿದುರ-ಧೃತರಾಷ್ಟ್ರರ ಸಂಬಂಧ ಬಾಂಧವ್ಯಕ್ಕಿಂತ ಮಿಗಿಲಾಗಿ ಆಧ್ಯಾತ್ಮಿಕವಾಗಿತ್ತು. ವಿದುರನು ಅವನಿಗೆ ಸಾಕಷ್ಟು ಉಪದೇಶಿಸಿದ್ದನ್ನು ಈಗಾಗಲೇ ನೋಡಿದ್ದೇವೆ ಹಾಗೂ ವಿದುರನೀತಿ ಮೊದಲಾದವುಗಳನ್ನು ಮುಂದೆ ನಿರೂಪಿಸಲಾಗಿದೆ.

೧ ಭಾ.ತಾ. (೩/೮/೧೮)

೨ ತಸ್ಯಾ ಯಾಶ್ಚ ಸ್ನುಷಾಃ ಸರ್ವಾಸ್ತಾಭಿಃ ಸಹ ಪುರಸ್ಕೃತಾಮ್ ।
ಕೃತ್ವಾ ತಂ ಧೃತರಾಷ್ಟ್ರಂ ಚ ವಿದುರಾದೀಂಶ್ಚ ಸರ್ವಶಃ ॥ – ಮ.ಭಾ.ತಾ.ನಿ. (೨೮/೨೨೦)

ದುರ್ಯೋಧನನೇನೂ ಅಂತರಂಗದಿಂದ ಪಿತೃಭಕ್ತನಲ್ಲ. ಧೃತರಾಷ್ಟ್ರನನ್ನು ಎಂದೋ ಮೂಲೆಗೆ ಸೇರಿಸಿ ತಾನು ಸರ್ವಾಧಿಕಾರಿಯಾಗುತ್ತಿದ್ದ. ಆದರೂ ಅವನು ಹಾಗೆ ಮಾಡದಿರಲು ಅವನಿಗೆ ಪಾಂಡವರ ಮೇಲಿದ್ದ ಭಯ ಹಾಗೂ ಪಾಂಡವರಿಗೆ ಧೃತರಾಷ್ಟ್ರನ ಮೇಲಿದ್ದ ಗೌರವಗಳು ಕಾರಣವಾಗಿದ್ದವು. ಧೃತರಾಷ್ಟ್ರನನ್ನು ಮುಂದಿಟ್ಟುಕೊಂಡು ಸ್ವಕಾರ್ಯ ಸಾಧಿಸುವುದು ದುರ್ಯೋಧನನ ತಂತ್ರವಾಗಿತ್ತು. ತಂದೆಯ ಕುರುಡುತನದ ದುರ್ಲಾಭವನ್ನು ದುರ್ಯೋಧನ ಉದ್ದಕ್ಕೂ ಪಡೆಯುತ್ತಲೇ ಹೋಗುತ್ತಾನೆ. ಹೀಗಿದ್ದರೂ ದೊಡ್ಡಪ್ಪನಾದ ಧೃತರಾಷ್ಟ್ರ ಮಲತಾಯಿಧೋರಣೆಯಿಂದ ಪಾಂಡವರ ಮೇಲೆ ಸಾಕಷ್ಟು ಅನ್ಯಾಯವೆಸಗಿದ್ದ. ದುರ್ಯೋಧನನೂ ಕಲಿಯೇ ಆದ್ದರಿಂದ ಒಳಗಿನಿಂದಲೂ ಹೊರಗಿನಿಂದಲೂ ಕಲಿಯ ಬಾಧೆಗೆ ತುತ್ತಾದದ್ದು ಧೃತರಾಷ್ಟ್ರನ ದೌರ್ಭಾಗ್ಯ. ಅಂತಹ ಧೃತರಾಷ್ಟ್ರನ ಕೈಯಲ್ಲಿ ವಿದುರನು ಉಪಾಯವಾಗಿ ಪುಣ್ಯಕಾರ್ಯ ಮಾಡಿಸುವ ಪ್ರಸಂಗವೊಂದು ಹೀಗಿದೆ:

ದ್ರೌಪದೀ ಸ್ವಯಂವರದ ಬಳಿಕ ಪಾಂಡವರು ಜಯಶೀಲರಾಗುತ್ತಾರೆ, ದ್ರೌಪದಿಯನ್ನು ಪಡೆಯುತ್ತಾರೆ. ಈ ವಿಷಯವನ್ನೆಲ್ಲ ತಿಳಿದು ವಿದುರನು ಧೃತರಾಷ್ಟ್ರನಿಗೆ 'ನಿನ್ನ ಮಕ್ಕಳು ಉನ್ನತಿ ಹೊಂದುತ್ತಿರುವರು' ಎಂದು ಹೇಳುವನು.[೧] ತಮ್ಮನ ಮಕ್ಕಳು ತನ್ನ ಮಕ್ಕಳಿಗೆ ಸಮಾನ ಎಂಬ ಅಭಿಪ್ರಾಯದಲ್ಲಿ ಅವನ ಮಾತು ಅಸತ್ಯವೇನಾಗಿರಲಿಲ್ಲ. ಆದರೆ ಅರಗಿನ ಮನೆಯಲ್ಲಿ ಪಾಂಡವರು ಮೃತರಾಗಿದ್ದರೆಂದೇ ತಿಳಿದಿದ್ದ ಧೃತರಾಷ್ಟ್ರನು ತನ್ನ ಮಕ್ಕಳಾದ ದುರ್ಯೋಧನಾದಿಗಳೇ ಸ್ವಯಂವರದಲ್ಲಿ ಜಯಶಾಲಿಗಳಾಗಿ ದ್ರೌಪದಿಯನ್ನು ಪಡೆದಿರುವರು ಎಂದು ಭ್ರಮಿಸುತ್ತಾನೆ. ದ್ರೌಪದಿಗೆ ಕೊಡಲೆಂದು, ವಿದುರನಿಗೆ ವಸ್ತ್ರಾಭರಣಗಳನ್ನು ಕೊಡುತ್ತಾನೆ. ಇದರಿಂದ ಧೃತರಾಷ್ಟ್ರನಿಗೆ ಸ್ವಲ್ಪವಾದರೂ ಪುಣ್ಯ ಬಂತು. ತದನಂತರವೇ 'ನಿನ್ನ ಮಕ್ಕಳೆಂದರೆ ಪಾಂಡವರು'[೨] ಎಂದು ವಿದುರನು ಸ್ಪಷ್ಟೀಕರಣ ನೀಡಿ ನಡೆದ ವೃತ್ತಾಂತವನ್ನೆಲ್ಲ ವಿಸ್ತಾರವಾಗಿ ತಿಳಿಸುವನು.

---

೧ ತತಃ ಪ್ರೀತಮನಾಃ ಕ್ಷತ್ತಾ ಧೃತರಾಷ್ಟ್ರಂ ವಿಶಾಂಪತೇ।
ಉವಾಚ ದಿಷ್ಟ್ಯಾ ಕುರವೋ ವರ್ಧಂತ ಇತಿ ವಿಸ್ಮಿತಃ॥ – ಮ.ಭಾ. (೧/೨೧೯/೧೫)

ಕೌರವ್ಯಾ ಇತಿ ಸಾಮಾನ್ಯಾನ್ನ ಮನ್ಯೇಥಾಸ್ತವಾತ್ಮಜಾನ್॥
ವರ್ಧಂತ ಇತಿ ಮದ್ವಾಕ್ಯಾದ್ವರ್ಧಿತಾಃ ಪಾಂಡುನಂದನಾಃ। – ಮ.ಭಾ. (೧/೨೧೯/೧೯,೨೦)

ಜ್ಞಾತ್ವಾ ಸಮಸ್ತಮಪಿ ತದ್ವಿದುರೋಽಗ್ರಜಂ ಸ್ವಂ
ವರ್ಧಂತ ಏವ ತನಯಾ ಭವತೋ ನರೇಂದ್ರ।
ಇತ್ಯಾಹ ಸೋಽಪಿ ಮುದಿತಃ ಸ್ವಸುತೇನ ಕೃಷ್ಣಾ
ಪ್ರಾಪ್ತೇತಿ ಭೂಷಣವರಾಣ್ಯದಿಶಚ್ಚ ವಾಸಃ॥
ಪಾರ್ಥಾ ಇತಿ ಸ್ಮ ವಿದುರೋಽವದತ್ .....। – ಮ.ಭಾ.ತಾ.ನಿ. (೧೯/೧೭೧,೧೭೨)

೨ ಶ್ರೀಕೃಷ್ಣನೂ ಧೃತರಾಷ್ಟ್ರನಿಗೆ 'ತವ ಸತ್ಸುತಾಯ' ಎಂದು ತಿಳಿಸುವಂತೆ (ಮ.ಭಾ.ತಾ.ನಿ. ೨೪/೬೪) ಇದು ಬಹಳ ಅರ್ಥಪೂರ್ಣವಾದ ಮಾತು.

ಧೃತರಾಷ್ಟ್ರನು ವಿದುರನ ಉಪಸ್ಥಿತಿಯಲ್ಲಿ ತನಗಿಷ್ಟವಿಲ್ಲದಿದ್ದರೂ ಪಾಂಡವರ ಗುಣಸಂಕೀರ್ತನೆ ಮಾಡುತ್ತಿದ್ದ.[೧] ಇದೇ ಕಾರಣಕ್ಕೇ '**ಸಂಗವಾಗಲಿ ಸಾಧುಸಂಗವಾಗಲಿ**' ಎನ್ನುವುದು.

ಧೃತರಾಷ್ಟ್ರನು ವಿದುರನನ್ನು ಅದೆಷ್ಟು ಹಚ್ಚಿಕೊಂಡಿದ್ದನು ಎಂಬುದಕ್ಕೆ ಈ ಮುಂದಿನ ಪ್ರಸಂಗವು (ಮ.ಭಾ. ೩/೪-೭) ಸಾಕ್ಷಿಯಾಗಿದೆ. ಪಾಂಡವರು ವನಕ್ಕೆ ಹೋದ ಮೇಲೆ 'ಈಗ ಮುಂದೇನು ಕೆಲಸ?' ಎಂದು ಧೃತರಾಷ್ಟ್ರನು ವಿದುರನನ್ನು ಕೇಳಿದ. 'ಅವರನ್ನು ಆಹ್ವಾನಿಸಿ, ಕೌರವರಿಂದ ಕ್ಷಮಾಯಾಚನೆ ಮಾಡಿಸಿ, ಅವರ ರಾಜ್ಯವನ್ನು ಹಿಂದಿರುಗಿಸುವುದೇ ಕೆಲಸ' ಎಂದು ವಿದುರನು ಸ್ಪಷ್ಟವಾಗಿ ಹೇಳಿದ. ಆಗ ಕೋಪಗೊಂಡ ಧೃತರಾಷ್ಟ್ರನು 'ನನ್ನ ಮಕ್ಕಳೆಂದರೆ ನಿನಗೆ ಆಗುವುದಿಲ್ಲ. ಅವರಿಗೆ ಸದಾ ವಿರೋಧಿಯಾಗಿರುವಿ. ನನಗೂ ನಿನ್ನಿಂದೇನೂ ಆಗಬೇಕಾದ್ದಿಲ್ಲ. ನಿನಗಿಷ್ಟವಿದ್ದರೆ ಇಲ್ಲಿ ಇರು; ಇಲ್ಲವೆಂದರೆ ಹೊರಟು ಹೋಗು' ಎಂದಾಗ ಸ್ವಾಭಿಮಾನಿಯಾದ ವಿದುರನು ಪಾಂಡವರಿದ್ದ ಕಾಮ್ಯಕವನಕ್ಕೆ ಹೋದನು. ಅವನ ಆಗಮನದಿಂದ ಪಾಂಡವರಿಗೂ ಸಂತೋಷವಾಯಿತು.[೨]

ವಿದುರನು ಹಾಗೆ ಹೋಗಲು ಇತ್ತ ಅವನ ವಿಯೋಗದಿಂದ ಬಳಲಿ ಮೂರ್ಛೆಗೊಂಡು ಧೃತರಾಷ್ಟ್ರನು ನೆಲದ ಮೇಲೆ ಬಿದ್ದ. ಬಹುಕಾಲದನಂತರ ಪುನಃ ಪ್ರಜ್ಞೆ ಬರಲು ನೆಲದಿಂದ ಮೇಲೆದ್ದು ಹತ್ತಿರದಲ್ಲೇ ಇದ್ದ ಸಂಜಯನನ್ನು ಕುರಿತು 'ನನ್ನ ತಮ್ಮನೂ ಗೆಳೆಯನೂ ಆದ ವಿದುರನು ಧರ್ಮದ ಸಾಕಾರಮೂರ್ತಿ. ಅವನಿಲ್ಲದೇ ನಾನು ಬದುಕುಳಿಯಲಾರೆ. ಕೂಡಲೇ ಅವನನ್ನು ಕರೆದುಕೊಂಡು ಬಾ' ಎಂದು ಆದೇಶಿಸಿದ. ಸಂಜಯನು ವಿದುರನಿದ್ದಲ್ಲಿಗೆ ಹೋಗಿ ಅವನಿಗೆ ಧೃತರಾಷ್ಟ್ರನ ಸಂವೇದನೆಯನ್ನು ತಿಳಿಸಿದ. ಆಗ ವಿದುರನು ಧರ್ಮರಾಜನನ್ನು ಒಪ್ಪಿಸಿ ಧೃತರಾಷ್ಟ್ರನ ಕಟುವಚನಗಳನ್ನೆಲ್ಲ ಮರೆತು ಸಜ್ಜನಿಕೆಯಿಂದ ಹಸ್ತಿನಾಪುರಕ್ಕೆ ತೆರಳಿ ಅಣ್ಣನನ್ನು ನಮಸ್ಕರಿಸುತ್ತಾನೆ. ಧೃತರಾಷ್ಟ್ರನೂ ಬಹಳ ಆನಂದದಿಂದ ವಿದುರನನ್ನು ಆಲಿಂಗಿಸಿಕೊಂಡು, ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ತಲೆಯನ್ನು ಮೂಸಿ, ತನ್ನ ನಿಷ್ಠುರ ನುಡಿಗಳಿಗೆ ಕ್ಷಮೆ ಕೋರುತ್ತಾನೆ. ವಿದುರನೂ ವಿನಯದಿಂದ

---

೧ ಅಹಮಪ್ಯೇವಮೇವೈತಚ್ಚಿಕೀರ್ಷಾಮಿ ಯಥಾ ಯುವಾಮ್ ।
ವಿವೇಕ್ತುಂ ನಾಹಮಿಚ್ಛಾಮಿ ತ್ವಾಕಾರಂ ವಿದುರಂ ಪ್ರತಿ ॥
ತತಸ್ತೇಷಾಂ ಗುಣಾನೇವ ಕೀರ್ತಯಾಮಿ ವಿಶೇಷತಃ । – ಮ.ಭಾ. (೧/೨೨೦/೨,೩)

೨ ಪಾರ್ಥೇಷು ಯಾತೇಷು ಕಿಮತ್ರ ಕಾರ್ಯಮಿತಿ ಸ್ಮ ಪೃಷ್ಟೋ ವಿದುರೋಽಗ್ರಜೇನ ।
ಆಹೂಯ ರಾಜ್ಯಂ ಪ್ರತಿಪಾದಯೇತಿ ಪ್ರಾಹೈನಮಾಹಾಥ ರುಷಾಽಽಂಬಿಕೇಯಃ ॥
ಜ್ಞಾತಂ ಪ್ರತೀಪೋಽಸಿ ಮಮಾತ್ಮಜಾನಾಂ ನ ಮೇ ತ್ವಯಾ ಕಾರ್ಯಮಿಹಾಸ್ತಿ ಕಿಂಚಿತ್ ।
ಯಥೇಷ್ಟತಸ್ತಿಷ್ಠ ವಾ ಗಚ್ಛ ವೇತಿ ಪ್ರೋಕ್ತೋ ಯಯೌ ವಿದುರಃ ಪಾಂಡುಪುತ್ರಾನ್ ॥
– ಮ.ಭಾ.ತಾ.ನಿ. (೨೨/೧೦-೧೧)

ಹಿತನುಡಿಗಳನ್ನಾಡುತ್ತಾನೆ. ವಿದುರ ಮರಳಿ ಬಂದದ್ದನ್ನೂ ಧೃತರಾಷ್ಟ್ರನು ಅವನೊಂದಿಗೆ ಇನ್ನೂ ಹತ್ತಿರವಾದದ್ದನ್ನೂ ಕಂಡ ದುರ್ಯೋಧನಾದಿಗಳು ಮಾತ್ರ ಸಹಿಸದಾದರು.[೧]

ಇದರಲ್ಲಿ ಧೃತರಾಷ್ಟ್ರನ ಸಜ್ಜನಿಕೆ, ವಿದುರನ ಮೇಲೆ ಅವನಿಗಿದ್ದ ನೈಜನಂಟು, ಬಂಧುಗಳಲ್ಲಿರಬೇಕಾದ ಭದ್ರ ಬಾಂಧವ್ಯ, ಹಾಗೂ ಪ್ರಜ್ಞಾವಂತನೊಬ್ಬನ ಉಪಸ್ಥಿತಿಯನ್ನು ರಾಜನಾದವನು ಕಳೆದುಕೊಳ್ಳಬಾರದೆಂಬ ರಾಜನೀತಿ - ಇದೆಲ್ಲದರ ಬಗ್ಗೆಯೂ ಪಾಠ ಕಲಿಯುವುದಿದೆ.

ಕುರುಕ್ಷೇತ್ರ ಯುದ್ಧದ ಬಳಿಕವೂ ಧೃತರಾಷ್ಟ್ರನನ್ನು ಯಾರೂ ಕಡೆಗಣಿಸಲಿಲ್ಲ. ಅಷ್ಟೇ ಅಲ್ಲ, ಪಾಂಡವರೂ ಹಾಗೂ ಅವರಿಂದ ಪ್ರೇರಿತರಾದ ಯುಯುತ್ಸು, ಸಂಜಯ ಹಾಗೂ ಪ್ರಧಾನವಾಗಿ ವಿದುರ ದೇವತೆಯನ್ನೆಂಬಂತೆ ಉಪಚರಿಸಿದರು.[೨] ತನ್ನ ಸ್ವಂತ ನೂರು ಮಕ್ಕಳಿಂದ ಜೀವನದಲ್ಲಿ ಒಮ್ಮೆಯೂ ಅಂತಹ ಸುಖವನ್ನು ಕಾಣದಾಗಿದ್ದ ಧೃತರಾಷ್ಟ್ರನಿಗೆ ಆ ದಿನಗಳು ಸ್ವರ್ಗಸುಖವನ್ನು ನೀಡುತ್ತಿದ್ದವು.

ನಿತ್ಯವೂ ಹಿರಿಯರನ್ನು ಸೇವಿಸುವವರಿಗೆ ಕೀರ್ತಿ, ಆಯುಷ್ಯ, ಯಶಸ್ಸು ಹಾಗೂ ಬಲ ಹೆಚ್ಚುತ್ತದೆ ಎಂದು ವಿದುರನು ತಾನು ವಿದುರನೀತಿಯಲ್ಲಿ ಹೇಳಿದ್ದಕ್ಕೆ ತಾನೇ ಜೀವಂತ ನಿದರ್ಶನವಾಗುತ್ತಾನೆ:

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ।
ಚತ್ವಾರಿ ಸಂಪ್ರವರ್ಧಂತೇ ಕೀರ್ತಿರಾಯುರ್ಯಶೋ ಬಲಮ್ ॥[೩]

---

೧ ತಸ್ಮಿನ್ ಗತೇ ಭ್ರಾತೃವಿಯೋಗಕರ್ಶಿತಃ ಪಪಾತ ಭೂಮೌ ಸಹಸೈವ ರಾಜಾ।
ಸಂಜ್ಞಾಮವಾಪ್ಯಾದಿಶದಾಶು ಸಂಜಯಂ ಜೀವಾಮಿ ಚೇದಾಶು ಮಮಾನಯಾನುಜಮ್ ॥
ಇತೀರಿತಃ ಸಂಜಯಃ ಪಾಂಡವೇಯಾನ್ ಪ್ರಾಪ್ಯಾನಯದ್ವಿದುರಂ ಶೀಘ್ರಮೇವ।
ಸೋಽಭ್ಯಾಗತಃ ಕ್ಷಿಪ್ರಮಪಾಸ್ತದೋಷೋ ಜ್ಯೇಷ್ಠಂ ವವಂದೇಽಥ ಸ ಚೈನಮಾಶ್ಲಿಷತ್ ॥
ಅಂಕಂ ಸಮಾರೋಪ್ಯ ಸ ಮೂರ್ಧ್ನಿ ಚೈನಮಾಘ್ರಾಯ ಲೇಭೇ ಪರಮಾಂ ಮುದಂ ತದಾ।
ಕ್ಷತ್ತಾರಮಾಯಾಂತಮುದೀಕ್ಷ್ಯ ಸರ್ವೇ ಸಸೌಬಲಾ ಧಾರ್ತರಾಷ್ಟ್ರಾ ಅಮರ್ಷಾತ್ ॥
- ಮ.ಭಾ.ತಾ.ನಿ. (೨೨/೧೨-೧೪)

೨ ವಿದುರಃ ಸಂಜಯಶ್ಚೈವ ಯುಯುತ್ಸುಶ್ಚೈವ ಕೌರವ।
ಉಪಾಸತೇ ಸ್ಮ ತಂ ವೃದ್ಧಂ ಹತಪುತ್ರಂ ಜನಾಧಿಪಮ್ ॥ -ಮ.ಭಾ. (೧೫/೧/೧೨)
... ಯುಯುತ್ಸುಃ ಸಸಂಜಯೋ ವಿದುರಶ್ಚಾಂಬಿಕೇಯಮ್।
ಪಾರ್ಥೇರಿತಾಃ ಪರ್ಯಚರನ್ ಸ್ವಯಂ ಚ ಸರ್ವೇ ಯಥಾ ದೈವತಮಾದರೇಣ ॥
- ಮ.ಭಾ.ತಾ.ನಿ. (೩೦/೨೩)

೩ ಮ.ಭಾ. ೫/೩೯/೭೫

ಆದರೆ ಧೃತರಾಷ್ಟ್ರ ಮಾತ್ರ ಅವರೆಲ್ಲರ ಸೇವೆಯನ್ನು ಸ್ವೀಕರಿಸುತ್ತಾ, ವಿಷಯಲೋಲುಪನಾಗಿ ಆರಾಮವಾಗಿ ಕಾಲಕಳೆಯತೊಡಗಿದ್ದನ್ನು ಗಮನಿಸಿದ ಭೀಮನಿಗೆ ಅವನ ಮೇಲೆ ಅನುಕಂಪ ಹುಟ್ಟಿತು. ಹೀಗೇ ಮುಂದುವರೆದಲ್ಲಿ ಧೃತರಾಷ್ಟ್ರನು ಮಾಡಿದ ಮಹಾಪಾಪಗಳು ಪರಿಹಾರವಾಗವು ಎಂದು ಎಣಿಸಿ, ಅವನನ್ನು ತೀಕ್ಷ್ಣತಪಸ್ಸಿಗೆ ಅಣಿಮಾಡಲು ಆತನಿಗೆ ವೈರಾಗ್ಯ ಉಂಟಾಗುವ ಪರಿಯಲ್ಲಿ ವರ್ತಿಸಲಾರಂಭಿಸಿದ (ಮ.ಭಾ. ೧೫/೩).

ಭೀಮನ ಅಂತಹ ವಿವಿಧ ವರ್ತನೆಗಳಿಂದ ಹಾಗೂ ವಾಗ್ಬಾಣಗಳಿಂದ ಧೃತರಾಷ್ಟ್ರನಿಗೆ ಕ್ರಮೇಣ ವಿರಕ್ತಿಯು ಜನಿಸತೊಡಗಿತಾದರೂ ಭೀಮನ ಮೇಲೆ ಅವನು ಅಷ್ಟಾಗಿ ಸಂತೋಷಗೊಳ್ಳುತ್ತಿರಲಿಲ್ಲ. ಆ ವಿರಕ್ತಿಯನ್ನು ಮತ್ತಷ್ಟು ಬೆಳೆಸಲು, ಹಾಗೂ ಭೀಮನ ಬಗ್ಗೆ ಯಥಾರ್ಥಜ್ಞಾನವನ್ನು ಮೂಡಿಸಲು, (ಭಾಗವತ ೧/೧೨/೧೯-೨೮) ವಿದುರನು ಅವನಿಗೆ 'ಅಯ್ಯಾ ರಾಜ! ಎಷ್ಟೊಂದು ಬದುಕುವ ಹಂಬಲ ನಿನಗೆ. ಆ ಹಂಬಲದಿಂದಲೇ, ಭೀಮ ಹಾಕಿದ ಭಿಕ್ಷೆ ತಿನ್ನುವ ನಿನ್ನದು ನಾಯಿಪಾಡಾಗಿದೆ. ಅವನಿಗೆ ಬೆಂಕಿ ಹಾಕಿ, ವಿಷ ಹಾಕಿ, ಹೆಂಡತಿಯನ್ನು ಕೆಣಕಿ, ರಾಜ್ಯ ಮತ್ತು ಧನಗಳನ್ನು ಕಸಿದು, ಮಾಡಬಾರದ ಅಪಚಾರಗಳನ್ನೆಲ್ಲ ಮಾಡಿರುವ ನೀನು ಆತತಾಯಿಯೇ ಸರಿ. ಹಿರಿಯನೆಂದೂ ನೋಡದೇ ವೃದ್ಧನೆಂದೂ ನೋಡದೇ ಗುಣವಂತನೆಂದೂ ನೋಡದೇ ಆತತಾಯಿಯನ್ನು ಕೊಲ್ಲಬೇಕೆಂದಿರುವಾಗ (ಮ.ಭಾ. ೬/೧೦೭/೧೦೧) ಅಂತಹದ್ದೇನೂ ಮಾಡದೇ ನಿನ್ನನ್ನು ಇಷ್ಟೊಂದು ಉಪಚರಿಸಿದ್ದು ಭೀಮನ, ಪಾಂಡವರ ದೊಡ್ಡಸ್ತಿಕೆಯೇ ಹೊರತು ಬೇರೇನಲ್ಲ. ವಿಷಯಗಳಲ್ಲಿ ತೊಳಲಾಡುತ್ತಿದ್ದ ನಿನ್ನಲ್ಲಿ ವೈರಾಗ್ಯವನ್ನು ಉತ್ಪಾದಿಸಿ ಉಪಕರಿಸಲೆಂದೇ ಭೀಮನು ನಿನ್ನ ರುಚಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದಾನೆ. ಹೀಗೆ ಆತ ಮಾಡಿದ್ದರಲ್ಲಿ ಮತ್ತು ಮಾತನಾಡಿದ್ದರಲ್ಲಿ ಅಪರಾಧದ ಸೋಂಕೂ ಇಲ್ಲದ್ದರಿಂದ ಅವನ ಮೇಲಿನ ದ್ವೇಷವನ್ನೂ ವಿಷಯಗಳ ಮೇಲಿನ ರಾಗವನ್ನೂ ತ್ಯಜಿಸಿ ತೀರ್ಥಸೇವಕನಾಗಿ ಶ್ರೀಹರಿಯನ್ನು ತಪಸ್ಸಿನಿಂದ ಆರಾಧಿಸಿ

---

೧ ತಚ್ಛ್ರುತ್ವೋತ್ಪನ್ನನಿರ್ವೇದಂ ಕ್ಷತ್ತಾ ಜ್ಯೇಷ್ಠಸ್ಯ ವರ್ಧಯನ್ ।
ಉವಾಚ ಜೀವಿತಾಶಾ ತೇ ನನು ರಾಜನ್ ಗರೀಯಸೀ ॥
ಅಹೋ ಗರೀಯಸೀ ಜಂತೋರ್ಜೀವಿತಾಶಾ ಯಯಾ ಭವಾನ್ ।
ಭೀಮಾಪವರ್ಜಿತಂ ಪಿಂಡಮಾದತ್ತೇ ಗೃಹಪಾಲವತ್ ॥
ನ ಚಾಪರಾಧೋ ಭೀಮಸ್ಯ ಬ್ರುವತಸ್ತ್ವಾಮಿದಂ ವಚಃ ।
ಅಗ್ನಿರ್ನಿಸೃಷ್ಟೋ ದತ್ತಶ್ಚ ಗರೋ ದಾರಾಶ್ಚ ದೂಷಿತಾಃ ।
ಹೃತಂ ಕ್ಷೇತ್ರಂ ಧನಂ ಯಸ್ಯ ಕಿಂ ಭೀಮೇನ ಕೃತಂ ತ್ವಯಿ ॥
ಅಲಮಾಸಜ್ಜತಸ್ತೇದ್ಯ ನಿರ್ವೇದಕರಮೀರಿತಮ್ ।
ಉಪಕಾರಾಯ ಭೀಮೇನ ತವ ದ್ವೇಷಂ ತ್ಯಜಾತ್ರ ತತ್ ॥
ವಿಮುಚ್ಯ ದ್ವೇಷಕಾಮೌ ತ್ವಂ ವನೇ ತೀರ್ಥನಿಷೇವಕಃ ।
ತಪಸಾऽऽರಾಧಯ ಹರಿಂ ತತಃ ಪೂತೋ ಭವಿಷ್ಯಸಿ ॥ – ಮ.ಭಾ.ತಾ.ನಿ. (೩೧/೧೪-೧೮)

ಪವಿತ್ರನಾಗು' ಎಂದು ಬೋಧನೆ ನೀಡುತ್ತಾನೆ. ವಿದುರನ ಈ ಮಾತುಗಳು ಭೀಮಸೇನನ ಮಾತುಗಳಿಗೆ ವಿವರಣೆಯ ರೂಪವಾಗಿದ್ದು ಧೃತರಾಷ್ಟ್ರನಿಗೆ ಅವು ತಿಳಿಯುವಂತಾಗುತ್ತದೆ. ಸಂಗ್ರಹವಾಗಿ, ಭೀಮನ ಮಾತು ತತ್ತ್ವಶಾಸ್ತ್ರವಾದರೆ ಯಮಧರ್ಮನಾದ ವಿದುರನ ಮಾತು ಧರ್ಮಶಾಸ್ತ್ರವೆನಿಸುತ್ತದೆ.

ವನಕ್ಕೆ ತೆರಳಲು ನಿಶ್ಚಯಿಸಿ, ಎಲ್ಲರ ಅನುಜ್ಞೆ ಪಡೆದ ಮೇಲೆ (ಮ.ಭಾ. ೧೫/೧೨-೧೪) ಧೃತರಾಷ್ಟ್ರನು ತನ್ನ ಮಕ್ಕಳ ಶ್ರಾದ್ಧ ಮಾಡಲು ಧನವನ್ನು ಕೋರಿ ವಿದುರನ ಮೂಲಕ ಪಾಂಡವರಿಗೆ ಹೇಳಿ ಕಳುಹಿಸುತ್ತಾನೆ.[೧] ಶುದ್ಧಭಾಗವತಧರ್ಮದಲ್ಲಿಯೇ ನಿರತನಾದ ಭೀಮನು ಅಯೋಗ್ಯರಾದ ದುರ್ಯೋಧನಾದಿಗಳಿಗೆಂದು ವಿನಿಯೋಗ ಹೊಂದುತ್ತದೆಯಾದ್ದರಿಂದ ಧನ ನೀಡಲು ಸರ್ವಥಾ ನಿರಾಕರಿಸುತ್ತಾನೆ. ಆದರೂ ಧರ್ಮರಾಜ ಹಾಗೂ ಅರ್ಜುನರು ರಾಜ್ಯದ ಕೋಶದಿಂದ ಹೊರಪಟ್ಟ, ದಾನ ಹಾಗೂ ಭೋಗಕ್ಕೆಂದು ಇರುವ, ತಮ್ಮ ಸ್ವಂತಧನವನ್ನು ನೀಡುವರು; ತೀರ್ಥರೂಪನು ಪರಮಧಾರ್ಮಿಕನಾದ ಭೀಮನಲ್ಲಿ ಕೋಪಗೊಳ್ಳದ ಹಾಗೆ ನಿರ್ವಹಿಸಲು ವಿದುರನನ್ನು ವಿನಂತಿಸುವರು. ವಿದುರನು ಧನವನ್ನು ಒಯ್ದು ಧೃತರಾಷ್ಟ್ರನಿಗೆ 'ಯುಧಿಷ್ಠಿರ ಮತ್ತು ಅರ್ಜುನರು ನಿನ್ನ ಮೇಲಿನ ಬಹಳವಾದ ಗೌರವದಿಂದ, ಧಾರ್ಮಿಕರೇ ಆಗಿದ್ದರೂ ಲೋಕದ ಮೇಲೆ ದಯಾಪರರಾದ್ದರಿಂದ ಧನ ನೀಡಿರುವರು. ಆದರೂ ನಿನ್ನ ಆಜ್ಞೆಯಿಂದ ಭೀಮನು ಅತಿಯಾದ ಸಂತೋಷವನ್ನೇನೂ ಹೊಂದಲಿಲ್ಲ. ಅವನು ಶುದ್ಧವಾದ ಕ್ಷತ್ರಿಯಧರ್ಮದ ಪ್ರಕಾರ ಹೇಳಿರುವುದರಿಂದ ಅವನ ಮೇಲೆ ಕೋಪಗೊಳ್ಳಬೇಡ.' ಎಂದು ಹೇಳುತ್ತಾನೆ.[೨]

ವಿದುರನ ಈ ಮಾತನ್ನು ಕೇಳಿದ ಧೃತರಾಷ್ಟ್ರನಿಗೆ ಕೋಪ ಬರಲೂ ಇಲ್ಲ. ಧೃತರಾಷ್ಟ್ರನನ್ನು ಆ ಉನ್ನತ ಮನಃಸ್ಥಿತಿಗೆ ಕರೆದೊಯ್ದದ್ದು ಭೀಮ ಹುಟ್ಟಿಸಿದ್ದ ವೈರಾಗ್ಯವಾದರೆ ಇಂತಹ ಸೂಕ್ಷ್ಮ ವಿಚಾರದಲ್ಲಿ ಮಧ್ಯಸ್ಥಿಕೆ ವಹಿಸಿ, ಧೃತರಾಷ್ಟ್ರನಿಗೆ ಭೀಮನ ಬಗ್ಗೆ ಭಿನ್ನಾಭಿಪ್ರಾಯ ಬಾರದಂತೆ ನೋಡಿಕೊಂಡದ್ದು ವಿದುರ.

ಆ ಮುನ್ನ ಭೀಮನ ನೇರ ಮಾತುಗಳಿಗೆ ವ್ಯಾಖ್ಯೆ ನೀಡಿದ್ದ ವಿದುರ ಈಗ ಅವನ ವಿಶಿಷ್ಟವರ್ತನೆಯ ಆಂತರ್ಯವನ್ನು ತಿಳಿಸಿ ಧೃತರಾಷ್ಟ್ರನಿಗೆ ಭೀಮನೇ ಅವನ ನಿಜವಾದ

---

೧ ..... ವಿದುರಂ ಪುನಃ ॥ ಶ್ರಾದ್ಧಾಯ ವಿತ್ತಮಾಕಾಂಕ್ಷನ್ ಪ್ರೇಷಯಾಮಾಸ ..... ।
- ಮ.ಭಾ.ತಾ.ನಿ. (೩೧/೨೯-೩೦)

೨ ಯುಧಿಷ್ಠಿರಾರ್ಜುನೌ ಭಕ್ತಿಂ ನಿತರಾಂ ತ್ವಯಿ ಚಕ್ರತುಃ ॥
ನಾತಿಹೃಷ್ಟಸ್ತ್ವದಾಜ್ಞಾಯಾಂ ಭೀಮಸ್ತನ್ಮಾ ಕ್ರುಧೋಽತ್ರ ಚ ।
ಶುದ್ಧೇ ಕ್ಷತ್ರಿಯಧರ್ಮೇ ಹಿ ನಿರತೋ ಯದ್ವೃಕೋದರಃ ॥
ನೃಪಾರ್ಜುನೌ ಧರ್ಮರತಾವಪಿ ಲೋಕಕೃಪಾಪರೌ । - ಮ.ಭಾ.ತಾ.ನಿ. (೩೧/೩೯-೪೧)

ಹಿತೈಷಿ ಎಂಬುದನ್ನು ಮನವರಿಕೆ ಮಾಡಿಕೊಟ್ಟ. ವನವಾಸಕ್ಕೆ ಹೊರಟ ಭೀಮ ಎರಡು ಕೈಗಳನ್ನು ಎತ್ತಿ ನಡೆದಿದ್ದ ಭಾವವನ್ನು ವಿದುರ ತಿಳಿಸಿದ್ದನ್ನೂ ಇಲ್ಲಿ ಸ್ಮರಿಸಬಹುದು. ಹೀಗೆ ಭೀಮನ ಮನಸ್ಸನ್ನು ಅರ್ಥಮಾಡಿಕೊಳ್ಳಬಲ್ಲ ನೈಪುಣ್ಯ ವಿದುರನದಾಗಿತ್ತು.

ಭೀಮನ ಪ್ರಭಾವ ವಿದುರನ ಮೇಲೆ ಬಿದ್ದಿದ್ದಕ್ಕೆ ಸ್ಪಷ್ಟವಾದ ಇನ್ನೊಂದು ನಿದರ್ಶನವೂ ಇದಾಗಿದೆ. ದ್ಯೂತ ಮೊದಲಾದ ಪ್ರಸಂಗಗಳಲ್ಲಿ ಹಾದಿ ತಪ್ಪಿದ್ದ ಯುಧಿಷ್ಠಿರನನ್ನು ಅನುಸರಿಸುತ್ತಲೇ ಅವನಿಗೆ ಸೂಕ್ತರೀತಿಯಲ್ಲಿ ವಿವೇಕವನ್ನು ಬೋಧಿಸುತ್ತ ಅವನ ಒಳಿತಿಗೆ ಕಾರಣವಾದದ್ದು ಭೀಮಸೇನನಾದರೆ, ದಾರಿತಪ್ಪಿದ್ದ ಧೃತರಾಷ್ಟ್ರನನ್ನು ಅವನ ಜೊತೆಯೇ ಇದ್ದು ಕಾಲಕಾಲಕ್ಕೆ ಎಚ್ಚರಿಸುತ್ತ ಅವನ ಉದ್ಧಾರಕ್ಕೆ ಕಾರಣವಾದದ್ದು ವಿದುರ. ಇಬ್ಬರೂ ತಮ್ಮಂದಿರಾದರೂ ಅಣ್ಣಂದಿರೆನಿಸಿದರು.

## ಕೊನೆಯ ದಿನಗಳು

ಹೀಗೆ ಧೃತರಾಷ್ಟ್ರನಿಗೆ ಊರುಗೋಲಿನಂತಿದ್ದ ವಿದುರನು ಅವನು ವನಕ್ಕೆ ನಡೆಯುತ್ತಿದ್ದಂತೆ (ಮ.ಭಾ. ೧೫/೧೯-೨೦) ತಾನೂ ಹಿಂಬಾಲಿಸುತ್ತಾನೆ; ಹಾಗೂ ಅವನನ್ನು ಮುನ್ನಡೆಸುತ್ತಾನೆ; ವನದಲ್ಲಿ ಧೃತರಾಷ್ಟ್ರಾದಿಗಳೊಂದಿಗೆ ಕೂಡಿಕೊಂಡು ತಪಸ್ಸಿನಿಂದ ಒಡೆಯನಾದ ಶ್ರೀಹರಿಯನ್ನು ಆರಾಧಿಸುತ್ತಾನೆ.[೧] ಅಂತ್ಯಕಾಲದಲ್ಲಿ, ಮನೆಯಿಂದ ಹಾಗೂ ಅವುಗಳ ಮೇಲಿನ ಮೋಹದಿಂದ ಹೊರನಡೆಯಬೇಕೆನ್ನುವ ಭಾಗವತಧರ್ಮವನ್ನು ವಿದುರನು ಪಾಲಿಸುತ್ತಾನೆ: **ಗೃಹಾತ್ ಪ್ರವ್ರಜಿತೋ ಧೀರಃ** – ಭಾಗವತ (೨/೧/೧೬).

ವಿದುರನ ದೇಹತ್ಯಾಗದ ಘಟ್ಟವೂ (ಮ.ಭಾ. ೧೫/೨೮) ಬಹಳ ರೋಚಕವಾದದ್ದು. ಒಮ್ಮೆ ಪಾಂಡವರು ಪರಿವಾರದೊಂದಿಗೆ ಧೃತರಾಷ್ಟ್ರಾದಿಗಳನ್ನು ಕಾಣಲು ವನಕ್ಕೆ ಆಗಮಿಸಿದರು. ಪರಸ್ಪರ ಕುಶಲಪ್ರಶ್ನೆಯ ಬಳಿಕ ವಿದುರನನ್ನು ಕಾಣದಾಗಿ ಯುಧಿಷ್ಠಿರನು ಧೃತರಾಷ್ಟ್ರನನ್ನು ವಿಚಾರಿಸಿದನು. ಧೃತರಾಷ್ಟ್ರನು 'ವಿದುರನು ಘೋರ ತಪಸ್ಸನ್ನು ಆಶ್ರಯಿಸಿದ್ದಾನೆ. ಕಾಡಿನಲ್ಲಿ ಆಗಾಗ ಮಾತ್ರ ಕಾಣಿಸಿಕೊಳ್ಳುವನು' ಎನ್ನುತ್ತಿದ್ದಾಗಲೇ ತಪೋವೇಷದ ವಿದುರನು ದೂರದಲ್ಲಿ ಆಗಮಿಸುತ್ತಿದ್ದವನೇ ಜನರನ್ನು ಕಂಡಾಕ್ಷಣ ದಟ್ಟ ಅರಣ್ಯದ ಒಳಗೆ ಓಡಲಾರಂಭಿಸುತ್ತಾನೆ. ಧರ್ಮರಾಜನು ಒಬ್ಬಂಟಿಗನಾಗಿ ತನ್ನ ಪರಿಚಯವನ್ನು ಮಾಡಿಕೊಳ್ಳುತ್ತಾ ಅವನನ್ನು ಹಿಂಬಾಲಿಸುತ್ತಾನೆ. ವಿದುರನು ಏಕಾಂತ ಪ್ರದೇಶವೊಂದನ್ನು ತಲುಪಿ ಮರವೊಂದಕ್ಕೆ

---

೧ ಸಂಜಯೋ ವಿದುರಶ್ಚೈನಂ ಸಭಾರ್ಯಮನುಜಗ್ಮತುಃ। – ಮ.ಭಾ.ತಾ.ನಿ. (೩೧/೫೩)
ಸಂದರ್ಶಿತಪಥೋ ರಾಜಾ ಕುಂತೀವಿದುರಸಂಜಯೈಃ। – ಮ.ಭಾ.ತಾ.ನಿ. (೩೧/೫೫)
ಸಕ್ಷತೃಗಾಂಧಾರಿಪೃಥೇ ಸಸಂಜಯೇ
ತಪೋಭಿರಾರಾಧಯತಿ ಪ್ರಭುಂ ಹರಿಂ। – ಮ.ಭಾ.ತಾ.ನಿ. (೩೧/೫೭)

ಒರಗಿ ನಿಲ್ಲುತ್ತಾನೆ. ಅವನ ಎದುರು ಬಂದಂತಹ ಧರ್ಮರಾಜನ ನೋಟದೊಂದಿಗೆ ತನ್ನ ನೋಟವನ್ನು ಒಂದಾಗಿಸಿ ಯೋಗಬಲದಿಂದ ಅವನೊಂದಿಗೆ ಐಕ್ಯ ಹೊಂದುತ್ತಾನೆ.[೧]

ಮರಕ್ಕೆ ಒರಗಿದ ಆ ದೇಹವು ಪ್ರಾಣ ಕಳೆದುಕೊಂಡಿರುವುದನ್ನೂ ತನ್ನಲ್ಲಿ ಒಮ್ಮೆಲೇ ಬಲ ವರ್ಧಿಸಿದ್ದನ್ನೂ ಯುಧಿಷ್ಠಿರನು ಗಮನಿಸುತ್ತಾನೆ. ಆ ದೇಹಕ್ಕೆ ಸಂಸ್ಕಾರ ಮಾಡಲು ಹೊರಟಾಗ ಅಶರೀರವಾಣಿಯು ನುಡಿಯುತ್ತದೆ - 'ಯತಿ ಧರ್ಮವನ್ನಾಶ್ರಯಿಸಿದ ವಿದುರನ ದೇಹಕ್ಕೆ ದಹನ ಬೇಡ'.[೨] ವಿದುರನು ಯತಿಯಂತಿದ್ದದ್ದರ ಬಗ್ಗೆ ಮೊದಲಿನಿಂದಲೂ ಮಹಾಭಾರತದಲ್ಲಿ ಉಲ್ಲೇಖಗಳಿವೆ. ಉದಾಹರಣೆಗೆ, **ಕಾಮಕ್ರೋಧವಿವರ್ಜಿತಃ** - ಮ.ಭಾ. ೧/೧೧೫/೪೪, **ಲೋಭಕ್ರೋಧವಿವರ್ಜಿತಃ** - ಮ.ಭಾ. ೧/೧೧೮/೨೦, ಇತ್ಯಾದಿ.

ವಿದುರ ಹಾಗೂ ಧರ್ಮರಾಜರು ಇಬ್ಬರೂ ಯಮನ ಅವತಾರರಾಗಿದ್ದರಿಂದ ಒಬ್ಬೇ ದೇವತೆಯ ಒಂದು ಅವತಾರವು ಮತ್ತೊಂದರಲ್ಲಿ ಐಕ್ಯ ಹೊಂದಿದ ಕಥೆಯಿದು. ಹಾಗೆ ಒಂದು ಅವತಾರವು ಮತ್ತೊಂದರಲ್ಲಿ ಐಕ್ಯವಾಗುವುದಕ್ಕೆ ಕಾಲಿಯು ದ್ರೌಪದಿಯಲ್ಲಿ ಐಕ್ಯವಾದದ್ದೂ (ಮ.ಭಾ.ತಾ.ನಿ. ೩೨/೫೬), ನೀಲಾದೇವಿಯ ಪ್ರಸಂಗವೂ (ಮ.ಭಾ.ತಾ.ನಿ. ೨೦/೪೭) ದೃಷ್ಟಾಂತಗಳಾಗಿವೆ.

## ಉಪಸಂಹಾರ

ಮೂಲರೂಪದಲ್ಲಿ ಯಮಧರ್ಮನಾದ ವಿದುರನು ಭೂಲೋಕದಲ್ಲಿ ವ್ಯಾಸಪುತ್ರನಾಗಿ ಜನಿಸಿದ; ವೇದವ್ಯಾಸರಿಂದ ಸಂಸ್ಕಾರಗಳನ್ನು ಪಡೆದು ಸುಸಂಸ್ಕೃತನಾದ; ರಾಜಕೀಯಕ್ಕಿಳಿಯಲಿಲ್ಲ, ರಾಜ್ಯಭಾರದಲ್ಲಿ ತನ್ನ ಜವಾಬ್ದಾರಿಯನ್ನು ಮರೆಯಲಿಲ್ಲ ; ಅರಗಿನ ಮನೆ ಮೊದಲಾದ ಪ್ರಸಂಗಗಳಲ್ಲಿ ಕರ್ತವ್ಯಪ್ರಜ್ಞೆ, ಜಾಣ್ಮೆಗಳನ್ನು ಮೆರೆದ; ಧೃತರಾಷ್ಟ್ರನಿಗೆ ಕಾಲಕಾಲಕ್ಕೆ ಬುದ್ಧಿವಾದ ಹೇಳಿ ಕೌರವರ ದೌರ್ಜನ್ಯವನ್ನು ನಿಯಂತ್ರಿಸಿದ. ದ್ಯೂತ ಸಭೆಯಲ್ಲಿ ಭೀಷ್ಮಾದಿಗಳೂ ಧರ್ಮ

---

೧ ಕ್ಷತ್ತೈಕತಾಮತ್ರ ಯುಧಿಷ್ಠಿರೇಣ ಪ್ರಾಪ್ತಃ ..... । - ಮ.ಭಾ.ತಾ.ನಿ. (೩೧/೫೭-೫೮)
ಭಾರತೇ ಚೈಕವಿಂಶದ್ವರ್ಷಾತ್ ಪೂರ್ವಂ ವಿದುರಸ್ಯ ಯುಧಿಷ್ಠಿರಭಾವ ಉಕ್ತಃ।
- ಭಾ.ತಾ. - (೧/೧೨/೧೨)

ವಿದುರಸ್ತದ್ದಿದೃಕ್ಷಾರ್ಥಮಾಗತೇಷು ವನಂ ಪುರಾತ್ ।
ಪಾಂಡವೇಷು ತು ರಾಜಾನಂ ಪ್ರವಿಶ್ಯೈಕತ್ವಮಾಗತಃ ॥ (ಸ್ಕಾಂದೇ ಚ)
- ಭಾ.ತಾ. (೧/೧೨/೩೧)

೨ ಭೋ ಭೋ ರಾಜನ್ ನ ದಗ್ಧವ್ಯಮೇತದ್ವಿದುರಸಂಜ್ಞಕಮ್ ।
ಕಲೇವರಮಿಹೈವಂ ತೇ ಧರ್ಮ ಏಷ ಸನಾತನಃ ॥
ಲೋಕೋ ವೈಕರ್ತನೋ ನಾಮ ಭವಿಷ್ಯತ್ಯಸ್ಯ ಭಾರತ।
ಯತಿಧರ್ಮಮವಾಪ್ತೋಽಸೌ ನೈಷ ಶೋಚ್ಯಃ ಪರಂತಪ ॥ - ಮ.ಭಾ. (೧೫/೨೮/೩೨,೩೩)

ತಪ್ಪಿದಾಗ ಎದ್ದು ನಿಂತು ತನ್ನ ಶಕ್ತಿಗೆ ಸಾಧ್ಯವಾದಷ್ಟೂ ಪ್ರತಿಭಟಿಸಿದ; ವಿದುರನೀತಿಯನ್ನು ಉಪದೇಶಿಸಿದ; ವಿದುರನ ಸಾಧನೆಯ ಫಲಿತಾಂಶವೆಂಬಂತೆ ಶ್ರೀಕೃಷ್ಣನು ಅವನ ಆತಿಥ್ಯವನ್ನು ಸ್ವೀಕರಿಸಿದ; ಯುದ್ಧದ ಸಮಯದಲ್ಲಿ ಸ್ವಧರ್ಮ ಮೀರಿ ಯುದ್ಧಕ್ಕಿಳಿಯಲಿಲ್ಲ ; ತೀರ್ಥಯಾತ್ರಾಪರನಾಗಿ ಭಾಗವತಶ್ರವಣ ಮಾಡಿದ; ಯುದ್ಧದ ಬಳಿಕವೂ ಧೃತರಾಷ್ಟ್ರನ ಸೇವೆಗೆ ಕಟಿಬದ್ಧನಾಗಿ ನಿಂತ; ಭೀಮನ ಸಂದೇಶವನ್ನು ಧೃತರಾಷ್ಟ್ರನಿಗೆ ಯಥಾರ್ಥವಾಗಿ ರವಾನಿಸಿದ; ಧೃತರಾಷ್ಟ್ರನೊಂದಿಗೇ ವನಕ್ಕೆ ತೆರಳಿದ; ತಪಸ್ಸಿನಿಂದ ಶ್ರೀಹರಿಯನ್ನು ಆರಾಧಿಸಿ ಧರ್ಮರಾಜನೊಂದಿಗೆ ಒಂದಾದ. ಅಂತೂ ಯಮನು ವಿದುರನಾಗಿ ಅವತರಿಸಿದ್ದು ಸಾರ್ಥಕವಾಯಿತು.

ಧರ್ಮರಾಜನೂ ಧರ್ಮಿಷ್ಠನೇ ಆದರೂ ಆ ಧರ್ಮದ ನಿಷ್ಠುರ ಪ್ರತಿಪಾದನೆಯಲ್ಲಿ ಹಿಂಜರಿಯುವುದು ಅನೇಕ ಪ್ರಸಂಗಗಳಲ್ಲಿ ಕಾಣುತ್ತದೆ. ಆದರೆ ಯಾರ ಹಂಗಿಲ್ಲದ ಧರ್ಮ ಪ್ರತಿಪಾದನೆ ಹಾಗೂ ಅಧರ್ಮಖಂಡನೆಯಿಂದಾಗಿ, ಸ್ವರೂಪದಲ್ಲಿ ಒಂದೇ ಆಗಿದ್ದರೂ ಅವತಾರದಲ್ಲಿ, ಧರ್ಮರಾಜನಿಗಿಂತಲೂ ಧರ್ಮದೀಕ್ಷೆಯಲ್ಲಿ ಒಂದು ಕೈ ಮೇಲೆನಿಸುತ್ತಾನೆ ವ್ಯಾಸಪುತ್ರನಾದ ವಿದುರ.

ಭೀಮನದು ಎಲ್ಲರನ್ನೂ ಮೀರಿಸುವ ಭಾಗವತ ಧರ್ಮ, ಒಪ್ಪದಿದ್ದರೆ ಬಲದಿಂದಾದರೂ ಬಗ್ಗಿಸುವ ಪರಾಕ್ರಮ. ತನ್ನ ಇತಿಮಿತಿಗಳೊಳಗೇ ಅವನಿಂದ ಪ್ರಭಾವಿತನಾಗುತ್ತಾನೆ ವಿದುರ. ಶ್ರೀವೇದವ್ಯಾಸರ ಒಬ್ಬ ಪುತ್ರರಾದ ಶ್ರೀಶುಕಾಚಾರ್ಯರು ಭಾಗವತವನ್ನು ಉಪದೇಶಿಸಿ ಮಾನ್ಯರಾದರೆ, ಮತ್ತೊಬ್ಬ ಪುತ್ರನಾದ ವಿದುರ ಭಾಗವತವನ್ನು ಶ್ರವಣ ಮಾಡಿ ಮಾನ್ಯನಾಗಿದ್ದಾನೆ.

ಒಂದಲ್ಲ ಒಂದು ಕಾರಣಕ್ಕೆ ಧೃತರಾಷ್ಟ್ರ, ಭೀಷ್ಮ, ದ್ರೋಣ, ಅಶ್ವತ್ಥಾಮ, ಕೃಪ, ಮೊದಲಾದವರು ದುರ್ಯೋಧನನ ಕೈಗಳಿಗೆ ಸಿಲುಕುತ್ತಾರೆ. ವಿದುರ ಮಾತ್ರ ಸಿಲುಕುವುದಿಲ್ಲ. ರಾವಣನ ರಾಜ್ಯಭಾರದಲ್ಲೂ ರಾಕ್ಷಸರ ನಡುವೆಯೂ ಮತಿಗೆಡದೆ ಧರ್ಮದ ಪರ ನಿಂತದ್ದು ವಿಭೀಷಣನಾದರೆ, ದುರ್ಯೋಧನನ ರಾಜ್ಯಭಾರದಲ್ಲೂ ನರರಾಕ್ಷಸರ ನಡುವೆಯೂ ಮತಿಗೆಡದೆ ಧರ್ಮದ ಹಾಗೂ ಧರ್ಮರಾಜನ ಪರ ನಿಂತದ್ದು ವಿದುರ. ದುಷ್ಟ ಪರಿಸರವು ಕರ್ಣನಿಗೆ ಸಹವಾಸದೋಷಕ್ಕೆ ಕಾರಣವಾದರೆ, ವಿದುರನ ಸಾಧನೆಗೆ ವರದಾನವಾಗುತ್ತದೆ. ಅಸುರಾವೇಶ ಮೊದಲಾದವು ಒಂದೆಡೆಯಾದರೆ, ವರ್ಣಧರ್ಮವನ್ನು ಉಲ್ಲಂಘಿಸಿಯಾದರೂ ತನಗುಚಿತವಲ್ಲದ್ದನ್ನು ಪಡೆಯಬೇಕೆಂಬ ಭಾವನೆ, ತನ್ನ ವರ್ಣದ ಮೇಲಿನ ಕೀಳರಿಮೆಗಳು ಕರ್ಣನ ಸೋಲಿನಲ್ಲಿ ಪಾತ್ರವಹಿಸುತ್ತವೆ. ಈ ಅಂಶದಲ್ಲೂ, ಸ್ವರೂಪದಲ್ಲಿ ಕರ್ಣನಿಗೆ ಪುತ್ರನಾದರೂ, ವಿದುರ ಗೆಲ್ಲುತ್ತಾನೆ.

ಮೇಲಿನ ಎರಡು ಅಂಶಗಳಲ್ಲೂ ವಿದುರನನ್ನು ಅನುಕರಿಸಿದ್ದು ಯುಯುತ್ಸು. ಯೋಗ್ಯತೆ, ವಯಸ್ಸು ಮತ್ತು ಸ್ಥಾನಗಳಲ್ಲಿ ಯುಯುತ್ಸುವಿಗಿಂತ ಮಿಗಿಲಾಗಿದ್ದು ವಿದುರನು ಅವನಿಗಿಂತಲೂ ಯಶಸ್ವಿಯಾಗುತ್ತಾನೆ.

ತಮ್ಮ ಧರ್ಮವನ್ನೂ ಕರ್ತವ್ಯವನ್ನೂ ಇತಿಮಿತಿಯನ್ನೂ ಯಥಾರ್ಥವಾಗಿ ತಿಳಿದು, ಸಮಯಸಂದರ್ಭಗಳನ್ನು ಅಳೆದು, ಯುಕ್ತ ನಿರ್ಣಯ ಕೈಗೊಂಡು, ಯಥೋಚಿತವಾಗಿ ವರ್ತಿಸುವ ವಿಚಾರದಲ್ಲಿ ಇಂದಿಗೂ ವಿದುರನು ಪ್ರಜ್ಞಾವಂತರಲ್ಲಿ ಜೀವಂತನಾಗಿದ್ದಾನೆ.

ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾದಧರ್ಮಶೀಲಸ್ಯ ಸುದುಃಖಿತಸ್ಯ ।
ಅನುಗ್ರಹಾಯೇಹ ಚರಂತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ ॥[೧]

ಎಂಬುದಾಗಿ ಶ್ರೀಕೃಷ್ಣನಿಂದ, ಧರ್ಮದಿಂದ ವಿಮುಖರಾಗಿ ಬಳಲುವ ಜನರ ಅನುಗ್ರಹಕ್ಕಾಗಿ ಭಗವದ್ಭಕ್ತರ ಸಂಚಾರವೆಂದು ವಿದುರನು ಮೈತ್ರೇಯರಿಗೆ ಹೇಳಿದ್ದಕ್ಕೆ ಸ್ವತಃ ತನ್ನ ಬದುಕೇ ನಿದರ್ಶನವಾಗುತ್ತದೆ. ಒಟ್ಟಾರೆ, ಪರಮಭಾಗವತಶಿರೋಮಣಿಯಾದ ವಿದುರನ ಜೀವನ ಮತ್ತು ಉಪದೇಶಗಳು ನಮಗೆಲ್ಲ ಆದರ್ಶಪ್ರಾಯ. ಅವುಗಳ ಅಧ್ಯಯನವು ಹರಿಭಕ್ತಿಯಲ್ಲಿ ಪರ್ಯವಸಾನವಾಗುತ್ತದೆ:

ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ ॥[೨]

*****

॥ ಶ್ರೀಕೃಷ್ಣಾರ್ಪಣಮಸ್ತು ॥

---

೧ ಭಾಗವತ ೩/೫/೩

೨ ಮ.ಭಾ.ತಾ.ನಿ. ೨/೧೨೯

**ಪರಿಶಿಷ್ಟ ೧**

# ವಿದುರನೀತಿಯ ಸಂಗ್ರಹ

ಧೃತರಾಷ್ಟ್ರನಿಂದ ಪಾಂಡವರ ಬಳಿ ಸಂಧಿಗಾಗಿ ಕಳುಹಿಸಲ್ಪಟ್ಟ ಸಂಜಯನು, ಭೀಮದ್ರೌಪದಿಯರ ಉಪದೇಶದ ಪ್ರಭಾವದಿಂದ ಸುಸಜ್ಜಿತನಾಗಿದ್ದ ಧರ್ಮರಾಜನ ನಿಲುವಿಗೆ ನಿರುತ್ತರನಾದ. ಶ್ರೀಕೃಷ್ಣನೂ, ರಾಜ್ಯ ನೀಡದಿದ್ದಲ್ಲಿ ಯುದ್ಧವು ಅನಿವಾರ್ಯವೆಂದೇ ಘೋಷಿಸಿದ. ಹಿಂದಿರುಗಿದ ಸಂಜಯ ಧೃತರಾಷ್ಟ್ರನನ್ನು ನಿಂದಿಸಿ, ಧರ್ಮರಾಜನ ಮಾತುಗಳನ್ನು ಮರುದಿನ ಸಭೆಯಲ್ಲಿ ಹೇಳುವೆನೆಂದು ಹೇಳಿ ಹೊರಟುಹೋದ. ಇತ್ತ ಸಂಕಟದಿಂದಾಗಿ ಧೃತರಾಷ್ಟ್ರನಿಗೆ ರಾತ್ರಿ ನಿದ್ರೆ ಹತ್ತಲಿಲ್ಲ. ಎಂದಿನಂತೆ ವಿದುರನನ್ನು ಕರೆಸಿಕೊಂಡ. ಧರ್ಮವೇನೆಂಬುದರ ಬಗ್ಗೆ ಪ್ರಶ್ನಿಸಿದ. ಆ ಕೂಡಲೇ, ನಡುರಾತ್ರಿಯಲ್ಲೇ ವಿದುರ ಉದ್ಬೋಧಕವಾದ ಅನೇಕ ನೀತಿಗಳನ್ನು ಮತ್ತು ಕಥೆಗಳನ್ನು ಉಪದೇಶಿಸುತ್ತಾನೆ. ಇದೇ 'ವಿದುರನೀತಿ'.[೧]

ಪಾಂಡವರಿಗೆ ರಾಜ್ಯ ನೀಡಿದರೆ ಇಹದಲ್ಲೂ ಸುಖ, ಪರಕ್ಕೂ ಶ್ರೇಯಸ್ಸು; ನೀಡದೇ ಹಠಮಾಡಿದರೆ ಪರದ ಬಗ್ಗೆಯಂತೂ ಹೇಳುವ ಆವಶ್ಯಕತೆಯೇ ಇಲ್ಲ, ಇಲ್ಲೂ ಸಹ ಎಲ್ಲ ಪುತ್ರರ ನಾಶವು ಕಟ್ಟಿಟ್ಟ ಬುತ್ತಿ ಎನ್ನುವುದೇ ವಿದುರನೀತಿಯ ಸಾರ ಎಂಬುದಾಗಿ ಶ್ರೀಮದಾಚಾರ್ಯರು ಸಂಗ್ರಹಿಸಿರುವರು:

೧. **ನಿಂದಿತಃ ಸಂಜಯೇನಾಸಾವಾಹೂಯ ವಿದುರಂ ನಿಶಿ ।**
**ಪಪ್ರಚ್ಛ ಸೋಽವದದ್ಧರ್ಮಂ ಪಾರ್ಥಾನಾಂ ರಾಜ್ಯದಾಪನಮ್ ॥**
**ಐಹಿಕಸ್ಯ ಸುಖಸ್ಯಾಪಿ ಕಾರಣಂ ತದನಿಂದಿತಮ್ ।**
**ಅನ್ಯಥಾ ಸರ್ವಪುತ್ರಾಣಾಂ ನಾಶಂ ಧರ್ಮಾತಿಲಂಘನಮ್ ॥**[೨]

ವಿದುರನು ಪಾಂಡವರಿಗೆ ರಾಜ್ಯ ಹಿಂದಿರುಗಿಸಬೇಕು ಎಂಬ ಮುಖ್ಯ ಪ್ರಮೇಯವನ್ನು, ಅನೇಕ ನೀತಿಗಳನ್ನು ಹೇಳುವ ಮುಖಾಂತರ ಹೇಳುತ್ತಾನೆ. ಬಹಳ ಮೌಲಿಕವಾದಂತಹ ಆ ನೀತಿಗಳಿಗೆ ಸಾರ್ವಕಾಲೀನ ಮಹತ್ತ್ವವಿದೆ. ಅಲ್ಲಿನ ನೀತಿ ವಿದುರನ ಜೀವನರೀತಿಯೂ ಹೌದು. ಮಾನಸಿಕ ಕ್ಲೇಶಕ್ಕೊಳಗಾದವರಿಗಿವು ಔಷಧಿ; ಯಾರಿಗೇ ಆಗಲಿ ಬಲವರ್ಧಕ. ಇಲ್ಲಿ, ಆ ನೀತಿಗಳ ಮಹಾಸಾಗರದಿಂದ ಕೆಲವೇ ಕೆಲವು ಸೂಕ್ತಿರತ್ನಗಳನ್ನು ಆರಿಸಿ ಅವುಗಳ ತಾತ್ಪರ್ಯದೊಂದಿಗೆ ನೀಡಲಾಗಿದೆ.

---

೧ ಈ ಉಪದೇಶವಿರುವುದು ಮಹಾಭಾರತದ ಸಾರಪರ್ವಗಳಲ್ಲೊಂದಾದ ಉದ್ಯೋಗಪರ್ವದ ಉಪಪರ್ವವಾದ ಪ್ರಜಾಗರಪರ್ವದಲ್ಲಿ (ಅಧ್ಯಾಯ ೩೩-೪೦). ವಿದುರನೀತಿಗೆ ಶ್ರೀವಾದಿರಾಜಸ್ವಾಮಿಗಳಂತಹ (ಲಕ್ಷಾಲಂಕಾರದಲ್ಲಿ) ಹಾಗೂ ಶ್ರೀಸತ್ಯಧರ್ಮತೀರ್ಥರಂತಹ (ಉದ್ಯೋಗಪರ್ವ ವ್ಯಾಖ್ಯಾನದಲ್ಲಿ) ಯತಿವರೇಣ್ಯರು ವ್ಯಾಖ್ಯಾನ ಮಾಡಿರುವರು.

೨ ಮ.ಭಾ.ತಾ.ನಿ. (೨೪/೩೬-೩೭)

೨. ಅಭಿಯುಕ್ತಂ ಬಲವತಾ ದುರ್ಬಲಂ ಹೀನಸಾಧನಮ್ ।
ಹೃತಸ್ವಂ ಕಾಮಿನಂ ಚೋರಮಾವಿಶಂತಿ ಪ್ರಜಾಗರಾಃ ॥
– ಮ.ಭಾ. (೫/೩೩/೧೪)

ಬಲಿಷ್ಠನನ್ನು ಎದುರು ಹಾಕಿಕೊಂಡ ದುರ್ಬಲನಿಗೆ, ಸೂಕ್ತ ಸಿದ್ಧತೆಯಲ್ಲಿ ಕೊರತೆ ಇರುವವನಿಗೆ, ತನ್ನ ಸ್ವತ್ತನ್ನು ಕಳೆದುಕೊಂಡವನಿಗೆ, ಕಾಮಾತುರನಿಗೆ ಹಾಗೂ ಕಳ್ಳನಿಗೆ ನಿದ್ರೆ ಹತ್ತುವುದಿಲ್ಲ.

೩. ಯಸ್ಯ ಕೃತ್ಯಂ ನ ಜಾನಂತಿ ಮಂತ್ರಂ ವಾ ಮಂತ್ರಿತಂ ಪರೇ ।
ಕೃತಮೇವಾಸ್ಯ ಜಾನಂತಿ ಸ ವೈ ಪಂಡಿತ ಉಚ್ಯತೇ ॥
– ಮ.ಭಾ. (೫/೩೩/೨೫)

ಯಾವನ ಕಾರ್ಯವನ್ನಾಗಲಿ ಆಲೋಚನೆಯನ್ನಾಗಲಿ ಅವು ಪೂರೈಸುವ ಮುನ್ನ ಉಳಿದವರು ತಿಳಿಯರೋ, ಸಿದ್ಧಿಸಿದ ಮೇಲೆಯೇ ತಿಳಿಯುವರೋ ಅವನನ್ನೇ ಪಂಡಿತನೆನ್ನುವರು.

೪. ಯಸ್ಯ ಕೃತ್ಯಂ ನ ವಿಘ್ನಂತಿ ಶೀತಮುಷ್ಣಂ ಭಯಂ ರತಿಃ ।
ಸಮೃದ್ಧಿರಸಮೃದ್ಧಿರ್ವಾ ಸ ವೈ ಪಂಡಿತ ಉಚ್ಯತೇ ॥
– ಮ.ಭಾ. (೫/೩೩/೨೬)

ಯಾವನ ಕಾರ್ಯಕ್ಕೆ ಚಳಿಯಾಗಲೀ ಬಿಸಿಲಾಗಲೀ, ಅಂಜಿಕೆಯಾಗಲೀ, ವಿಷಯಾಸಕ್ತಿಯಾಗಲೀ, ಶ್ರೀಮಂತಿಕೆಯಾಗಲೀ, ದಾರಿದ್ರ್ಯವಾಗಲೀ ಅಡ್ಡಿ ಮಾಡುವುದಿಲ್ಲವೋ ಅವನನ್ನೇ ಪಂಡಿತನೆನ್ನುವರು.

೫. ಕ್ಷಿಪ್ರಂ ವಿಜಾನಾತಿ ಚಿರಂ ಶೃಣೋತಿ
ವಿಜ್ಞಾಯ ಚಾರ್ಥಂ ಭಜತೇ ನ ಕಾಮಾತ್ ।
ನಾಸಂಪೃಷ್ಟೋ ವ್ಯಪಯುಂಕ್ತೇ ಪರಾರ್ಥೇ
ತತ್ಪ್ರಜ್ಞಾನಂ ಪ್ರಥಮಂ ಪಂಡಿತಸ್ಯ ॥ – ಮ.ಭಾ. (೫/೩೩/೨೮)

ಬೇಗನೇ ಗ್ರಹಿಸುವವನು, ತಾಳ್ಮೆಗೆಡದೇ ಕಿವಿಗೊಡುವವನು, ವಿಷಯವನ್ನು ಆಸೆಯಿಂದಲ್ಲದೇ ವಿವೇಕದಿಂದ ಸೇವಿಸುವವನು, ಬೇಡಿಕೆ ಇಲ್ಲದಾಗ ಮತ್ತೊಬ್ಬರ ವಿಚಾರದಲ್ಲಿ ಮೂಗು ತೂರಿಸನು – ಇವೆಲ್ಲ ಪಂಡಿತನ ಮೊಟ್ಟ ಮೊದಲ ಚಿಹ್ನೆ.

೬. ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತುಮ್ ।
ಆಪತ್ಸು ಚ ನ ಮುಹ್ಯಂತಿ ನರಾಃ ಪಂಡಿತಬುದ್ಧಯಃ ॥
– ಮ.ಭಾ. (೫/೩೩/೩೦)

ಪಂಡಿತರಾದ ಮಾನವರು ತಮಗೆಟಕದ್ದನ್ನು ಬಯಸುವುದಿಲ್ಲ, ಕೈಮೀರಿದ್ದಕ್ಕೆ ಮರುಗುವುದಿಲ್ಲ, ಆಪತ್ತಿನಲ್ಲೂ ಕಳವಳಗೊಳ್ಳುವುದಿಲ್ಲ.

**೭. ಆರ್ಯಕರ್ಮಣಿ ರಜ್ಯಂತೇ ಭೂತಿಕರ್ಮಾಣಿ ಕುರ್ವತೇ ।**
**ಹಿತಂ ಚ ನಾಭ್ಯಸೂಯಂತಿ ಪಂಡಿತಾ ಭರತರ್ಷಭ ॥**

**- ಮ.ಭಾ. (೫/೩೩/೩೨)**

ಪಂಡಿತರು ಉತ್ತಮರ ಕಾರ್ಯದಲ್ಲಿ ಆಸಕ್ತರಾಗುತ್ತಾರೆ, ಸಂಪತ್ಕರವಾದ ಕಾರ್ಯಗಳಲ್ಲಿ ತೊಡಗುತ್ತಾರೆ, (ಏ)ಹಿತವಾದ ಕಾರ್ಯಕ್ಕೆ ಸಿಟ್ಟಾಗುವುದಿಲ್ಲ.

**೮. ನ ಹೃಷ್ಯತ್ಯಾತ್ಮಸಮ್ಮಾನೇ ನಾವಮಾನೇನ ತಪ್ಯತೇ ।**
**ಗಾಂಗೋ ಹ್ರದ ಇವಾಕ್ಷೋಭ್ಯೋ ಯಃ ಸ ಪಂಡಿತ ಉಚ್ಯತೇ ॥**

**- ಮ.ಭಾ. (೫/೩೩/೩೩)**

ಯಾವನು ತನ್ನ ಬಣ್ಣನೆಯಿಂದ ಹಿಗ್ಗುವುದಿಲ್ಲವೋ, ಅಪಮಾನದಿಂದ ಕುಗ್ಗುವುದಿಲ್ಲವೋ, ಗಂಗಾಪ್ರವಾಹದಂತೆ ಸ್ಥಿರನಾದ ಅವನನ್ನು ಪಂಡಿತನೆನ್ನುವರು.

**೯. ಸಂಸಾರಯತಿ ಕೃತ್ಯಾನಿ ಸರ್ವತ್ರ ವಿಚಿಕಿತ್ಸತೇ ।**
**ಚಿರಂ ಕರೋತಿ ಕ್ಷಿಪ್ರಾರ್ಥೇ ಸ ಮೂಢೋ ಭರತರ್ಷಭ ॥**

**- ಮ.ಭಾ. (೫/೩೩/೪೨)**

ಯಾವನು ಪುಣ್ಯಕೆಲಸಗಳನ್ನು ಇತರರಿಗಷ್ಟೇ ಉಪದೇಶಿಸುವನೋ (ಹೊರತು ತಾನು ಆಚರಿಸುವುದಿಲ್ಲವೋ), ಎಲ್ಲೆಡೆಯೂ ಸಂದೇಹ ಪಡುತ್ತಾನೋ, ಸ್ವಲ್ಪ ಸಮಯದ ಕೆಲಸಗಳಿಗೆ ಬಹುಸಮಯ ತೆಗೆದುಕೊಳ್ಳುತ್ತಾನೋ ಅವನು ಮೂಢ.

**೧೦. ಅನಾಹೂತಃ ಪ್ರವಿಶತಿ ಅಪೃಷ್ಟೋ ಬಹು ಭಾಷತೇ ।**
**ಅವಿಶ್ವಸ್ತೇ ವಿಶ್ವಸಿತಿ ಮೂಢಚೇತಾ ನರಾಧಮಃ ॥**

**- ಮ.ಭಾ. (೫/೩೩/೪೪)**

ಆಹ್ವಾನವಿಲ್ಲದೇ ಆಗಮಿಸುವ, ಕೇಳದಿದ್ದರೂ ಭಾಷಣ ಬಿಗಿಯುವ, ನಂಬಲನರ್ಹರನ್ನು ನಂಬುವ ನರಾಧಮನು ಮೂಢನು.

**೧೧. ಪರಂ ಕ್ಷಿಪತಿ ದೋಷೇಣ ವರ್ತಮಾನಃ ಸ್ವಯಂ ತಥಾ ।**
**ಯಶ್ಚ ಕ್ರುಧ್ಯತ್ಯನೀಶಾನಃ ಸ ಚ ಮೂಢತಮೋ ನರಃ ॥**

**- ಮ.ಭಾ. (೫/೩೩/೪೫)**

ಯಾವನು ತಾನು ದೋಷಿಯಾಗಿದ್ದು ಕೊಂಡು ಮತ್ತೊಬ್ಬರನ್ನು ದೂಷಿಸುವನೋ, ಕೈಲಾಗದೇ ಕೋಪಿಸಿಕೊಳ್ಳುವನೋ ಅಂತಹ ಮನುಷ್ಯನು ಮಹಾಮೂರ್ಖ.

**೧೨. ಏಕಯಾ ದ್ವೌ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು ।**
**ಪಂಚ ಜಿತ್ವಾ ವಿಜಿತ್ವಾ ಷಟ್ ಸಪ್ತ ಹಿತ್ವಾ ಸುಖೀ ಭವ ॥**
**- ಮ.ಭಾ. (೫/೩೩/೫೧)**

ಒಂದರಿಂದ ಎರಡನ್ನು ನಿಶ್ಚಯಿಸಿ ಮೂರನ್ನು ನಾಲ್ಕರಿಂದ ವಶಮಾಡಿಕೋ; ಐದನ್ನು ಗೆದ್ದು ಆರನ್ನು ಜಯಿಸಿ ಏಳನ್ನು ತೊರೆದು ಸುಖಿಯಾಗು.[೧]

**೧೩. ದ್ವೇ ಕರ್ಮಣೀ ನರಃ ಕುರ್ವನ್ನಸ್ಮಿನ್ ಲೋಕೇ ವಿರೋಚತೇ ।**
**ಅಬ್ರುವನ್ ಪರುಷಂ ಕಿಂಚಿದಸತೋಽನರ್ಚಯಂಸ್ತಥಾ ॥**
**- ಮ.ಭಾ. (೫/೩೩/೬೧)**

ಒರಟಾಗಿಯೂ ಮಾತನಾಡದೇ ಹಾಗಂತ ದುಷ್ಟರನ್ನೂ ಓಲೈಸದೇ ನಡೆಯುವವ ಈ ಲೋಕದಲ್ಲಿ ಮಿಂಚುತ್ತಾನೆ.

**೧೪. ನ್ಯಾಯಾಗತಸ್ಯ ದ್ರವ್ಯಸ್ಯ ಬೋದ್ಧವ್ಯೌ ದ್ವಾವತಿಕ್ರಮೌ ।**
**ಅಪಾತ್ರೇ ಪ್ರತಿಪತ್ತಿಶ್ಚ ಪಾತ್ರೇ ಚಾಪ್ರತಿಪಾದನಮ್ ॥**
**- ಮ.ಭಾ. (೫/೩೩/೬೬)**

ನ್ಯಾಯದಿಂದೊದಗಿದ ಸಂಪತ್ತಿನ ಎರಡು ದುರುಪಯೋಗಗಳೆಂದರೆ ಯೋಗ್ಯರಲ್ಲದವರಿಗೆ ದಾನ ಮಾಡುವುದು ಮತ್ತು ಯೋಗ್ಯರಿಗೆ ದಾನ ಮಾಡದಿರುವುದು.

---

೧ ಒಗಟಿನಂತಿರುವ ಈ ಶ್ಲೋಕವನ್ನು ಶ್ರೀವಾದಿರಾಜಸ್ವಾಮಿಗಳು ಲಕ್ಷಾಲಂಕಾರದಲ್ಲಿ ವಿಸ್ತೃತವಾಗಿ ವ್ಯಾಖ್ಯಾನಿಸಿರುವರು. ಅದರ ಸಾರಾಂಶ ಹೀಗಿದೆ: ಕರ್ಮಕಾಂಡರೂಪವಾದ ಒಂದು ಬಗೆಯ ವೇದವಚನದಿಂದ ಪ್ರವೃತ್ತಿನಿವೃತ್ತಿಮಾರ್ಗಗಳೆಂಬ ಎರಡನ್ನು ನಿಶ್ಚಯಿಸಿ, ಯಜ್ಞ, ಅಧ್ಯಯನ, ದಾನ ಮತ್ತು ತಪಸ್ಸೆಂಬ ನಾಲ್ಕು ನಿವೃತ್ತಿಧರ್ಮಗಳಿಂದ ಧರ್ಮ, ಅರ್ಥ ಮತ್ತು ಕಾಮ ಎಂಬ ಪ್ರವೃತ್ತಿಧರ್ಮಗಳನ್ನು ಗೆಲ್ಲು (ಅವುಗಳ ವಶವಾಗಬೇಡ); ಹಾಗೆಯೇ ಜ್ಞಾನಕಾಂಡರೂಪವಾದ ಮತ್ತೊಂದು ಬಗೆಯ ವೇದವಚನದಿಂದ ಜೀವ ಮತ್ತು ಪರಮಾತ್ಮ ಎಂಬ ಇಬ್ಬರ ಮಧ್ಯೆ ವೈಲಕ್ಷಣ್ಯ ಮತ್ತು ವೈಶಿಷ್ಟ್ಯಗಳನ್ನು ನಿಶ್ಚಯಿಸಿ, ವೈರಾಗ್ಯ, ಭಕ್ತಿ, ಉಪಾಸನೆ ಮತ್ತು ಅಪರೋಕ್ಷಜ್ಞಾನಗಳೆಂಬ ನಾಲ್ಕು ಸಾಧನಗಳಿಂದ ವೈಕುಂಠ, ಶ್ವೇತದ್ವೀಪ ಹಾಗೂ ಅನಂತಾಸನವೆಂಬ ಮೂರು ವಿಷ್ಣುಲೋಕಗಳನ್ನು ಪಡೆದುಕೋ; ಪಂಚ ಜ್ಞಾನೇಂದ್ರಿಯ ಮತ್ತು ಪಂಚ ಕರ್ಮೇಂದ್ರಿಯಗಳನ್ನು ಗೆದ್ದು, ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರಗಳೆಂಬ ಆರನ್ನು ಜಯಿಸಿ, ತ್ವಕ್, ಚರ್ಮ, ರುಧಿರ, ಮಾಂಸ, ಮೇದಸ್ಸು ಮಜ್ಜಾ ಮತ್ತು ಅಸ್ಥಿ ಎಂಬ ಏಳು ಧಾತುಗಳಿಂದ ಮುಕ್ತನಾಗಿ ಆನಂದಿಸು.
ವಿದುರನು ಒಗಟಿನಂತಹ ಇಂತಹ ಮಾತುಗಳನ್ನಾಡಿದರೆ, ಕಲಿಯುಗದಲ್ಲಿ ಕನಕದಾಸರು ಅನೇಕ ಮುಂಡಿಗೆಗಳನ್ನು ರಚಿಸಿರುವರು. ಇದೂ ಅವರಿಬ್ಬರ ನಡುವಿನ ಸಾಮ್ಯಾಂಶ.

೧೫. ಷಡ್ದೋಷಾಃ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ ।
ನಿದ್ರಾ ತಂದ್ರಾ ಭಯಂ ಕ್ರೋಧ ಆಲಸ್ಯಂ ದೀರ್ಘಸೂತ್ರತಾ ॥
- ಮ.ಭಾ. (೫/೩೩/೮೫)

ನಿದ್ರೆ, ಆಯಾಸ, ಭಯ, ಕೋಪ, ಸೋಮಾರಿತನ ಮತ್ತು ತಡಮಾಡುವಿಕೆ ಎಂಬ ಆರು ದೋಷಗಳನ್ನು ಈ ಲೋಕದಲ್ಲಿ ಐಶ್ವರ್ಯ ಬಯಸುವವನು ತ್ಯಜಿಸಬೇಕು.

೧೬. ನ ರಾಜ್ಯಂ ಪ್ರಾಪ್ತಮಿತ್ಯೇವ ವರ್ತಿತವ್ಯಮಸಾಂಪ್ರತಮ್ ।
ಶ್ರಿಯಂ ಹ್ಯವಿನಯೋ ಹಂತಿ ಜರಾ ರೂಪಮಿವೋತ್ತಮಮ್ ॥
- ಮ.ಭಾ. (೫/೩೪/೧೨)

ರಾಜ್ಯವು ಕೈವಶವಾಗಿದೆ ಎಂದಾಕ್ಷಣ ಅನುಚಿತವಾಗಿ ವರ್ತಿಸಕೂಡದು. ಉತ್ತಮ- ವಾದ ರೂಪವನ್ನು ಮುಪ್ಪು ಕೊಂದಂತೆ ಅವಿನಯವು ಸಂಪತ್ತನ್ನು ನಾಶಪಡಿಸುತ್ತದೆ.

೧೭. ಯಥಾ ಮಧು ಸಮಾದತ್ತೇ ರಕ್ಷನ್ ಪುಷ್ಪಾಣಿ ಷಟ್ಪದಃ ।
ತದ್ವದರ್ಥಾನ್ ಮನುಷ್ಯೇಭ್ಯ ಆದದ್ಯಾದವಿಹಿಂಸಯಾ ॥
- ಮ.ಭಾ. (೫/೩೪/೧೭)

ದುಂಬಿಯು ಹೂಗಳನ್ನು ಹಾಳುಗೆಡವದೇ ಜೇನು ಸಂಗ್ರಹಿಸುವಂತೆ (ರಾಜನು) ಹಿಂಸಿಸದೇ ಜನತೆಯಿಂದ ಧನವನ್ನು (ಕರವನ್ನು/ಪ್ರಯೋಜನವನ್ನು) ಪಡೆಯಬೇಕು.

೧೮. ಕಿಂ ನು ಮೇ ಸ್ಯಾದಿದಂ ಕೃತ್ವಾ ಕಿಂ ನು ಮೇ ಸ್ಯಾದಕುರ್ವತಃ ।
ಇತಿ ಕರ್ಮಾಣಿ ಸಂಚಿಂತ್ಯ ಕುರ್ಯಾದ್ವಾ ಪುರುಷೋ ನ ವಾ ॥
- ಮ.ಭಾ. (೫/೩೪/೧೯)

ಮನುಷ್ಯನು ಕೆಲಸಗಳನ್ನು ಮಾಡಲು ಅಥವಾ ಬಿಡಲು, ಇದನ್ನು ಮಾಡುವುದರಿಂದ ತನಗೆ ಏನಾದೀತು, ಮಾಡದಿದ್ದರೆ ಏನಾದೀತು ಎಂದು ಚೆನ್ನಾಗಿ ಆಲೋಚಿಸಬೇಕು.

೧೯. ಯಸ್ಮಾತ್ ತ್ರಸ್ಯಂತಿ ಭೂತಾನಿ ಮೃಗವ್ಯಾಧಾನ್ಮೃಗಾ ಇವ ।
ಸಾಗರಾಂತಾಮಪಿ ಮಹೀಂ ಲಬ್ಧ್ವಾ ಸ ಪರಿಹೀಯತೇ ॥
- ಮ.ಭಾ. (೫/೩೪/೨೭)

ಬೇಟೆಗಾರನಿಗೆ ಜಿಂಕೆಯಂತೆ ಯಾವನಿಂದ ಜೀವಿಗಳು ಹೆದರುವರೋ ಅವನು ಸಮುದ್ರದವರೆಗಿನ ಎಲ್ಲ ಭೂಮಿಯನ್ನು ಪಡೆದರೂ ವ್ಯರ್ಥ.

೨೦. ಅಪ್ಯುನ್ಮತ್ತಾತ್ ಪ್ರಲಪತೋ ಬಾಲಾಚ್ಚ ಪರಿಜಲ್ಪತಃ ।
ಸರ್ವತಃ ಸಾರಮಾದದ್ಯಾದಶ್ಮಭ್ಯ ಇವ ಕಾಂಚನಮ್ ॥
- ಮ.ಭಾ. (೫/೩೪/೩೩)

ಹುಚ್ಚನಿಂದಲೂ, ರೋದಿಸುವವನಿಂದಲೂ, ಶಿಶುವಿನಿಂದಲೂ, ವಟಗುಟ್ಟು-ವವನಿಂದಲೂ, ಎಲ್ಲೆಡೆಯಿಂದಲೂ ಸಾರಮಾತ್ರವನ್ನು ಗ್ರಹಿಸಬೇಕು; ಅದಿರಿನಿಂದ ಚಿನ್ನದಂತೆ.

೨೧. ಯ ಈರ್ಷುಃ ಪರವಿತ್ತೇಷು ರೂಪೇ ವೀರ್ಯೇ ಕುಲಾನ್ವಯೇ ।
ಸುಖಸೌಭಾಗ್ಯಸತ್ಕಾರೇ ತಸ್ಯ ವ್ಯಾಧಿರನಂತಕಃ ॥
- ಮ.ಭಾ. (೫/೩೪/೪೩)

ಮತ್ತೊಬ್ಬರ ಸಂಪತ್ತು, ರೂಪ, ವೀರ್ಯ, ಕುಲ, ಸುಖ, ಸೌಭಾಗ್ಯ ಮತ್ತು ಗೌರವಗಳನ್ನು ಕಂಡು ಬೇಯುವವನ ಬೇನೆಗೆ ಕೊನೆಯೇ ಇಲ್ಲ.

೨೨. ವಿದ್ಯಾಮದೋ ಧನಮದಸ್ತೃತೀಯೋಽಭಿಜನೋ ಮದಃ ।
ಮದಾ ಏತೇಽವಲಿಪ್ತಾನಾಮೇತ ಏವ ಸತಾಂ ದಮಾಃ ॥
- ಮ.ಭಾ. (೫/೩೪/೪೫)

ವಿದ್ಯೆ, ಧನ ಹಾಗೂ ಕುಲಗಳು ಸೊಕ್ಕಿದವರಿಗೆ ಅಮಲಿಗೆ ಕಾರಣವಾದರೆ, ಸಜ್ಜನರಿಗೆ ಇಂದ್ರಿಯನಿಗ್ರಹಕ್ಕೆ ಕಾರಣವಾಗಿವೆ.

೨೩. ಜಿತಾ ಸಭಾ ವಸ್ತ್ರವತಾ ಸಮಾಖ್ಯಾ ಗೋಮತಾ ಜಿತಾ ।
ಅಧ್ವಾ ಜಿತೋ ಯಾನವತಾ ಸರ್ವಂ ಶೀಲವತಾ ಜಿತಮ್ ॥
- ಮ.ಭಾ. (೫/೩೪/೪೮)

ಒಳ್ಳೆಯ ವಸ್ತ್ರ ಉಳ್ಳವ ಸಭೆಯಲ್ಲಿ ಮೆರೆಯುತ್ತಾನೆ; ವಾಗ್ಮಿಯಾದವನು ವಿದ್ವತ್ಸಭೆಯಲ್ಲಿ ಶೋಭಿಸುತ್ತಾನೆ; ವಾಹನ ಉಳ್ಳವನಿಗೆ ದೂರಪ್ರಯಾಣ ಲೆಕ್ಕಕ್ಕೆ ಬಾರದು; ಚಾರಿತ್ರ್ಯ ಉಳ್ಳವನಿಗಂತೂ ಸರ್ವಸ್ವವೂ ಕೈವಶ.

೨೪. ಸಂಪನ್ನತರಮೇವಾನ್ನಂ ದರಿದ್ರಾ ಭುಂಜತೇ ಸದಾ ।
ಕ್ಷುತ್ ಸ್ವಾದುತಾಂ ಜನಯತಿ ಸಾ ಚಾಢ್ಯೇಷು ಸುದುರ್ಲಭಾ ॥
- ಮ.ಭಾ. (೫/೩೪/೫೧)

ಹಸಿವು ರುಚಿಯನ್ನು ಹುಟ್ಟಿಸುವುದರಿಂದ ಬಡವರು ಅತ್ಯುತ್ತಮವಾದ ಆಹಾರವನ್ನೇ ಉಣ್ಣುವರು; ಅದು ಶ್ರೀಮಂತರಲ್ಲಿ ಬಹಳ ಅಪರೂಪ.

೨೫. ಅಭ್ಯಾವಹತಿ ಕಲ್ಯಾಣಂ ವಿವಿಧಂ ವಾಕ್ ಸುಭಾಷಿತಾ ।
ಸೈವ ದುರ್ಭಾಷಿತಾ ರಾಜನ್ನನರ್ಥಾಯೋಪಪದ್ಯತೇ ॥
- ಮ.ಭಾ. (೫/೩೪/೭೮)

ಚೆನ್ನಾಗಿ ನುಡಿದ ಮಾತು ಬಹುಬಗೆಯ ಒಳಿತನ್ನು ತಂದುಕೊಡುವುದು. ಕೆಟ್ಟದಾಗಿ ನುಡಿದ ಅದೇ ಮಾತು ಕೇಡಿಗೂ ಕಾರಣವಾಗುವುದು.

೨೬. ಯಸ್ಮೈ ದೇವಾಃ ಪ್ರಯಚ್ಛಂತಿ ಪುರುಷಾಯ ಪರಾಭವಮ್ ।
ಬುದ್ಧಿಂ ತಸ್ಯಾಪಕರ್ಷಂತಿ ಸೋಽವಾಚೀನಾನಿ ಪಶ್ಯತಿ ॥[೧]
- ಮ.ಭಾ. (೫/೩೪/೮೨)

ಯಾವ ಮನುಷ್ಯನಿಗೆ ದೇವತೆಗಳು ಸೋಲನ್ನು ನೀಡಬಯಸುವರೋ ಅವನ ಬುದ್ಧಿಯನ್ನು ಹಾಳುಗೆಡವುವರು; ಅವನು ಅವನತಿಯನ್ನು ಕಾಣುವನು.

೨೭ ತೃಣೋಲ್ಕಯಾ ಜ್ಞಾಯತೇ ಜಾತರೂಪಂ
ವೃತ್ತೇನ ಭದ್ರೋ ವ್ಯವಹಾರೇಣ ಸಾಧುಃ ।
ಶೂರೋ ಭಯೇಷ್ವರ್ಥಕೃಚ್ಛ್ರೇಷು ಧೀರಃ
ಕೃಚ್ಛ್ರೇಷ್ವಾಪತ್ಸು ಸುಹೃದಶ್ಚಾರಯಶ್ಚ ॥ - ಮ.ಭಾ. (೫/೩೫/೬೦)

ಚಿನ್ನದ ಪರೀಕ್ಷೆ ಬೆಂಕಿಯಿಂದ; ಕುಶಲತೆಯ ಕೃತಿಯಿಂದ; ಸಜ್ಜನಿಕೆಯ ವ್ಯವಹಾರದಿಂದ. ಶೂರನ ಪರೀಕ್ಷೆ ಭಯ ಒದಗಿದಾಗಲೇ; ಧೀರನ ಪರೀಕ್ಷೆ ಕಷ್ಟಕಾಲದಲ್ಲಿ. ಮಿತ್ರರ ಹಾಗೂ ಶತ್ರುಗಳ ಆಪತ್ಕಾಲದಲ್ಲಿ.

೨೮. ಜರಾ ರೂಪಂ ಹರತಿ ಹಿ ಧೈರ್ಯಮಾಶಾ
ಮೃತ್ಯುಃ ಪ್ರಾಣಾನ್ ಧರ್ಮಚರ್ಯಾಮಸೂಯಾ ।
ಕ್ರೋಧಃ ಶ್ರಿಯಂ ಶೀಲಮನಾರ್ಯಸೇವಾ
ಹ್ರಿಯಂ ಕಾಮಃ ಸರ್ವಮೇವಾಭಿಮಾನಃ ॥ - ಮ.ಭಾ. (೫/೩೫/೬೧)

---

೧ ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ ।
ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ ॥ ಇತಿ ಭಾರತೇ
ಎಂದು ಶ್ರೀಮದಾಚಾರ್ಯರು ಕರ್ಮನಿರ್ಣಯದಲ್ಲಿ ಉದಾಹರಿಸಿರುವ ಶ್ಲೋಕದ ಭಾವವನ್ನೇ ಇದೂ ಹೊಂದಿದೆ. ಮಹಾಭಾರತದ ಕೆಲವು ಮುದ್ರಣಗಳಲ್ಲಿ ಈ ಶ್ಲೋಕವೇ ವಿದುರನೀತಿಯ ಭಾಗದಲ್ಲಿ ಯಥಾವತ್ತಾಗಿ ಉಪಲಬ್ಧವಿದೆ.

ಮುಪ್ಪು ರೂಪವನ್ನು ಅಪಹರಿಸುತ್ತದೆ; ಆಸೆ ಧೈರ್ಯವನ್ನು ಕುಗ್ಗಿಸುವುದು; ಸಾವು ಉಸಿರನ್ನು ನಿಲ್ಲಿಸುವುದು; ಅಸೂಯೆ ಧರ್ಮಾಚರಣೆಯನ್ನು ಹಾಳುಮಾಡುವುದು; ಕೋಪ ಸಂಪತ್ತನ್ನು ನಾಶಗೈಯುವುದು; ದುರ್ಜನರ ಸಂಗ ಶೀಲವನ್ನು ಕೆಡಿಸುವುದು; ಕಾಮವು ನಾಚಿಕೆಯನ್ನು ಮರೆಮಾಡುವುದು; ದುರಹಂಕಾರವಂತೂ ಎಲ್ಲವನ್ನೂ ನಾಶಮಾಡುವುದು.

೨೮. ದಿವಸೇನೈವ ತತ್ಕುರ್ಯಾದ್ಯೇನ ರಾತ್ರೌ ಸುಖಂ ವಸೇತ್ ।
ಅಷ್ಟಮಾಸೇನ ತತ್ಕುರ್ಯಾದ್ಯೇನ ವರ್ಷಾಃ ಸುಖಂ ವಸೇತ್ ॥
ಪೂರ್ವೇ ವಯಸಿ ತತ್ಕುರ್ಯಾದ್ಯೇನ ವೃದ್ಧಃ ಸುಖಂ ವಸೇತ್ ।
ಯಾವಜ್ಜೀವಂ ತು ತತ್ಕುರ್ಯಾದ್ಯೇನ ಪ್ರೇತ್ಯ ಸುಖಂ ವಸೇತ್ ॥
- ಮ.ಭಾ. (೫/೩೫/೭೯,೮೦)

ರಾತ್ರಿ ಸುಖವಿರಲು ಬೇಕಾದ್ದನ್ನು ಹಗಲೇ ಮಾಡಿ ಮುಗಿಸಬೇಕು; ಅನೇಕ ವರ್ಷಗಳು ಸುಖವಿರಲು ಬೇಕಾದ್ದನ್ನು ಎಂಟು ತಿಂಗಳಿನಲ್ಲೇ ಪೂರೈಸಬೇಕು; ವೃದ್ಧಾಪ್ಯದಲ್ಲಿ ಸುಖವಿರಲು ಬೇಕಾದ್ದನ್ನು ಯೌವ್ವನದಲ್ಲಿಯೇ ಪೂರೈಸಬೇಕು; ಜೀವನದ ಬಳಿಕ ಸುಖವಿರಲು ಬೇಕಾದ್ದನ್ನು ಜೀವನ ಪೂರ್ತಿ ಮಾಡಬೇಕು.

೨೯. ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ ।
ಸತಾಮೇತಾನಿ ಗೇಹೇಷು ನೋಚ್ಛಿದ್ಯಂತೇ ಕದಾಚನ ॥
- ಮ.ಭಾ. (೫/೩೬/೩೪)

ಕೂಡಲು ಹುಲ್ಲು, ನೆಲೆಸಲು ನೆಲ, ಕುಡಿಯಲು ನೀರು ಹಾಗೂ ನುಡಿಯಲು ಸವಿನುಡಿ - ಇವುಗಳಿಗೆ ಸಜ್ಜನರ ಮನೆಯಲ್ಲಿ ಎಂದೂ ಕೊರತೆ ಇರದು.

೩೦. ಅತಿಮಾನೋಽತಿವಾದಶ್ಚ ತಥಾಽತ್ಯಾಗೋ ನರಾಧಿಪ ।
ಕ್ರೋಧಶ್ಚಾತ್ಮವಿಧಿತ್ಸಾ ಚ ಮಿತ್ರದ್ರೋಹಶ್ಚ ತಾನಿ ಷಟ್ ॥
ಏತ ಏವಾಸಯಸ್ತೀಕ್ಷ್ಣಾಃ ಕೃಂತಂತ್ಯಾಯೂಂಷಿ ದೇಹಿನಾಮ್ ।
ಏತಾನಿ ಮಾನವಾನ್ ಘ್ನಂತಿ ನ ಮೃತ್ಯುರ್ಭದ್ರಮಸ್ತು ತೇ ॥
- ಮ.ಭಾ. (೫/೩೭/೧೦,೧೧)

ಮಿತಿಮೀರಿದ ಅಭಿಮಾನ, ಅತಿಯಾದ ಮಾತು, ದುರಾಗ್ರಹ, ಕೋಪ, ಸ್ವಾರ್ಥ ಮತ್ತು ಮಿತ್ರದ್ರೋಹವೆಂಬ ಆರು ಹರಿತವಾದ ಕತ್ತಿಗಳು ಮಾನವರ ಆಯುಷ್ಯವನ್ನು ಕತ್ತರಿಸುತ್ತವೆ. ಅವರನ್ನು ಇವೇ ಕೊಲ್ಲುವವು; ಸಾವಲ್ಲ

೩೧. ಯಸ್ತಾತ ನ ಕ್ರುದ್ಧ್ಯತಿ ಸರ್ವಕಾಲಂ
ಭೃತ್ಯಸ್ಯ ಭಕ್ತಸ್ಯ ಹಿತೇ ರತಸ್ಯ ।
ತಸ್ಮಿನ್ ಭೃತ್ಯಾ ಭರ್ತರಿ ವಿಶ್ವಸಂತಿ
ನ ಚೈನಮಾಪತ್ಸು ಪರಿತ್ಯಜಂತಿ ॥

- ಮ.ಭಾ. (೫/೩೭/೨೨)

ಯಾವ ಒಡೆಯನು ತನ್ನ ಹಿತಕ್ಕಾಗಿ ಭಕ್ತಿಯಿಂದ ದುಡಿಯುವ ಭೃತ್ಯನಲ್ಲಿ ಎಂದೂ ಕೋಪಿಸಿಕೊಳ್ಳುವುದಿಲ್ಲವೋ ಅವನಲ್ಲಿ ಭೃತ್ಯರು ವಿಶ್ವಾಸವಿಡುತ್ತಾರೆ; ಅವನನ್ನು ಆಪತ್ತಿನಲ್ಲೂ ಕೈ ಬಿಡುವುದಿಲ್ಲ.

೩೨. ಅಪಕೃತ್ಯ ಬುದ್ಧಿಮತೋ ದೂರಸ್ಥೋಽಸ್ಮೀತಿ ನಾಶ್ವಸೇತ್ ।
ದೀರ್ಘೌ ಬುದ್ಧಿಮತೋ ಬಾಹೂ ಯಾಭ್ಯಾಂ ಹಿಂಸತಿ ಹಿಂಸಿತಃ ॥

- ಮ.ಭಾ. (೫/೩೮/೮)

ಬುದ್ಧಿವಂತರಿಗೆ ವಂಚಿಸಿ ದೂರ ಓಡಿದೆನೆಂದು ವಿರಮಿಸಕೂಡದು. ಪೆಟ್ಟು ತಿಂದ ಬುದ್ಧಿವಂತನು ಅಪಾರವಾದ ತನ್ನ ಸಾಮರ್ಥ್ಯದ ವ್ಯಾಪ್ತಿಯಿಂದ ತಿರುಗೇಟು ನೀಡಿಯೇ ತೀರುತ್ತಾನೆ.

೩೩. ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ ।
ವಿಶ್ವಾಸಾದ್ಭಯಮುತ್ಪನ್ನಂ ಮೂಲಾನ್ಯಪಿ ನಿಕೃಂತತಿ ॥

- ಮ.ಭಾ. (೫/೩೮/೯)

ನಂಬಲನರ್ಹನನ್ನು ನಂಬಬಾರದು. ನಂಬಿಗಸ್ತನನ್ನೂ ಅತಿಯಾಗಿ ನಂಬಬಾರದು. ಅತಿನಂಬಿಕೆಯಿಂದ ಹುಟ್ಟುವ ಅಪಾಯ ಬೇರನ್ನೇ ಕಿತ್ತಿಬಿಡುವುದು.

೩೪. ಕರಿಷ್ಯನ್ ನ ಪ್ರಭಾಷೇತ ಕೃತಾನ್ಯೇವ ತು ದರ್ಶಯೇತ್ ।
ಧರ್ಮಕಾಮಾರ್ಥಕಾರ್ಯಾಣಿ ತಥಾ ಮಂತ್ರೋ ನ ಭಿದ್ಯತೇ ॥

- ಮ.ಭಾ. (೫/೩೮/೧೬)

ಧರ್ಮ, ಕಾಮ ಮತ್ತು ಅರ್ಥಗಳ ವಿಚಾರದಲ್ಲಿ ಕೆಲಸ ಮಾಡುವ ಮುನ್ನ ಹೇಳಿಕೊಳ್ಳಬಾರದು; ಕೆಲಸಗಳನ್ನು ಮಾಡಿಯೇ ತೋರಿಸಬೇಕು. ಹಾಗಾದಲ್ಲಿ ಯೋಜನೆಯು ವಿಫಲವಾಗುವುದಿಲ್ಲ.

೩೫. ನಿರರ್ಥಂ ಕಲಹಂ ಪ್ರಾಜ್ಞೋ
ವರ್ಜಯೇನ್ಮೂಢಸೇವಿತಮ್ ।

**ಕೀರ್ತಿಂ ಚ ಲಭತೇ ಲೋಕೇ**
**ನ ಚಾನರ್ಥೇನ ಯುಜ್ಯತೇ ॥**

**- ಮ.ಭಾ. (೫/೩೮/೩೧)**

ಮೂರ್ಖರು ತೊಡಗುವ ವ್ಯರ್ಥ ಕಲಹವನ್ನು ತಿಳಿದವನು ತೊರೆಯಬೇಕು. ಆದರಿಂದ ಲೋಕದಲ್ಲಿ ಕೀರ್ತಿಯೂ ಲಭಿಸುತ್ತದೆ; ಅನರ್ಥವೂ ಅಂಟುವುದಿಲ್ಲ.

**೩೬. ಅಪ್ರಾಪ್ತಕಾಲಂ ವಚನಂ ಬೃಹಸ್ಪತಿರಪಿ ಬ್ರುವನ್ ।**
**ಲಭತೇ ಬುದ್ಧ್ಯವಜ್ಞಾನಮವಮಾನಂ ಚ ಭಾರತ ॥**

**- ಮ.ಭಾ. (೫/೩೯/೨)**

ಸಕಾಲಿಕವಲ್ಲದ ಮಾತನ್ನು ಬೃಹಸ್ಪತಿಯೇ ನುಡಿದರೂ ತನ್ನ ತಿಳುವಳಿಕೆಗೆ ಅಗೌರವವನ್ನೂ ಅವಮಾನವನ್ನೂ ಹೊಂದುತ್ತಾನೆ.

**೩೭. ನ ವೃದ್ಧಿರ್ಬಹುಮಂತವ್ಯಾ**
**ಯಾ ವೃದ್ಧಿಃ ಕ್ಷಯಮಾವಹೇತ್ ।**
**ಕ್ಷಯೋऽಪಿ ಬಹುಮಂತವ್ಯೋ**
**ಯಃ ಕ್ಷಯೋ ವೃದ್ಧಿಮಾವಹೇತ್ ॥**

**- ಮ.ಭಾ. (೫/೩೯/೬)**

ಕೊನೆಯಲ್ಲಿ ವಿನಾಶವನ್ನು ತರುವ ಗಳಿಕೆಯೂ ಹೆಗ್ಗಳಿಕೆಯೇನಲ್ಲ ; ಕೊನೆಯಲ್ಲಿ ಅಭ್ಯುದಯವನ್ನು ತರುವ ಹಾನಿಯೂ ಹೆಗ್ಗಳಿಕೆಯೇ.

**೩೮. ಅವಲಿಪ್ತೇಷು ಮೂರ್ಖೇಷು ರೌದ್ರಸಾಹಸಿಕೇಷು ಚ ।**
**ತಥೈವಾಪೇತಧರ್ಮೇಷು ನ ಮೈತ್ರೀಮಾಚರೇದ್ಬುಧಃ ॥**

**- ಮ.ಭಾ. (೫/೩೯/೫೦)**

ಸೊಕ್ಕಿದವರಲ್ಲಿ, ಮೂರ್ಖರಲ್ಲಿ, ದುಃಸಾಹಸಿಗಳಲ್ಲಿ ಮತ್ತು ಧರ್ಮಭ್ರಷ್ಟರಲ್ಲಿ ಬುದ್ಧಿವಂತನು ಸ್ನೇಹ ಮಾಡಬಾರದು.

**೩೯. ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಮಿತಿ ಪಶ್ಯನ್ ನ ಮುಹ್ಯತಿ ॥**

**- ಮ.ಭಾ. (೫/೩೯/೮೫)**

ಭೂಮಿಯಲ್ಲಿರುವ ಎಲ್ಲ ಧನಧಾನ್ಯಗಳು, ಎಲ್ಲ ಪಶುಸಂಪತ್ತು, ಎಲ್ಲ ಸ್ತ್ರೀಯರು (ಜಿತೇಂದ್ರಿಯನಲ್ಲದ) ಒಬ್ಬನನ್ನೂ ತಣಿಸಲಾರವು ಎನ್ನುವುದನ್ನು ಅರಿತವ ಮೋಹಕ್ಕೆ ಒಳಗಾಗುವುದಿಲ್ಲ.

೪೦. ಆಲಸ್ಯಂ ಮದಮೋಹೌ ಚ ಚಾಪಲಂ ಗೋಷ್ಠಿರೇವ ಚ ।
ಸ್ತಬ್ಧತಾ ಚಾಭಿಮಾನಿತ್ವಂ ತಥಾ ತ್ಯಾಗಿತ್ವಮೇವ ಚ ।
ಏತೇ ವೈ ಸಪ್ತ ದೋಷಾಃ ಸ್ಯುಃ ಸದಾ ವಿದ್ಯಾರ್ಥಿನಾಂ ಮತಾಃ ॥

- ಮ.ಭಾ. (೫/೪೦/೫)

ಸೋಮಾರಿತನ, ಮದಮೋಹಗಳು, ಲೋಲುಪತೆ, ಗುಂಪುಗಾರಿಕೆ, ಮೊಂಡುತನ, ದುರಹಂಕಾರ ಹಾಗೂ ಹತಾಶೆ - ಇವು ವಿದ್ಯಾರ್ಥಿಯ ಏಳು ದೋಷಗಳೆಂದು ಪರಿಗಣಿಸಲ್ಪಟ್ಟಿವೆ.

೪೧. ಸುಖಾರ್ಥಿನಃ ಕುತೋ ವಿದ್ಯಾ
ನಾಸ್ತಿ ವಿದ್ಯಾರ್ಥಿನಃ ಸುಖಮ್ ।
ಸುಖಾರ್ಥೀ ವಾ ತ್ಯಜೇದ್ವಿದ್ಯಾಂ
ವಿದ್ಯಾರ್ಥೀ ವಾ ತ್ಯಜೇತ್ ಸುಖಮ್ ॥

- ಮ.ಭಾ. (೫/೪೦/೬)

ಸುಖಲೋಲುಪನಿಗೆ ವಿದ್ಯೆ ಎಲ್ಲಿಂದ? ವಿದ್ಯೆಗಾಗಿ ಹಂಬಲಿಸುವಗೆ ಸುಖ ಎಲ್ಲಿಂದ? ಒಂದೋ ಸುಖಾರ್ಥಿಯು ವಿದ್ಯೆಯನ್ನು ತ್ಯಜಿಸಬೇಕು, ಅಥವಾ ವಿದ್ಯಾರ್ಥಿಯಾದರೂ ಸುಖವನ್ನು ತ್ಯಜಿಸಬೇಕು.

೪೨. ಇದಂ ಚ ತ್ವಾಂ ಸರ್ವಪರಂ ಬ್ರವೀಮಿ
ಪುಣ್ಯಂ ಪದಂ ತಾತ ಮಹಾವಿಶಿಷ್ಟಮ್ ।
ನ ಜಾತು ಕಾಮಾನ್ನ ಭಯಾನ್ನ ಲೋಭಾ-
ದ್ಧರ್ಮಂ ಜಹ್ಯಾಜ್ಜೀವಿತಸ್ಯಾಪಿ ಹೇತೋಃ ॥

- ಮ.ಭಾ. (೫/೪೦/೧೨)

ಸರ್ವೋತ್ತಮವೂ ಪುಣ್ಯದಾಯಕವೂ ಅತ್ಯಂತ ಆದರಣೀಯವೂ (ಖಚಿತವೂ) ಆದ ಈ ಚಿಂತನೆಯನ್ನು ನಿನಗೆ ತಿಳಿಸುವೆ – ಎಂದಿಗೂ ಕಾಮದಿಂದಲೇ ಆಗಲಿ, ಭಯದಿಂದಲೇ ಆಗಲಿ, ಲೋಭದಿಂದಲೇ ಆಗಲಿ ಧರ್ಮವನ್ನು ತೊರೆಯಕೂಡದು; ಬದುಕುಳಿವ ಸಲುವಾಗಿಯೂ ಸಹ.

*****

## ಪರಿಶಿಷ್ಟ - ೨

# ಶ್ರೀಪುರಂದರದಾಸರ ಕೃತಿ[೧]

ವಿದುರನ ಭಾಗ್ಯವಿದು।
ಪದುಮಜಾಂಡ ತಲೆದೂಗುತಲಿದೆಕೊ ॥ ಪ ॥

ಕುರುರಾಯನು ಖಳನನುಜನು ರವಿಜನು।
ಗುರುಗಾಂಗೇಯರು ಎದುರಿರಲು ॥
ಹರಿಸಿ ರಥವ ನಡು ಬೀದಿಯಲ್ಲಿ ಬಹ।
ಹರಿಯ ತಾನು ಕಂಡನು ಹರುಷದಲಿ ॥ ೧ ॥

ದಾರಿಯಲಿ ಬಹ ಮುರವೈರಿಯ ಕಾಣುತ।
ಹಾರುತ ಚೀರುತ ಕುಣಿಯುತಲಿ ॥
ವಾರಿಧಾರೆಯನು ನೇತ್ರದಿ ಸುರಿಸುತ।
ಬಾರಿಬಾರಿಗೆ ಹಿಗ್ಗುವ ಸುಖದಿ ॥ ೨ ॥

ಆಟಕೆ ಲೋಕಗಳೆಲ್ಲಾ ಸೃಜಿಸುವ।
ನಾಟಕಧರ ತನ್ನ ಲೀಲೆಯಲಿ ॥
ನೀಟಾದವರ ಮನೆಗಳ ಜರೆದು।
ಕುಟೀರದಲಿ ಬಂದು ಹರಿ ಕುಳಿತ ॥ ೩ ॥

ಅಡಿಗಡಿಗೆ ತನ್ನ ತನುಮನ ಹರಹಿ।
ಅಡಗೆಡೆಯುತ ಬಲು ಗದ್ಗದದಿ ॥
ನುಡಿಗಳ ತೊದಲಿಸಿ ರೋಮವ ಪುಳಕಿಸಿ।
ದುಡುದುಡು ಓಡುವ ದಶದಿಶೆಗೆ ॥ ೪ ॥

---

೧ ವಿದುರನನ್ನು ಕುರಿತು ಶ್ರೀಪುರಂದರದಾಸರು ರಚಿಸಿರುವ ಅಪೂರ್ವ ಕೃತಿ ಇದಾಗಿದೆ. ವಿದುರನ ಇತರ ಎಲ್ಲ ಗುಣಗಳಿಗೂ ಕಿರೀಟಪ್ರಾಯವಾದ ಗುಣ ಅವನ ಭಗವದ್ಭಕ್ತಿ. ಭೀಷ್ಮ-ದ್ರೋಣರಿಗಿಂತ ಮಿಗಿಲೆನ್ನಿಸುವ ರೀತಿಯಲ್ಲಿ ವಿದುರನ ಸಾಧನೆ ಮಹಾಭಾರತದಲ್ಲಿ ಚಿತ್ರಿತವಾಗಿದೆ. ರಾಜಕಾರಣರದಲ್ಲಿ ಭಾಗಿಯಾಗದೆ, ರಾಜರ ಮಾರ್ಗದರ್ಶಕನಾಗಿ ವಿದುರ ಸಾಧಿಸಿದ್ದು ಅಪಾರ. ದುರ್ಯೋಧನನಂತಹ ದುಷ್ಟರ ಕೂಟ ಅಂಜುತ್ತಿದ್ದುದು ಈ ವಿದುರನಿಗೆ ಎಂಬಲ್ಲಿ ಇವರ ಸಾಧನೆಯ ಎತ್ತರ ಗೋಚರಿಸುವುದು. ಶ್ರೀಕೃಷ್ಣಭಕ್ತಿಯಲ್ಲಂತೂ ವಿದುರ ದಾಖಲೆ ಮಾಡಿದವನು. ತನ್ನ ಧರ್ಮನಿಷ್ಠೆಯಿಂದ ಕೃಷ್ಣನಿಗೆ ಪ್ರಿಯನಾದ ಇವನು ಶ್ರೀಕೃಷ್ಣನನ್ನು ಮೆಚ್ಚಿಸಿದ್ದು ತನ್ನ ಕರ್ತವ್ಯಪ್ರಜ್ಞೆಯಿಂದಾಗಿ. ತುಂಬಿದ ಸಭೆಯಲ್ಲೂ ಧರ್ಮವನ್ನು ಎತ್ತಿಹೇಳುತ್ತಿದ್ದ ಈತನ ಧೈರ್ಯ ಶ್ರೀಕೃಷ್ಣನ ಆಗಮನಕ್ಕೆ ಮುನ್ನುಡಿಯಾಯಿತು. ದುರ್ಯೋಧನಾದಿಗಳ ಆತಿಥ್ಯವನ್ನು ತಿರಸ್ಕರಿಸಿದ ಶ್ರೀಕೃಷ್ಣ ವಿದುರನ ಮನೆಗೆ ತಾನಾಗಿಯೇ ನಡೆದು ಭಕ್ತಿಯ ಆತಿಥ್ಯವನ್ನು ಸ್ವೀಕರಿಸಿದ್ದು ಶ್ರೀಕೃಷ್ಣನ ಕಾರುಣ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಶ್ರೀಪುರಂದರದಾಸರ ಪ್ರಸ್ತುತ ಕೃತಿ ತನ್ನ ಮನೆಗೆ ಬಂದಾಗ ವಿದುರ ಸಂಭ್ರಮಿಸಿದ ಪರಿಯನ್ನು ರೋಚಕವಾಗಿ ಚಿತ್ರಿಸಿದೆ.

ಕಂಗಳುದಕದಿ ಪದಂಗಳ ತೊಳೆದು ।
ಗಂಧವ ಪೂಸಿದ ತನುಪೂರಸಿ ॥
ಮಂಗಳ ಮಹಿಮನ ಚರಣಕೆರಗಿ ಪು- ।
ಷ್ಪಂಗಳಿಂದ ಪೂಜೆಯ ಮಾಡಿದನು ॥ ೫ ॥

ನೋಡಿದ ಭಕುತನ ಮನದ ಹವಣಿಕೆಯು ।
ಪಾಡುವ ಪೊಗಳುವ ಹರುಷದಲಿ ॥
ನೀಡಿದ ಕರದಲಿ ಬಿಗಿದಪ್ಪಿದ ಕೊಂ- ।
ಡಾಡಿದ ಕರುಣದಿ ಜಗದೊಡೆಯ ॥ ೬ ॥

ಕ್ಷೀರವಾರಿಧಿ ಶಯನಗೆ ವಿದುರನು ।
ಕ್ಷೀರವನುಣ ಬಡಿಸಿದ ನೋಡಾ ॥
ವಾರಿಜನಾಭನು ಕರಸಂಪುಟದಲಿ ।
ಆರೋಗಣೆಸಿದ ಘನತೆಯನು ॥ ೭ ॥

ಒಂದು ಕುಡಿತೆ ಪಾಲು ಹರಿ ತಾ ಸವಿದು ।
ಮುಂದಕೆ ನಡೆಸಿದ ಧರೆಮೇಲೆ ॥
ಇಂದಿರೆಯರಸನ ಚರಿತೆ ವಿಚಿತ್ರವು ।
ಚೆಂದದಿ ಹರಿದುದು ಬೀದಿಯಲಿ ॥ ೮ ॥

ಕರುಣಾಕರ ಸಿರಿಹರಿ ತನ್ನ ಭಕುತರ ।
ಪೊರೆವನು ಅನುದಿನ ಆಯತದಿ ॥
ಸಿರಿಯ ಅರಸು ನಮ್ಮ ಪುರಂದರ ವಿಠಲನ ।
ಶರಣರು ಧನ್ಯರು ಧರೆ ಮೇಲೆ ॥ ೯ ॥

★★★★★

ಪರಿಶಿಷ್ಟ- ೩

# ವಿದುರನೀತಿ

ಮಹಾಭಾರತವು 'ಗ್ರಂಥರಾಜ' ಎಂದು ಪ್ರಸಿದ್ಧಿಯಾಗಿರುವ ಅತ್ಯಂತ ಮಹತ್ತ್ವ-ಪೂರ್ಣವಾದ ಕೃತಿ; ಭಗವದವತಾರಿಗಳಾದ ಶ್ರೀವೇದವ್ಯಾಸರು ಅನುಗ್ರಹಿಸಿರುವ ಈ ಕೃತಿ ಪರಿಪೂರ್ಣವಾದ ಅರ್ಥದಲ್ಲಿ ಒಂದು 'ಪುರುಷಾರ್ಥ ಕೋಶ'. ಇಂತಹ ಅದ್ವಿತೀಯ ಕೃತಿಯ ಹೃದಯಸ್ಥಾನವಾದ ಭಾಗಗಳು 'ಭಗವದ್ಗೀತೆ' ಮತ್ತು 'ವಿಷ್ಣುಸಹಸ್ರನಾಮ'ಗಳಾದರೆ, ಸಾರಭೂತವಾದ ಪರ್ವಗಳು 'ವಿರಾಟಪರ್ವ ಮತ್ತು ಉದ್ಯೋಗಪರ್ವ' ('ವಿರಾಟೋದ್ಯೋಗಸಾರವಾನ್')ಗಳಾಗಿವೆ. ಶ್ರೀಕೃಷ್ಣ ರಾಯಭಾರದ ಅಪೂರ್ವ ಪ್ರಸಂಗದಿಂದಾಗಿ ಉದ್ಯೋಗಪರ್ವವು 'ಪರ್ವರಾಜ'ವಾಗಿದೆ; ಮಹಾಭಾರತದ 'ಸುಂದರಕಾಂಡ'ವಾಗಿದೆ. ಉದ್ಯೋಗಪರ್ವದಲ್ಲಿ ಉಪದೇಶಕ್ಕೇ ಮೀಸಲಾದ ಎರಡು ಭಾಗಗಳು: ವಿದುರನೀತಿ ಮತ್ತು ಸನತ್ಸುಜಾತೀಯ. ಧೃತರಾಷ್ಟ್ರ ಒಂದು ರಾತ್ರಿ ನಿದ್ರೆಯಿಲ್ಲದೆ ಪರಿತಪಿಸತೊಡಗಿದ; ಅವನ ಎಂದಿನ ಆಧ್ಯಾತ್ಮ ಬಂಧು ವಿದುರನಿಗೆ ಕರೆ ಹೋಯಿತು; ಧೃತರಾಷ್ಟ್ರನ ಸಮಸ್ಯೆಗೆ ಪರಿಹಾರರೂಪವಾಗಿ ಆಗ ವಿದುರನ ಮುಖದಿಂದ ಹರಿದು ಬಂದ ಉಪದೇಶಧಾರೆಯೇ 'ವಿದುರನೀತಿ'.

ತಾಪತ್ರಯದ ಗೊಂದಲದಲ್ಲಿ ಸುಖನಿದ್ರೆಯಿಂದ ವಂಚಿತರಾಗಿರುವ ನಮ್ಮೆಲ್ಲರ ಪಾಲಿಗೆ ಉತ್ತಮ ಮನೋವಿನೋದದ ಸಾಧನವೆಂಬುದರಲ್ಲಿ ಇದರ ಸಾರ್ವಕಾಲಿಕ ಮಹತ್ತ್ವ ಅಡಗಿದೆ. 'ಪ್ರಜಾಗರಪರ್ವ'ವೆಂಬ 'ಉಪಪರ್ವ'ದಲ್ಲಿ ಈ ಭಾಗ ಸಂಕಲಿತವಾಗಿದೆ. ವಿದುರ ಯಮಧರ್ಮನ ಅವತಾರವಾದ್ದರಿಂದ ಈ ವಿದುರನೀತಿ 'ಯಮಧರ್ಮನ ನೀತಿ'ಯೂ ಆಗಿದೆ; 'ಧರ್ಮದಸಾರ'ವೂ ಆಗಿದೆ. ಆಧುನಿಕ ಪರಿಭಾಷೆಯಲ್ಲಿ ಶೂದ್ರನೊಬ್ಬ ಹೇಳಿದ ಈ ಕೃತಿ ಒಂದರ್ಥದಲ್ಲಿ ವೈದಿಕ ಪರಂಪರೆಯ 'ದಲಿತಸಾಹಿತ್ಯ'. ಮಹಾಭಾರತದ ಒಟ್ಟು ಸಂದೇಶವಾದ 'ಯತೋ ಧರ್ಮಸ್ತತಃ ಕೃಷ್ಣೋ ಯತಃ ಕೃಷ್ಣಸ್ತತೋ ಜಯಃ' ಎಂಬುದೇ ಈ ವಿದುರನೀತಿಯ ಸಾರ. ಇದರ ಅಧ್ಯಯನ ವಿವಿಧ ಹಂತಗಳಲ್ಲಿ ಜೀವನಕ್ಕೆ ಬೆಳಕಾಗಬಲ್ಲ ಉತ್ತಮ ಸಾಧನ. ಈ 'ವಿದುರನೀತಿ'ಯಿಂದ ವಿದೂರರಾಗದವರಿಗೆ ಧರ್ಮವಿಧುರರಾಗುವ ಅಪಾಯ ಎಂದೂ ಬಾರದು. ಮಹಾಭಾರತದ ವ್ಯಾಖ್ಯಾನಗಳಲ್ಲೆಲ್ಲ 'ವಿದುರನೀತಿ'ಯ ವ್ಯಾಖ್ಯಾನ ಸಿಕ್ಕುತ್ತದೆ. ಆದರೆ ಇದರ ಆಧ್ಯಾತ್ಮಿಕ ಮಹತ್ತ್ವವನ್ನು ತಿಳಿಸಿದ ಶ್ರೇಯಸ್ಸು ಮಾತ್ರ ಆಚಾರ್ಯ ಶ್ರೀಮಧ್ವರಿಗೇ ಸಲ್ಲುತ್ತದೆ. ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಇದರ ಬಗ್ಗೆ ಅವರ ಮಾತುಗಳು ಹೀಗಿವೆ:

"............................. ಆಹೂಯ ವಿದುರಂ ನಿಶಿ ।
ಪಪ್ರಚ್ಛ ಸೋಽವದದ್ಧರ್ಮಂ ಪಾರ್ಥಾನಾಂ ರಾಜ್ಯದಾಪನಾಮ್ ।
ಐಹಿಕಸ್ಯ ಸುಖಸ್ಯಾಪಿ ಕಾರಣಂ ತದನಿಂದಿತಮ್ ।
ಅನ್ಯಥಾ ಸರ್ವಪುತ್ರಾಣಾಂ ನಾಶಂ ಧರ್ಮಾತಿಲಂಘನಮ್ ॥"

(ಅಧ್ಯಾಯ ೨೪, ಶ್ಲೋ.೪೧-೪೩)

ವಿದುರನಿಂದ ಈ ಪ್ರಸಂಗದಲ್ಲಿ ಬಂದ ನೀತಿ ವಿದುರನೀತಿಯಾದರೆ, ಯುಧಿಷ್ಠಿರನಿಂದ ಅಜಗರಪ್ರಸಂಗ ಹಾಗೂ ಯಕ್ಷಪ್ರಶ್ನೆ ಕಾಲದಲ್ಲಿ ಅನೇಕ ಧರ್ಮಸೂಕ್ಷ್ಮಗಳು ಅನಾವರಣಗೊಳ್ಳುತ್ತವೆ. ಶಾಂತಿಪರ್ವ, ಅನುಶಾಸನಪರ್ವಗಳಲ್ಲಂತೂ ಭೀಷ್ಮರಿಂದ ಹರಿದುಬಂದ ಉಪದೇಶಧಾರೆಗೆ ಯುಧಿಷ್ಠಿರನ ಸೂಕ್ಷ್ಮಧರ್ಮಪ್ರಶ್ನೆಗಳೇ ಕಾರಣ. ಮಹಾಭಾರತದಲ್ಲಿ ಹೀಗೆ ವಿದುರ ಮತ್ತು ಯುಧಿಷ್ಠಿರರಿಂದ ಧರ್ಮಜಿಜ್ಞಾಸೆಯ ಬಗ್ಗೆ ಸಂದಿರುವ ಕೊಡುಗೆ ಅಪಾರವಾದುದು, ಅಪೂರ್ವವಾದುದು. ಇಬ್ಬರೂ ಸಹ ಯಮಧರ್ಮನ ಅವತಾರರೇ ಆದವರು ಎಂಬುದು ಸಹ ಗಮನಿಸಬೇಕಾದ ಅಂಶ. ಯಮಧರ್ಮನಿಂದ ಬಂದ ಕಾರಣದಿಂದಲೇ ಇಲ್ಲಿಯ ಧರ್ಮಜಿಜ್ಞಾಸೆಗೆ ಅಪಾರ ಬೆಲೆಯಿದೆ.

ಇವುಗಳ ಬೆಳಕಿನಲ್ಲಿ [೧]ಶ್ರೀವಾದಿರಾಜಸ್ವಾಮಿಗಳು ಇದರ ಬಗ್ಗೆ ತಮ್ಮ 'ಲಕ್ಷಾಲಂಕಾರ' ಕೃತಿಯಲ್ಲಿ ಹೆಚ್ಚಿನ ವಿವರಣೆ ನೀಡಿದ್ದಾರೆ. ಅನಂತರ ಇದರ ಭಾವವನ್ನು ವಿಶದಪಡಿಸಿದ ಹಿರಿಮೆ ಶ್ರೀಸತ್ಯಧರ್ಮತೀರ್ಥರಿಗೆ ಸಲ್ಲುತ್ತದೆ[೨].

ವಿದುರನೀತಿಯಲ್ಲಿನ ಆಯ್ದ[೩] ಕೆಲವು ಶ್ಲೋಕಗಳನ್ನು ಶ್ರೀ ಸತ್ಯಧರ್ಮರ ವ್ಯಾಖ್ಯಾನಾನುಸಾರಿ ಕನ್ನಡ ಅನುವಾದದೊಂದಿಗೆ ಇಲ್ಲಿ ಕೊಡಲಾಗಿದೆ.[೪] ಅನೇಕ ಅಪೂರ್ವಾರ್ಥಗಳು ಇದರಲ್ಲಿ ತುಂಬಿವೆ. ಉದಾಹರಣೆಗೆ 'ನಿಃಶಲಾಕ' (ಪು. ೧೯೩), 'ನ ಕಶ್ಚಿನ್ನಾಪನಯತೇ ಪುಮಾನನ್ಯತ್ರ ಭಾರ್ಗವಾತ್' (ಪು. ೧೯೭) ಇತ್ಯಾದಿಗಳನ್ನು ಗಮನಿಸಬಹುದು[೫]. ಈ ವ್ಯಾಖ್ಯಾನದಲ್ಲಿಯ ಪಾಠವು ಸಹ ಅಪೂರ್ವವಾಗಿದ್ದು ಆ ದೃಷ್ಟಿಯಲ್ಲೂ ಇದು ಮಹಾಭಾರತದ ಅಧ್ಯಯನ ಮಾಡುವವರಿಗೆಲ್ಲ ವಿಶೇಷ ಉಪಕಾರಕವಾದ ಟಿಪ್ಪಣಿಯಾಗಿದೆ.

**ವ್ಯಾಸನಕೆರೆ ಪ್ರಭಂಜನಾಚಾರ್ಯ**

---

೧ ಶ್ರೀವಾದಿರಾಜಸ್ವಾಮಿಗಳ ಕೃತಿಗಳ ಕುರಿತು ಹೆಚ್ಚಿನ ವಿವರಗಳಿಗೆ ನಮ್ಮ ಪ್ರಕಾಶನದ 'ಶ್ರೀವಾದಿರಾಜದರ್ಶನ' ಎಂಬ ಕೃತಿಯನ್ನು ನೋಡಬಹುದು.

೨ ಶ್ರೀಸತ್ಯಧರ್ಮತೀರ್ಥರು ಹಾಗೂ ಅವರ ಕೃತಿಗಳನ್ನು ಕುರಿತು ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಶ್ರೀಸತ್ಯಧರ್ಮತೀರ್ಥಕೃತಿಮಂಜರೀ' ಎಂಬ ಕೃತಿಯಲ್ಲಿ ಕೊಡಲಾಗಿದೆ.

೩. ವಿದುರನೀತಿಯ ಸಮಗ್ರ ಅನುವಾದವನ್ನು ಸಹ ಮುಂದೊಮ್ಮೆ ಪ್ರಕಟಿಸುವ ಯೋಜನೆಯೂ ಇದೆ.

೪ ಕೆಲವು ಕಡೆ ಅವರ ವ್ಯಾಖ್ಯಾನದ ವಾಕ್ಯಗಳನ್ನೇ (ವ್ಯಾ) ಎಂಬುದಾಗಿ ಕೊಡಲಾಗಿದೆ.

೫ ಇಲ್ಲಿಯ 'ವಿದುರನೀತಿ'ಯ ಭಾಗ 'ವಿದುರನೀತಿ' ಎಂಬುದಾಗಿ ನಮ್ಮ ಪ್ರಕಾಶನದಿಂದ ಅನೇಕ ಸಲ ಪ್ರಕಾಶಿತವಾಗಿದೆ.

# ವಿದುರನೀತಿ

(ಮಹಾಭಾರತದ ವಿದುರನೀತಿಯಲ್ಲಿನ ಕೆಲವು ಶ್ಲೋಕಗಳು ಶ್ರೀಶ್ರೀಸತ್ಯಧರ್ಮತೀರ್ಥರ ಸಂಸ್ಕೃತ ವ್ಯಾಖ್ಯಾನಾನುಸಾರಿಯಾದ ಕನ್ನಡ ಅನುವಾದ ಸಮೇತ)

೧. ಊರ್ಧ್ವಂ ಪ್ರಾಣಾ ಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಯತಿ ।
ಪ್ರತ್ಯುತ್ಥಾನಾಭಿವಾದಾಭ್ಯಾಂ ತಾನ್ ಪುನಃ ಪ್ರತಿಪದ್ಯತೇ ॥

- ಮ.ಭಾ. (೫/೩೮/೧)

ತನಗಿಂತ ಹಿರಿಯನಾದವನು ಆಗಮಿಸಿದಾಗ ಕಿರಿನಾದವನ ಇಂದ್ರಿಯಗಳು ಮೇಲಕ್ಕೆ ಹೊರಟು ನಿಲ್ಲುತ್ತವೆ – ಎಂದರೆ ಇಂದ್ರಿಯಾಭಿಮಾನಿ ದೇವತೆಗಳು ಅವನನ್ನು ಗೌರವಿಸಲು ಸೂಚಿಸುವರು ಎಂದು ಭಾವ; ಆದ್ದರಿಂದ ಆಗ ಎದ್ದು ನಿಂತು ಅವರಿಗೆ ನಮಸ್ಕರಿಸಿದರೆ ಇಂದ್ರಿಯಾಭಿಮಾನಿ ದೇವತೆಗಳ ಒಲುಮೆಗೆ ಪುನಃ ಪಾತ್ರನಾಗುತ್ತಾನೆ. (ಇಲ್ಲವಾದಲ್ಲಿ ನಾಶವಾಗುವನು ಎಂದು ಭಾವ).

೨. ವಿದ್ಯಾಶೀಲವಯೋವೃದ್ಧಾನ್ ಬುದ್ಧಿವೃದ್ಧಾಂಶ್ಚ ಭಾರತ ।
ಧನಾಭಿಜಾತವೃದ್ಧಾಂಶ್ಚ ನಿತ್ಯಂ ಮೂಢೋಽವಮನ್ಯತೇ ॥

- ಮ.ಭಾ. (೫/೩೮/೩೪)

ವಿದ್ಯೆ, ಶೀಲ, ವಯಸ್ಸು, ಬುದ್ಧಿ, ಧನ ಮತ್ತು ವಂಶ, ಇವುಗಳಲ್ಲಿ ಹಿರಿಯರಾದವರನ್ನು ಅವಮಾನಿಸುವವನು ಮೂಢನೇ ಸರಿ; ಆದರೆ ವಿವೇಕಿಯು ಅಂತಹವರನ್ನು ಗೌರವಿಸಿ ಶ್ರೇಯಸ್ಸಿಗೆ ಪಾತ್ರನಾಗುವನು.

೩. ಪೀಠಂ ದತ್ವಾ ಸಾಧವೇಽಭ್ಯಾಗತಾಯ
ಆನೀಯಾಪಃ ಪರಿನಿರ್ಣಿಜ್ಯ ಪಾದೌ ।
ಸುಖಂ ಪೃಷ್ಟ್ವಾ ಪ್ರತಿವೇದ್ಯಾತ್ಮಸಂಸ್ಥಂ
ತತೋ ದದ್ಯಾದನ್ನಮವೇಕ್ಷ್ಯ ಧೀರಃ ॥

- ಮ.ಭಾ. (೫/೩೮/೨)

ವಿವೇಕಿಯಾದವನು ತನ್ನ ಮನೆಗೆ ಆಗಮಿಸಿದ ಅತಿಥಿಗೆ ಆಸನವನ್ನಿತ್ತು ಆದರಿಸಬೇಕು; ಶುದ್ಧ ಜಲವನ್ನು ತಂದು ಎರಡೂ ಪಾದಗಳನ್ನು ತೊಳೆದು ಆತನ ಕುಶಲವನ್ನು ವಿಚಾರಿಸಬೇಕು; ತನ್ನ ಕುಶಲವನ್ನೂ ಅರಿಕೆ ಮಾಡಿಕೊಳ್ಳಬೇಕು. ಅನಂತರ ತನ್ನ ಯೋಗ್ಯತೆ ಮತ್ತು ಅತಿಥಿಯ ಕುಲಾದಿಗಳನ್ನು ಗಮನಿಸಿ ಅದಕ್ಕೆ ತಕ್ಕಂತೆ ಭೋಜನವನ್ನಿತ್ತು ಆದರಿಸಬೇಕು.

೪. ಯಸ್ಯೋದಕಂ ಮಧುಪರ್ಕಂ ಚ ಗಾಂ ಚ
ನ ಮಂತ್ರವಿತ್ ಪರಿಗೃಹ್ಣಾತಿ ಗೇಹೇ ।

ಲೋಭಾದ್ಭಯಾದಥ ಕಾರ್ಪಣ್ಯತೋ ವಾ
ತಸ್ಯಾನರ್ಥಂ ಜೀವಿತಮಾಹುರಾರ್ಯಾಃ ॥

- ಮ.ಭಾ. (೫/೩೮/೩)

ಕೊಡುವ ವಸ್ತುಗಳ ಮೇಲಿನ ವ್ಯಾಮೋಹ, ಅವುಗಳನ್ನು ಕೊಟ್ಟರೆ ಬಂಧುಗಳು ಏನೆಂದಾರೆಂಬ ಭಯ ಹಾಗೂ ಕೊಡಬೇಕಲ್ಲ ಎಂಬ ಕಾರ್ಪಣ್ಯ ಇವುಗಳನ್ನು ಹೊಂದಿದಲ್ಲಿ ಮಂತ್ರವೇತ್ತನಾದ ಅತಿಥಿಯು ನಾವು ಕೊಡುವ ಉದಕ, ಮಧುಪರ್ಕ ಮತ್ತು ಗೋವುಗಳನ್ನು ಸ್ವೀಕರಿಸುವುದಿಲ್ಲ. ಯಾವನ ಆತಿಥ್ಯವನ್ನು ಈ ಕಾರಣಗಳಿಂದ ಇಂತಹ ಅತಿಥಿಯು ಸ್ವೀಕರಿಸುವುದಿಲ್ಲವೋ ಅಂತಹವನ ಬದುಕು ವ್ಯರ್ಥ ಎಂದು ಪ್ರಾಜ್ಞರು ಹೇಳುತ್ತಾರೆ.

(ಇಲ್ಲಿ ಉದಕ ಎಂದರೆ ಪಾದ್ಯಾದಿಗಳು ಎಂದೂ, ಮಧುಪರ್ಕ ಎಂದರೆ ಮೊಸರು, ಜೇನು ಮತ್ತು ತುಪ್ಪ ಈ ಮೂರು ಅಥವಾ ಇವುಗಳೊಂದಿಗೆ ಅನ್ನ ಮತ್ತು ಹಾಲು ಸೇರಿ ಒಟ್ಟು ಐದು ಎಂದೂ ಅರ್ಥ; ದುರ್ಯೋಧನನ ಆತಿಥ್ಯವನ್ನು ಶ್ರೀಕೃಷ್ಣ ನಿರಾಕರಿಸಿದ; ಅದರ ಫಲವಾಗಿ ದುರ್ಯೋಧನ ಕೆಲವೇ ದಿನಗಳಲ್ಲಿ ಅವನು ಸಪುತ್ರಮಿತ್ರಬಾಂಧವನಾಗಿ ಸರ್ವನಾಶ ಹೊಂದಿದ್ದು ಇದಕ್ಕೆ ಉತ್ತಮ ನಿದರ್ಶನ).

೫. ಅರೋಷಣೋ ಯಃ ಸಮಲೋಷ್ಟಾಶ್ಮಕಾಂಚನಃ
ಪ್ರಹೀಣಕೋಶೋ ಗತಸಂಧಿವಿಗ್ರಹಃ ।
ನಿಂದಾಪ್ರಶಂಸೋಪರತಃ ಪ್ರಿಯಾಪ್ರಿಯೇ
ತ್ಯಜನ್ನುದಾಸೀನವದೇಷ ಭಿಕ್ಷುಕಃ ॥ - ಮ.ಭಾ. (೫/೩೮/೬)

ಕೋಪಗೊಳ್ಳದವನು, ಮಣ್ಣು, ಹೆಂಟೆ ಮತ್ತು ಚಿನ್ನಗಳನ್ನು ಸಮವೆಂದು ತಿಳಿದವನು, ಧನಸಂಗ್ರಹ ಮಾಡದವನು, ಸಂಧಿವಿಗ್ರಹಗಳಿಗೆ ಒಳಗಾಗದವನು (ಸರ್ವಭೂತ ಸಮನಾದವನು), ಅರ್ಥವಿಲ್ಲದ ನಿಂದಾ ಪ್ರಶಂಸೆಗಳಿಗೆ ಗಮನ ಕೊಡದವನು, ಪ್ರಿಯ ಮತ್ತು ಅಪ್ರಿಯ ವಸ್ತುಗಳಲ್ಲಿ ಉದಾಸೀನನಂತೆ ವರ್ತಿಸುವವನು ಯಾವನೋ ಅವನೇ ಪರಮಹಂಸ (ನಿಜವಾದ ಸನ್ಯಾಸಿ).

೬. ಅನೀರ್ಷುಃ ಗುಪ್ತದಾರಃ ಸ್ಯಾತ್ ಸಂವಿಭಾಗೀ ಪ್ರಿಯಂವದಃ ।
ಶ್ಲಕ್ಷ್ಣೋ ಮಧುರವಾಕ್ ಸ್ತ್ರೀಣಾಂ ನ ತಾಸಾಂ ವಶಗೋ ಭವೇತ್ ॥

- ಮ.ಭಾ. (೫/೩೮/೧೦)

ಮತ್ತೊಬ್ಬರ ಐಶ್ವರ್ಯಾದಿಗಳನ್ನು ಕಂಡು ಅಸೂಯೆಪಡಕೂಡದು; ತನ್ನ ಹೆಂಡತಿಯನ್ನು ಚೆನ್ನಾಗಿ ನೋಡಿಕೊಳ್ಳಬೇಕು; ಅತಿಥಿ ಅಭ್ಯಾಗತರಿಗೆ ಹಂಚಿ ಅನಂತರ ಭೋಜನ ಮಾಡಬೇಕು; ಪ್ರಿಯವಾದುದನ್ನು ನುಡಿಯಬೇಕು; ಕಠಿಣನಾಗಿರಕೂಡದು; ಸ್ತ್ರೀಯರೊಡನೆ

ಮಧುರವಾಗಿಯೇ ಮಾತನಾಡಬೇಕು; ಆದರೆ ಎಂದೂ ಅವರ ವಶನಾಗಕೂಡದು (ಜಿತೇಂದ್ರಿಯನಾಗಿರಬೇಕು ಎಂದು ಭಾವ).

೭. ಪೂಜನೀಯಾ ಮಹಾಭಾಗಾ ಪುಣ್ಯಾಶ್ಚ ಗೃಹದೀಪ್ತಯಃ ।
ಸ್ತ್ರಿಯಃ ಶ್ರಿಯೋ ಗೃಹಸ್ಯೋಕ್ತಾ ತಸ್ಮಾದ್ರಕ್ಷ್ಯಾ ವಿಶೇಷತಃ ॥

-- ಮ.ಭಾ. (೫/೩೮/೧೧)

ಪುಣ್ಯಶೀಲರಾದ ಸ್ತ್ರೀಯರು ಮನೆಯನ್ನೇ ಬೆಳಗುವವರು; ಸೌಭಾಗ್ಯ ತಂದು-ಕೊಡುವವರು; ಇಂತಹ ಸ್ತ್ರೀಯರು ಮನೆಗೆ ಮಹಾಲಕ್ಷ್ಮಿ ಇದ್ದಂತೆ; ಇಂತಹವರನ್ನು ಅಶನವಸನಗಳನ್ನಿತ್ತು ಸದಾ ಸಂರಕ್ಷಿಸಬೇಕು (ವಸ್ತ್ರಾಲಂಕಾರಾದಿಗಳಿಂದ ಸದಾ ಆದರಿಸಬೇಕು).

೮. ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋಲೋಹಮುತ್ಥಿತಮ್ ।
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥

- ಮ.ಭಾ. (೫/೩೮/೧೩)

ನೀರಿನಿಂದ ಬೆಂಕಿಯೂ, ಬ್ರಾಹ್ಮಣನಿಂದ ಕ್ಷತ್ರಿಯನೂ, ಕಲ್ಲಿನಿಂದ ಲೋಹವೂ ಉದ್ಭವಿಸಿವೆ; ಆದ್ದರಿಂದ ಅಗ್ನಿ ಮೊದಲಾದವುಗಳು ಎಲ್ಲಿಯೇ ಇರಲಿ ಅವುಗಳು ಶಾಂತವಾಗುವುದು ತಾವು ಹುಟ್ಟಿದ ಸ್ಥಳಗಳಲ್ಲೇ (ಎಂದರೆ ಬೆಂಕಿಯನ್ನು ನೀರಿನಿಂದಲೂ, ಕ್ಷತ್ರಿಯನನ್ನು ಬ್ರಾಹ್ಮಣನಿಂದಲೂ, ಲೋಹವನ್ನು ಕಲ್ಲಿನಿಂದಲೂ ನಿಯಂತ್ರಿಸಬೇಕು ಎಂದು ಭಾವ).

೯. ಗಿರಿಪೃಷ್ಠ ಮುಪಾರುಹ್ಯ ಪ್ರಾಸಾದಂ ವಾ ರಹೋಗತಃ ।
ಅರಣ್ಯೇ [1]ನಿಃಶಲಾಕೇ ವಾ ತತ್ರ ಮಂತ್ರೋಽಭಿಧೀಯತೇ ॥

- ಮ.ಭಾ. (೫/೩೮/೧೭)

ಪರ್ವತಶಿಖರದ ಮೇಲಾಗಲೀ, ಪ್ರಾಸಾದದ ಮೇಲಾಗಲೀ, ಭಾಷೆಯನ್ನು ತಿಳಿಯಬಲ್ಲ ಶಾರಿಕಾ ಎಂಬ ಪಕ್ಷಿಗಳು ಇಲ್ಲದಿರುವ ಅರಣ್ಯದಲ್ಲಾಗಲೀ (ರಾಜನಾದವನು) ರಹಸ್ಯವಾಗಿ ಮಂತ್ರಾಲೋಚನೆ ನಡೆಸಬೇಕು. (ಶಾರಿಕಾ ಪಕ್ಷಿಗಳಿಗೆ ಮಾತುಗಳನ್ನು ತತ್‌ಕ್ಷಣ ಪಾಠ ಮಾಡುವ ಸಾಮರ್ಥ್ಯವಿರುವುದರಿಂದ (Tape Recorder ನಂತೆ) ಅವು ಇರುವ ಸ್ಥಳಗಳಲ್ಲಿ ಮಂತ್ರಾಲೋಚನೆ ನಡೆಸಿದರೆ ಅವುಗಳ ಮೂಲಕ ರಹಸ್ಯ ಬಯಲಾಗುವ ಸಂಭವ ಉಂಟು ಎಂದು ಭಾವ).

---

೧ ನಿಃಶಲಾಕೇ – ಭಾಷಾಭಿಜ್ಞಶಾರಿಕಾಪಕ್ಷಿಶೂನ್ಯೇ । -ವ್ಯಾ
'ನಿಃಶಲಾಕೇ – ತೃಣಗುಲ್ಮಾದಿಶಲಾಕಾರರಹಿತೇ - ಶ್ರೀ ವಾದಿರಾಜರು

೧೦. ನಾಸುಹೃತ್ ಪರಮಂ ಮಂತ್ರ ಭಾರತಾರ್ಹತಿ ವೇದಿತುಮ್ ।
ಅಪಂಡಿತೋ ವಾಽಪಿ ಸುಹೃತ್ ಪಂಡಿತೋ ವಾಽಪ್ಯನಾತ್ಮವಾನ್ ॥
- ಮ.ಭಾ. (೫/೩೮/೧೮)

ಮುಖ್ಯವಾದ ಮಂತ್ರಾಲೋಚನೆಯನ್ನು ವೈರಿಗಳು ಎಂದೂ ಅರಿಯಕೂಡದು; ಪಂಡಿತನಲ್ಲದ ಮಿತ್ರನೂ ತಿಳಿಯಕೂಡದು; ಮನೋನಿಗ್ರಹವಿಲ್ಲದ ಪಂಡಿತನೂ ತಿಳಿಯಕೂಡದು (ಇವರಲ್ಲಿ ಯಾರು ತಿಳಿದರೂ ರಹಸ್ಯ ಬಯಲಾಗುವ ಅಪಾಯವುಂಟು ಎಂದು ಭಾವ).

೧೧. ನ ಶತ್ರುರ್ವಶಮಾಪನ್ನೋ ಮೋಕ್ತವ್ಯೋ ವಧ್ಯತಾಂ ಗತಃ ।
ನ್ಯಗ್ಭೂತ್ವಾ ಪರ್ಯುಪಾಸೀತ ವಧ್ಯಂ ಹನ್ಯಾತ್ ಬಲೇ ಸತಿ ॥
ಅಹತಾದ್ಧಿ ಭಯಂ ತಸ್ಮಾತ್ ಜಾಯತೇ ನ ಚಿರಾದಿವ ॥
- ಮ.ಭಾ. (೫/೩೮/೨೯)

ವಧಾರ್ಹನಾದ ಶತ್ರುವು ಕೈಗೆ ಸಿಕ್ಕಾಗ ಎಂದೂ ಅವನನ್ನು ಬಿಡಕೂಡದು. ತಾನು ಅವನಿಗಿಂತ ದುರ್ಬಲನಾಗಿದ್ದಾಗ ಮಾತ್ರ ಅವನನ್ನು ಅನುಸರಿಸಿಕೊಂಡಿರಬೇಕು. ಸಂಹರಿಸುವ ಸಾಮರ್ಥ್ಯವಿದ್ದಾಗ ಸಂಹರಿಸಲೇಬೇಕು; ಅವನನ್ನು ಕೊಲ್ಲದೆ ಬಿಟ್ಟಲ್ಲಿ ಬೇಗನೇ ಅವನಿಂದ ಅಪಾಯ ಒದಗುವುದು ಖಚಿತ (ಇದು ಕ್ಷತ್ರಿಯರ ಪಾಲಿಗೆ ವಿಹಿತವಾದ ಕರ್ತವ್ಯ).

೧೨. ದೈವತೇಷು ಪ್ರಯತ್ನೇನ ರಾಜಸು ಬ್ರಾಹ್ಮಣೇಷು ಚ ।
ನಿಯಂತವ್ಯಃ ಸದಾ ಕ್ರೋಧೋ ವೃದ್ಧ ಬಾಲಾತುರೇಷು ಚ ॥
- ಮ.ಭಾ. (೫/೩೮/೩೦)

ದೇವತೆಗಳು, ರಾಜರು, ಬ್ರಾಹ್ಮಣರು, ವೃದ್ಧರು, ಬಾಲಕರು ಮತ್ತು ರೋಗಿಗಳ ವಿಷಯದಲ್ಲಿ ಉಂಟಾಗುವ ಕೋಪವನ್ನು ಎಲ್ಲ ರೀತಿಯ ಪ್ರಯತ್ನದಿಂದಲೂ ಸದಾ ನಿಯಂತ್ರಿಸಿಕೊಳ್ಳಬೇಕು (ಇವರ ಮೇಲೆ ಎಂದೂ ಕೋಪಗೊಳ್ಳಬಾರದು).

೧೩. ಅಲ್ಪಾರ್ಥಂ ಕಲಹಂ ಪ್ರಾಜ್ಞೋ ವರ್ಜಯೇನ್ಮೂಢಸೇವಿತಾಮ್ ।
ಕೀರ್ತಿಂ ಚ ಲಭತೇ ಲೋಕೇ ನ ಚಾನರ್ಥೇನ ಯುಜ್ಯತೇ ॥
ಮ.ಭಾ. (೫/೩೮/೩೧)

ಮೂರ್ಖರು ಮಾತ್ರವೇ ಮಾಡಬಹುದಾದಂತಹ ಅಲ್ಪ ಪ್ರಯೋಜನದ ಕಲಹವನ್ನು ಪ್ರಾಜ್ಞನಾದವನು ಎಂದೂ ಮಾಡಕೂಡದು; ಅಂತಹ ಕಲಹವನ್ನು ತೊರೆಯುವುದರಿಂದ

ಕೀರ್ತಿ ಲಭಿಸುತ್ತದೆ; ಅನರ್ಥವಂತೂ ಒದಗುವುದೇ ಇಲ್ಲ (ಅಲ್ಪಪ್ರಯೋಜನದ ಕಲಹವೇ ಮೂರ್ಖತನ ಎಂದ ಮೇಲೆ ಪ್ರಯೋಜನ ರಹಿತ ಕಲಹ ಹೇಯ ಎಂಬುದು ಕೈಮುತ್ಯಸಿದ್ಧ ಎಂದೂ ಭಾವ).

**೧೪. ಅನಧೀತ್ಯ ಯಥಾ ವೇದಾನ್ ನ ವಿಪ್ರಃ ಶ್ರಾದ್ಧಮರ್ಹತಿ ।**
**ಏವಮಶ್ರುತಷಾಡ್ಗುಣ್ಯೋ[1] ನ ಮಂತ್ರಂ ಶ್ರೋತುಮರ್ಹತಿ ॥**

ವೇದಾಧ್ಯಯನ ಮಾಡದ ಬ್ರಾಹ್ಮಣನು ಶ್ರಾದ್ಧಭೋಜನಕ್ಕೆ ಅರ್ಹನೆನ್ನಿಸುವುದಿಲ್ಲ; ಅದೇ ರೀತಿ ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವಗಳೆಂಬ ಆರು ಗುಣಗಳನ್ನು ತಿಳಿಸಿಕೊಡುವ (ರಾಜನೀತಿ) ಶಾಸ್ತ್ರವನ್ನು ಶ್ರವಣ ಮಾಡದವನು (ಅಥವಾ ಷಡ್ಗುಣ ಸಂಪನ್ನನಾದ ಪರಮಾತ್ಮನನ್ನು ತಿಳಿಸಿಕೊಡುವ ಶಾಸ್ತ್ರಗಳನ್ನು ಶ್ರವಣ ಮಾಡದವನು) ಮಂತ್ರಾಲೋಚನೆಗೆ ಅರ್ಹನೆನ್ನಿಸಲಾರನು (ಅಂತಹವನೊಂದಿಗೆ ಮಂತ್ರಾಲೋಚನೆ ನಡೆಸಕೂಡದು ಎಂದು ಭಾವ).

**೧೫. ಸ್ಥಾನವೃದ್ಧಿಕ್ಷಯಜ್ಞಸ್ಯ ಷಾಡ್ಗುಣ್ಯವಿದಿತಾತ್ಮನಃ[2] ।**
**ಅನವಜ್ಞಾತಶೀಲಸ್ಯ ಸ್ವಾಧೀನಾ ಪೃಥವೀ ನೃಪ ॥**

ಹೀಗೆ ಮಾಡಿದಲ್ಲಿ ಸ್ಥಾನ (ಆಯವ್ಯಯಯೋಃ ಸಮತಯಾ ಸ್ಥಿತಿರ್ಭವತಿ – ಆಯವ್ಯಯಗಳ ಸಮಸ್ಥಿತಿ) ಹೀಗೆ ಮಾಡಿದಲ್ಲಿ ವೃದ್ಧಿ. ಹೀಗೆ ಮಾಡಿದಲ್ಲಿ ಕ್ಷಯ (ಫಲಹ್ರಾಸ) ಎಂದು ಬಲ್ಲಂತಹ, ಷಡ್ಗುಣಸಂಪನ್ನನಾದ ಪರಮಾತ್ಮನನ್ನು ಅರಿತ (ಅಥವಾ ಹಿಂದೆ ಹೇಳಿದ ಸಂಧಿ ಮೊದಲಾದ ಆರು ಗುಣಗಳನ್ನು ಬಲ್ಲ) ಶತ್ರುಗಳಿಗೆ ತನ್ನ ರಹಸ್ಯ ತಿಳಿಯದಂತೆ ಎಚ್ಚರ ವಹಿಸುವಂತಹ ರಾಜನಿಗೆ ಇಡೀ ಪೃಥಿವಿಯು ವಶವಾಗುವುದು.

**೧೬. ಅವಿಸಂವಾದಕೋ ದಕ್ಷಃ ಕೃತಜ್ಞೋ ಮತಿಮಾನ್ ಋಜುಃ ।**
**ಅಪಿ ಸಂಕ್ಷೀಣಕೋಶೋऽಪಿ ಲಭತೇ ಪರಿವಾರಣಮ್ ॥**

**– ಮ.ಭಾ. (೫/೩೮/೩೭)**

ಆಡಿದ ಮಾತಿಗೆ ತಪ್ಪದೆ ಇರುವವನು, ನಿಪುಣನು, ಕೃತಜ್ಞನು, ಬುದ್ಧಿವಂತನು, ಋಜುಸ್ವಭಾವದವನು ಆದವನು ಧನಹೀನನಾಗಿದ್ದರೂ ಸಹ ಜನಗಳ ಆದರಕ್ಕೆ

---

೧ ಅಶ್ರುತಷಾಡ್ಗುಣ್ಯಃ – ಸಂಧಿವಿಗ್ರಹಯಾನಾಸನಸಂಶ್ರಯದ್ವೈಧೀಭಾವಲಕ್ಷಣಷಾಡ್ಗುಣ್ಯಪ್ರತಿಪಾದಕ ಶಾಸ್ತ್ರಶ್ರವಣರಹಿತಃ । – ವ್ಯಾ

೨ ಷಡ್ಗುಣಃ – ಪರಮಾತ್ಮಾ – ಸ್ವಾರ್ಥೇ ... ಷಾಡ್ಗುಣ್ಯಃ ವಿದಿತಃ ಯೇನ ಸ ಚಾಸೌ ಆತ್ಮಾ ಜೀವಶ್ಚ । ಯದ್ವಾ, ಪೂರ್ವೋಕ್ತಷಾಡ್ಗುಣ್ಯವಿಚ್ಚಾಸೌ ಆತ್ಮಾ ಚೇತಿ ತಸ್ಯ । – ವ್ಯಾ

ಪಾತ್ರನಾಗುತ್ತಾನೆ.[1] (ಇಂತಹವನು ಭೃತ್ಯಾದಿ ಪರಿವಾರವನ್ನು ಹೊಂದುತ್ತಾನೆ, ಪೂಜ್ಯನಾಗುತ್ತಾನೆ ಎಂದ ಭಾವ).

೧೭. ಧೃತಿಃ ಶಮೋ ದಮಃ ಶೌಚಂ ಕಾರುಣ್ಯಂ ವಾಗನಿಷ್ಠುರಾ ।
ಮಿತ್ರಾಣಾಂ ಚಾನಭಿದ್ರೋಹಃ ಸಪ್ತೈತಾಃ ಸಮಿಧಃ ಶ್ರಿಯಃ ॥
- ಮ.ಭಾ. (೫/೩೮/೩೮)

ಧೈರ್ಯ, ಭಗವನ್ನಿಷ್ಠೆ , ಇಂದ್ರಿಯನಿಗ್ರಹ, ನೈರ್ಮಲ್ಯ, ಅರ್ಹರ ಬಗ್ಗೆ ಕಾರುಣ್ಯ, ನಿಷ್ಠುರವಲ್ಲದ ಮಾತು, ಮಿತ್ರರಿಗೆ ದ್ರೋಹ ಬಗೆಯದಿರುವಿಕೆ ಈ ಏಳೂ ಸಂಪತ್ತಿಗೆ ಸಮಿತ್ತುಗಳಿದ್ದಂತೆ (ಸಂಪದಭಿವೃದ್ಧಿಯ ಮುಖ್ಯ ಸಾಧನಗಳು ಎಂದು ಭಾವ).

೧೮. ಯೇಽರ್ಥಾಃ ಸ್ತ್ರೀಷು ಸಮಾಯುಕ್ತಾಃ ಪ್ರಮತ್ತಪತಿತೇಷು ಚ ।
ಯೇ ಚಾನಾರ್ಯೇ ಸಮಾಸಕ್ತಾಃ ಸರ್ವೇ ತೇ [2]ಸಂಶಯಂ ಗತಾಃ ॥
- ಮ.ಭಾ. (೫/೩೮/೪೨)

(ಕಾಮುಕ) ಸ್ತ್ರೀಯರಲ್ಲಿ, ಮದ್ಯಪಾನಾದಿಗಳಿಂದ ಮೈಮರೆತವರಲ್ಲಿ, (ಬ್ರಹ್ಮಹತ್ಯಾದಿ ಪಾತಕಗಳಿಂದಾಗಿ) ಪತಿತರಾದವರಲ್ಲಿ ಮತ್ತು ನೀಚರಲ್ಲಿ ಒಪ್ಪಿಸಲ್ಪಡುವ ಐಶ್ವರ್ಯವು ಪೂರ್ಣ ಕೈಬಿಟ್ಟು ಹೋದಂತೆಯೇ ಸರಿ.

೧೯. ಯತ್ರ ಸ್ತ್ರೀ ಯತ್ರ ಕಿತವೋ ಬಾಲೋ[3] ಯತ್ರಾನುಶಾಸಿತಾ ।
ಮಜ್ಜಂತಿ ತೇಽವಶಾ ರಾಜನ್ ನದ್ಯಾಮಶ್ಮಪ್ಲವಾ ಇವ ॥
- ಮ.ಭಾ. (೫/೩೮/೪೩)

ಸ್ತ್ರೀಯಾಗಲೀ, ಧೂರ್ತನಾಗಲೀ, ಬಾಲಕನಾಗಲೀ ಯಾವ ಮನೆಯಲ್ಲಿ ನಾಯಕತ್ವ ವಹಿಸುವರೋ ಅಲ್ಲಿಯ ಜನಗಳೆಲ್ಲ - ನದಿಯಲ್ಲಿ ಕಲ್ಲಿನ ದೋಣಿಗಳು ಹೇಗೋ ಹಾಗೆ ಮುಳುಗಿ ಹೋಗುವರು (ಇಲ್ಲಿ ಸ್ತ್ರೀ ಎಂದರೆ ಕಾಮುಕ ಸ್ತ್ರೀ ಎಂದೂ, ಪರಾಧೀನ ವ್ಯಕ್ತಿ ಎಂದು ತಿಳಿಯಬೇಕು).

೨೦. ಯಂ ಪ್ರಶಂಸಂತಿ ಕಿತವಾಃ ಯಂ ಪ್ರಶಂಸಂತಿ ಚಾರಣಾಃ ।
ಯಂ ಪ್ರಶಂಸಂತಿ ಬಂಧಕ್ಯೋ ನ ಸ ಜೀವತಿ ಮಾನವಃ ॥
- ಮ.ಭಾ. (೫/೩೮/೪೫)

---

೧ ಗುಣಲೌಭ್ಯಾತ್ ಸೌಲಭ್ಯಂ ಜನಾನಾಂ ತಸ್ಯೇತಿ ಜ್ಞೇಯಮ್ । -ವ್ಯಾ

೨ ಸಂದೇಹಾದಿ ಶಬ್ದ ಮಪ್ರಯುಜ್ಯ ಸಂ ಶಬ್ದಂ ಪ್ರಯುಂಜಾನಃ ಸಮ್ಯಕ್ ಸಂಶಯಂ ಹಸ್ತಂ ಗತಾ ಇತಿ ಹೇತೋಃ ಸಂಶಯಂ ಗತಾಃ ಪರಹಸ್ತಗತಂ ಗತಂ ಇತ್ಯಾದೇಃ । -ವ್ಯಾ

೩. ಬಾಲಃ - ಮೂರ್ಖಃ । -ವ್ಯಾ

ಧೂರ್ತ(ಜುಜೂಕೋರ)ರಾಗಲೀ, ಚಾರಣ(ಕುಶೀಲವ)ರಾಗಲೀ, ಸ್ವೈರಿಣಿಯರಾಗಲೀ ಯಾವನನ್ನು ಹೊಗಳುವರೋ, ಅಂತಹ ಮನುಷ್ಯನು ಸತ್ತಂತೆಯೇ ಸರಿ. (ಜೂಜುಕೋರರು, ಸ್ವೈರಿಣಿಯರು ಸ್ವತಃ ಕೆಟ್ಟವರು. ಅಂತಹವರಿಂದ ಹೊಗಳಿಸಿಕೊಳ್ಳುವವನು ಸಹ ಕೆಟ್ಟವನೇ ಅಲ್ಲವೇ! ಇನ್ನು ಚಾರಣರು ಹೊಟ್ಟೆಪಾಡಿಗಾಗಿ ಹೊಗಳುವ ಜನ – ಅಂತಹವರು ಮಾತ್ರವೇ ಹೊಗಳುವುದು ಎಂದೂ ದೊಡ್ಡಸ್ತಿಕೆ ಕಾರಣವಾಗುವುದಿಲ್ಲ ಎಂದು ಭಾವ.)

೨೧. ನ [೧]ವೃದ್ಧಿರ್ಬಹುಮಂತವ್ಯಾ ಯಾ ವೃದ್ಧಿಃ ಕ್ಷಯಮಾವಹೇತ್ ।
ಕ್ಷಯೋಽಪಿ ಬಹುಮಂತವ್ಯೋ ಯಃ ಕ್ಷಯೋ ವೃದ್ಧಿ ಮಾವಹೇತ್ ॥
- ಮ.ಭಾ. (೫/೩೯/೭)

ಮುಂದೆ ಕ್ಷಯಕ್ಕೆ ಕಾರಣವಾಗುವ (ಜೂಜಾಟ ಮೊದಲಾದವುಗಳಿಂದ ದೊರೆಯುವ) ಲಾಭ ನಿಜವಾದ ಲಾಭವಲ್ಲ. ಆದರೆ ಮುಂದೆ ಒಳಿತಿಗೆ ಕಾರಣವಾಗುವ ಕ್ಷಯವು ಸಹ ಲಾಭದಂತೆಯೇ ಮಾನ್ಯವೇ ಆಗುವುದು.

೨೨. ನ ಕಶ್ಚಿನ್ನಾಪನಯತೇ ಪುಮಾನನ್ಯತ್ರ [೨]ಭಾರ್ಗವಾತ್ ।
ಶೇಷಸಂಪ್ರತಿಪತ್ತಿಸ್ತು ಬುದ್ಧಿಮತ್ಸ್ವೇವ ತಿಷ್ಠತಿ ॥
- ಮ.ಭಾ. (೫/೩೯/೩೦)

ಶುಕ್ರಾಚಾರ್ಯರನ್ನು ಬಿಟ್ಟರೆ ಬೇರೆ ಯಾವನು ತಾನೇ ಅನ್ಯಾಯ ಮಾಡಿ ಅನಂತರ ತಿದ್ದಿಕೊಂಡಾನು? ಅಪರಾಧಮಾಡಿದ ಅನಂತರ ಅಂತಹ ಅಪರಾಧದ ಪರಿಹಾರಕ್ಕಾಗಿ ಯತ್ನಿಸುವುದು ಬುದ್ಧಿವಂತರಿಗೆ ಮಾತ್ರ ಸಾಧ್ಯವಾಗುತ್ತದೆ. (ತಪ್ಪು ಮಾಡಿದವನು ಅದನ್ನು ಸರಿಪಡಿಸಿಕೊಳ್ಳುವುದರಲ್ಲಿ ಜಾಣತನವಿದೆ ಎಂದು ಭಾವ.) (ಶುಕ್ರಾಚಾರ್ಯರು ಒಮ್ಮೆ ಕುಬೇರನ ಧನವನ್ನು ಅಪಹರಿಸಿಬಿಟ್ಟರು. ಕುಬೇರ ತಮ್ಮ ಸ್ನೇಹಿತನಾದ್ದರಿಂದ ರುದ್ರದೇವರು ಶುಕ್ರಾಚಾರ್ಯರನ್ನು ನುಂಗಿಬಿಟ್ಟರು. ಹತ್ತು ಸಾವಿರ ವರ್ಷಗಳಷ್ಟು ದೀರ್ಘಕಾಲ ರುದ್ರದೇವರ ಉದರದಲ್ಲೇ ಇದ್ದ ಶುಕ್ರಾಚಾರ್ಯರು ಕೊನೆಗೆ ಪಾರ್ವತೀದೇವಿಯನ್ನು ಸ್ತುತಿಸಿ ಅವರ ಅನುಗ್ರಹದಿಂದ ಪುನಃ ರುದ್ರದೇವರಿಂದ ಬಿಡುಗಡೆ ಹೊಂದಿ ಹೊರಕ್ಕೆ ಬಂದರು; ಅಂದಿನಿಂದ ಇಂತಹ ಅಪರಾಧವನ್ನು ಅವರು ಮತ್ತೆಂದೂ ಮಾಡಲಿಲ್ಲ.

---

೧ ವೃದ್ಧಿಃ ದ್ಯೂತಾದಿನಾ ಪ್ರಾಪ್ತೇಂದ್ರಪ್ರಸ್ಥಾದಿಪ್ರಾಪ್ತಧನವೃದ್ಧಿಃ ನ ಬಹುಮಂತವ್ಯಾ ಅಂತತಃ ಕ್ಷಯಕಾರಿತ್ವಾತ್ । - ವ್ಯಾ

೨ ಶುಕ್ರಸ್ತು ಸ್ವಬುದ್ಧಿ ಬಲಾತ್ ಪೂರ್ವಂ ಅಪರಾಧಕೃದಪಿ ತಂ ಪರ್ಯಾವರ್ತಿತವಾನ್ । ಅತ್ರೈಷಾ ಪೌರಾಣಿಕೀ ಕಥಾ । ಶುಕ್ರಃ ಕದಾಚಿತ್ ಧನಪತೇರ್ಧನಂ ಜಹಾರ । ತನ್ಮಿತ್ರಮಿತಿ ತ್ರ್ಯಕ್ಷಃ ಶುಕ್ರಮಭಕ್ಷಯತ್ । ದಶವರ್ಷಸಹಸ್ರಪರ್ಯಂತಂ ತತ್ಕುಕ್ಷಿಸ್ಥಿತೋಽಸೌ ರುದ್ರಾಣ್ಯಾ ಸ್ವಸ್ತು ತಪರಿತುಷ್ಟಯಾ ಮೋಚಿತಃ ಸನ್ ತತಃ ಪ್ರಭೃತಿ ಕಸ್ಯಾಪಿ ನಾಪರಾಧ್ಯತೀತಿ ॥ -ವ್ಯಾ

ಇಂತಹದು ಎಲ್ಲರಿಗೂ ಅಶಕ್ಯವಾದ್ದರಿಂದ ತಪ್ಪು ಮಾಡದಿರುವುದರಲ್ಲೇ ವಿವೇಕವಿದೆ ಎಂದು ಭಾವ. (ಈ ಕಥೆಯು ಮಹಾಭಾರತದಲ್ಲಿ ಬಂದಿದೆ.)

**೨೩. ಸುವ್ಯಾಹೃತಾನಿ ಧೀರಾಣಾಂ ಫಲತಃ ಪರಿಚಿಂತ್ಯ ಯಃ ।**
**ಅಧ್ಯವಸ್ಯತಿ ಕಾರ್ಯೇಷು ಚಿರಂ ಯಶಸಿ ತಿಷ್ಠತಿ ॥** - ಮ.ಭಾ. (೫/೩೯/೩೩)

ವಿಚಾರಶೀಲರ ಮಾತುಗಳನ್ನು, ಅವು ತಪ್ಪದೆ ನಡೆಯುವುದನ್ನು ಗಮನಿಸಿ, ಅವುಗಳಂತೆ ಯಾವನು ನಡೆಯುವನೋ ಅವನು ಚಿರಕಾಲ ಯಶೋಭಾಜನನಾಗುತ್ತಾನೆ; (ವಿವೇಕಿಗಳ ಮಾತು ಎಂದೂ ಸುಳ್ಳಾಗುವುದಿಲ್ಲ ಎಂದು ಭಾವ).

**೨೪. ಪಾಪೋದಯಫಲಂ ವಿದ್ವಾನ್ ಯೋ ನಾರಭತಿ ವರ್ಧತೇ ।**
**ಯಸ್ತು ಪೂರ್ವಕೃತಂ ಪಾಪಮವಿಮೃಶ್ಯಾನುವರ್ತತೇ ।**
**ಅಗಾಧಪಂಕೇ ದುರ್ಮೇಧಾ ವಿಷಮೇ ವಿನಿಪಾತ್ಯತೇ ॥**
- ಮ.ಭಾ. (೫/೩೯/೩೫)

ಪಾಪಾಭಿವೃದ್ಧಿಗೆ ಕಾರಣವಾಗುವ ಕಾರ್ಯಕ್ಕೆ ಕೈಹಾಕದ ವಿದ್ವಾಂಸನು ಉನ್ನತಿಗಳಿಸುತ್ತಾನೆ; ಹಿಂದೆ ಮಾಡಿದ ಪಾಪದ ದುಷ್ಪರಿಣಾಮವನ್ನು ವಿಚಾರಮಾಡದೆ ಯಾವನು ಬದುಕುವನೋ ಅಂತಹ ಮೂರ್ಖನು ಅಗಾಧವಾದ ನರಕದಲ್ಲಿ ಬೀಳುವನು. ([೧]ಅವಿಮೃಶ್ಯ - ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು ಪರಿಹರಿಸಿಕೊಳ್ಳದೆ ಇದ್ದರೆ, ಎಂದರ್ಥ)

**೨೫. ಮದಂ ಸ್ವಪ್ನಮವಿಜ್ಞಾನಮಾಕಾರಂ ಚಾತ್ಮಸಂಭವಮ್ ।**
**ದುಷ್ಟಾಮಾತ್ಯೇಷು ವಿಶ್ರಂಭಂ ದೂತಾಚ್ಚಾಕುಶಲಾದಪಿ ॥**
**ದ್ವಾರಾಣ್ಯೇತಾನಿ ಯೋ ಜ್ಞಾತ್ವಾ ಸಂವೃಣೋತಿ ಸದಾ ನೃಪ ।**
**ತ್ರಿವರ್ಗಾಚರಣೇ ಯುಕ್ತಃ ಸ ಶತ್ರೂನಧಿತಿಷ್ಠತಿ ॥**
- ಮ.ಭಾ. (೫/೩೯/೩೫,೩೬)

ಸೊಕ್ಕು, ಅಕಾಲದಲ್ಲಿ ಮಾಡುವ ನಿದ್ರೆ, ಸರಿಯಾದ ತಿಳುವಳಿಕೆಯ ಅಭಾವ, ತಾನು ಮಾಡುವ ಭ್ರೂವಿಕಾರಾದಿ ಚೇಷ್ಟೆಗಳು, ದುಷ್ಟರಾದ ಮಂತ್ರಿಗಳಲ್ಲಿ ತೋರುವ ವಿಶ್ವಾಸ ಮತ್ತು ಕುಶಲನಲ್ಲದ ದೂತ - ಈ ಆರೂ ಮಂತ್ರಾಲೋಚನೆಯನ್ನು ಬಹಿರಂಗಪಡಿಸುವ ಮುಖ್ಯದ್ವಾರಗಳು. ಇವುಗಳಿಗೆ ಅವಕಾಶವಿಲ್ಲದಂತೆ ಎಚ್ಚರವಹಿಸಿ ಯಾವನು ತ್ರಿವರ್ಗ (ಧರ್ಮ, ಅರ್ಥ, ಕಾಮ)ಗಳ ಸಂಪಾದನೆ ಮಾಡುವನೋ, ಅಂತಹವನು ಶತ್ರುಗಳನ್ನು ಮೆಟ್ಟಿನಿಲ್ಲುವನು.

---

೧ ಪ್ರಾಯಶ್ಚಿತ್ತಚರಣಾದಿನಾ ಫಲಪ್ರದಮಕೃತ್ವಾ ಅನುವರ್ತತೇ ತದನುಸಾರೇಣ ಪ್ರವರ್ತತೇ -ವ್ಯಾ

೨೬. ನ ವೈ ಶ್ರುತಮವಿಜ್ಞಾಯ ವೃದ್ಧಾನನುಪಸೇವ್ಯ ವಾ ।
ಧರ್ಮಾರ್ಥೌ ವೇದಿತುಂ ಶಕ್ಯೌ ಬೃಹಸ್ಪತಿಸಮೈರಪಿ ॥

- ಮ.ಭಾ. (೫/೩೯/೩೯)

ಶಾಸ್ತ್ರಗಳನ್ನು ಅಧ್ಯಯನ ಮಾಡದೆ, ವಯೋವೃದ್ಧ ಜ್ಞಾನವೃದ್ಧರನ್ನು ಸೇವಿಸದೆ, ಬೃಹಸ್ಪತಿಗೆ ಸಮರಾದ ಬುದ್ಧಿವಂತರಿಂದಲೂಸಹ ಧರ್ಮಾರ್ಥಗಳನ್ನು ಯಥಾವತ್ತಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. (ಧರ್ಮಾದಿಗಳ ಪರಿಜ್ಞಾನಕ್ಕೆ ಶಾಸ್ತ್ರಾಧ್ಯಯನ ಮತ್ತು ಗುರುಗಳ ಅನುಗ್ರಹಗಳು ಅತ್ಯವಶ್ಯ ಎಂದು ಭಾವ)[1].

೨೭. ನಷ್ಟಂ ಸಮುದ್ರೇ ಪತಿತಂ ನಷ್ಟಂ ವಾಕ್ಯಮಶೃಣ್ವತಿ ।
ಅನಾತ್ಮನಿ ಶ್ರುತಂ ನಷ್ಟಂ ನಷ್ಟಂ ಹುತಮನಗ್ನಿಕಮ್ ॥

- ಮ.ಭಾ. (೫/೩೯/೪೦)

(ನಾವಿಕರಿಗೂ ಎಟುಕದಂತಹ ಸ್ಥಳದಲ್ಲಿ) ಸಮುದ್ರದಲ್ಲಿ ಬಿದ್ದ ವಸ್ತುವು ಮತ್ತೆಂದೂ ಸಿಕ್ಕದು; ಹೇಳಿದ ಮಾತನ್ನು ಕೇಳುವ ಮನೋಭಾವವೇ ಇಲ್ಲದವನಲ್ಲಿ ಹೇಳಿದ ವಾಕ್ಯ ವ್ಯರ್ಥ; ಜಿತೇಂದ್ರಿಯನಲ್ಲದವನಲ್ಲಿ ಉಪದೇಶಿಸಲ್ಪಡುವ ಶಾಸ್ತ್ರವು ನಿಷ್ಫಲ; ಬೆಂಕಿಯಿಲ್ಲದೆ ಬರೀ ಬೂದಿಯಲ್ಲಿ ಮಾಡುವ ಹೋಮವೂ ವ್ಯರ್ಥವೇ (ನಾನು ನಿನಗೆ ಹೇಳುತ್ತಿರುವ ಮಾತೂ ಸಹ ಹೀಗೆಯೇ - ಎಂಬುದು ವಿದುರನ ಮಾತಿನಲ್ಲಿಯ ಧ್ವನಿ)[2].

೨೮. ಅಕೀರ್ತಿಂ ವಿನಯೋ ಹಂತಿ ಹಂತ್ಯನರ್ಥಂ ಪರಾಕ್ರಮಃ ।
ಹಂತಿ ನಿತ್ಯಂ ಕ್ಷಮಾ ಕ್ರೋಧಮಾಚಾರೋ ಹಂತ್ಯಲಕ್ಷಣಮ್ ॥

- ಮ.ಭಾ. (೫/೩೯/೪೨)

ವಿನಯವು ಅಪಕೀರ್ತಿಯನ್ನು ಪರಿಹರಿಸುತ್ತದೆ. (ವಿನಯ ಇಲ್ಲವಾದಲ್ಲಿ ಅಪಕೀರ್ತಿ ಹೋಗುವುದಿಲ್ಲ ಎಂದು ಭಾವ); ಪರಾಕ್ರಮವು ಅನರ್ಥ (ಜನಪರಾಭವ)ವನ್ನು ಪರಿಹರಿಸುತ್ತದೆ; ಕ್ಷಮೆ ಕ್ರೋಧವನ್ನು ನಾಶಪಡಿಸುತ್ತದೆ; ಸದಾಚಾರವು ಅಲಕ್ಷಣ (ದುರ್ಲಕ್ಷಣ)ವನ್ನು ಪರಿಹರಿಸುತ್ತದೆ. (ಸದಾಚಾರದಿಂದ ಸಲ್ಲಕ್ಷಣಪ್ರಾಪ್ತವಾಗಿ ಸಿದ್ಧಿಯು ಲಭಿಸುವುದು ಎಂದು ಭಾವ.) ಸದಾಚಾರದಿಂದ ಶರೀರದಲ್ಲಿನ ಕೆಟ್ಟ ಲಕ್ಷಣಗಳು ದೂರಾಗುತ್ತವೆ ಎಂದೂ ಅರ್ಥ.

---

೧ ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವ ದರ್ಶಿನಃ - ಗೀತಾ

೨ 'ಅರ್ಥಾನ್ಮದ್ವಚನಂ ತ್ವಯ್ಯೇವಂ ಇತಿ ಸೂಚಯನ್ ವಕ್ತಿ'। - ವ್ಯಾ

೨೯. ಪರಿಚ್ಛೇದೇನ ಕ್ಷೇತ್ರೇಣ ವೇಶ್ಮನಾ ಧರ್ಮಚರ್ಯಯಾ[೧] ।
ಪರೀಕ್ಷೇತ ಕುಲಂ ರಾಜನ್ ಭೋಜನಾಚ್ಛಾದನೇನ ಚ ॥
- ಮ.ಭಾ. (೫/೩೯/೪೩)

ಒಬ್ಬನ ಸುತ್ತ ಇರುವ ಜನಗಳು ಮತ್ತು ಅವನು ಬಳಸುವ ಉಪಕರಣಗಳು, ವಾಸಿಸುವ ಸ್ಥಳ, ಮನೆ, ಧರ್ಮಾಚರಣೆಯ ರೀತಿ, ಆಹಾರ ಮತ್ತು ಉಡುಪು ತೊಡುಪುಗಳನ್ನು ಗಮನಿಸಿ, ಅವೆಲ್ಲವುಗಳ ಆಧಾರದ ಮೇಲೆ ಅವನ ಯೋಗ್ಯತೆ ಮತ್ತು ಕುಲಗಳನ್ನು ಪರೀಕ್ಷಿಸಬೇಕು.

೩೦. ದುಷ್ಕುಲೀನಃ ಕುಲೀನೋ ವಾ ಮರ್ಯಾದಾಂ ಯೋ ನ ಲಂಘಯೇತ್ ।
ಧರ್ಮಾಪೇಕ್ಷೀ ಮೃದುರ್ಹ್ರೀಮಾನ್ ಸ ಕುಲೀನಶತಾದ್ ವರಃ ॥
- ಮ.ಭಾ. (೫/೩೯/೪೬)

ದುಷ್ಕುಲದವನೇ ಇರಲಿ, ಸತ್ಕುಲದವನೇ ಇರಲಿ, ಯಾವನು ಧರ್ಮ ಸಂಪಾದನೆಯ ಅಪೇಕ್ಷೆಯಿಂದ ಶಾಸ್ತ್ರಸಂಪ್ರದಾಯದಿಂದ ಬಂದ ನೀತಿಯನ್ನು ಮೀರದೆ ನಡೆದು-ಕೊಳ್ಳುವನೋ, ಮೃದುವೂ, ಬುದ್ಧಿವಂತನೂ, ಲಜ್ಜಾಶೀಲನೂ ಆಗಿರುವನೋ, ಅಂತಹವನು ಹಾಗಿಲ್ಲದ ನೂರು ಜನ ಕುಲೀನರಿಗಿಂತಲೂ ಉತ್ತಮನು (ಸ್ವಧರ್ಮಾಚರಣೆಯೇ ನಿಜವಾದ ಕುಲೀನತೆ ಎಂದು ಭಾವ).

೩೧. ಅವಲಿಪ್ತೇಷು ಮೂರ್ಖೇಷು ರೌದ್ರಸಾಹಸಿಕೇಷು ಚ ।
ತಥೈವಾಪೇತಧರ್ಮೇಷು[೨] ನ ಮೈತ್ರೀಮಾಚರೇದ್ ಬುಧಃ ॥
- ಮ.ಭಾ. (೫/೩೯/೪೯)

ದುರಹಂಕಾರಿಗಳಲ್ಲೂ, ಮೂರ್ಖರಲ್ಲೂ, ಕೋಪಿಷ್ಠರಲ್ಲೂ, ದುಸ್ಸಾಹಸ ಮಾಡು-ವವರಲ್ಲೂ, ಧರ್ಮವನ್ನು ಕೈಬಿಟ್ಟವರಲ್ಲೂ ಜ್ಞಾನಿಯಾದವನು ಸ್ನೇಹವನ್ನು ಬೆಳೆಸಬಾರದು[೩].

---

೧ ಧರ್ಮಚರ್ಯಯಾ (ಕುಲಪರಂಪರಾಪ್ರಾಪ್ತ ಸದಾಚಾರೇಣ) – ವ್ಯಾ

೨ ಅಪೇತಧರ್ಮೇಷು – ಕೇವಲತ್ವೇಽಪ್ಯನಿಜಭಾವಃ ಆರ್ಷಃ । ಯದ್ವಾನ್ಯ ಇತಾಃ ಸಂಪ್ರದಾಯಗತಾಃ ಧರ್ಮಾಃ ಇತಧರ್ಮಾಃ ಅಪಗತಾ ಇತರಧರ್ಮಾ ಯೈಸ್ತೇ ತಥಾ ತೇಷು – ಅತೋ ಕೇವಲತ್ವಾನ್ನಾನಿ ಚ ॥ – ವ್ಯಾ

೩. ಅಜ್ಞಾನಿಗಳ ಕೂಡೆ ಅಧಿಕಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೇ ಲೇಸು ॥ – ಶ್ರೀ ಕನಕದಾಸರು

೩೨. ಕೃತಜ್ಞಂ ಧಾರ್ಮಿಕಂ ಸತ್ಯಮಕ್ಷುದ್ರಂ ದೃಢಭಕ್ತಿಕಮ್ ।
ಜಿತೇಂದ್ರಿಯಂ ಸ್ಥಿತಂ ಸ್ಥಿತ್ಯಾಂ ಮಿಶ್ರಮತ್ಯಾಗಿ ಚೇಷ್ಯತೇ ॥
- ಮ.ಭಾ. (೫/೩೯/೫೦)

ಮಾಡಿದ ಉಪಕಾರವನ್ನು ಸ್ಮರಿಸುವವನು, ಧಾರ್ಮಿಕನು, ಸತ್ಯಸಂಧನು, ನೀಚನಲ್ಲದವನು, ದೃಢವಾದ ವಿಶ್ವಾಸವನ್ನುಳ್ಳವನು, ಜಿತೇಂದ್ರಿಯನು, ಕ್ಷೇಮ ಮಾರ್ಗದಲ್ಲಿ ನಿರತನು, ಎಂತಹ ಪ್ರಸಂಗದಲ್ಲೂ ಕೈಬಿಡದವನು ಆದವನೇ ನಿಜವಾದ ಮಿತ್ರ.

೩೩. ಇಂದ್ರಿಯಾಣಾಮನುತ್ಸರ್ಗೋ(ಽ)[೧]ಮೃತ್ಯುನಾ[೨]ಽಪಿ ವಿಶಿಷ್ಯತೇ ।
ಅತ್ಯರ್ಥಂ ಪುನರುತ್ಸರ್ಗಃ ಸಾದಯೇದ್ ದೈವತಾನ್ಯಪಿ ॥
- ಮ.ಭಾ. (5/39/51)

ಇಂದ್ರಿಯಗಳನ್ನು ಗೆಲ್ಲದಿರುವುದು ಮೃತ್ಯುವಿಗಿಂತಲೂ ಅಪಾಯಕರ; ಅತಿಯಾದ ವಿಷಯಾಸಕ್ತಿ ದೇವತೆಗಳಿಗೂ ಅನರ್ಥಕರವೇ ಸರಿ. (ಇಂದ್ರಿಯಜಯವು ಮೋಕ್ಷಸಂಪಾದನೆಗೆ ಅತ್ಯಗತ್ಯ ಎಂದು ಭಾವ).

೩೪. ಮಾರ್ದವಂ ಸರ್ವಭೂತಾನಾಮನಸೂಯಾ ಕ್ಷಮಾ ಧೃತಿಃ ।
ಆಯುಷ್ಯಾಣಿ ಬುಧಾಃ ಪ್ರಾಹುರ್ಮಿತ್ರಾಣಾಂ ಚಾವಿಮಾನನಾ ॥
- ಮ.ಭಾ. (೫/೩೯/೫೨)

ಮೃದುವರ್ತನೆ, ಯಾರ ಮೇಲೂ ಅಸೂಯೆಪಡದಿರುವುದು, ಕ್ಷಮಾಶೀಲತೆ, ಧೃತಿ ಮತ್ತು ಮಿತ್ರರನ್ನು ಅವಮಾನಿಸದೆ ಇರುವುದು ಇವುಗಳನ್ನು ಆಯುರ್ವೃದ್ಧಿಕರ ಎಂದು ಜ್ಞಾನಿಗಳು ಹೇಳುತ್ತಾರೆ.

೩೫. [೩]ಅಪನೀತಂ ಸುನೀತೇನ ಯೋಽರ್ಥಂ ಪ್ರತ್ಯಾನಿನೀಷತೇ ।
ಮತಿಮಾಸ್ಥಾಯ ಸುದೃಢಾಂ ತದಕಾಪುರುಷವ್ರತಮ್ ॥
- ಮ.ಭಾ. (೫/೩೯/೫೩)

ತನ್ನ ವಸ್ತುವು ಅನ್ಯಾಯದಿಂದ ಅಪಹರಿಸಲ್ಪಟ್ಟರೂ ಅದನ್ನು ಸರಿಯಾದ ಮಾರ್ಗದಿಂದಲೇ ಪುನಃ ಪಡೆದುಕೊಳ್ಳಬೇಕು ಎಂದು ಸುದೃಢವಾದ ಬುದ್ಧಿಯಿಂದ ವರ್ತಿಸುವುದು

---

೧ ಅನುತ್ಸರ್ಗಃ - ವಿಷಯೇಷು ಅಪ್ರೇಷಣಮ್ । -(ವ್ಯಾ)

೨ ಅಮೃತ್ಯುನಾ - ಮೃತ್ಯುರಹಿತಮೋಕ್ಷೇಣ । -(ವ್ಯಾ)

೩ ಅಪನೀತಂ - ಅಪನೀತಂ ಪುರುಷಂ । ಸುನೀತೇನ - ಸುನಯೇನ ಅರ್ಥಂ ಪ್ರತಿ ಪ್ರಯೋಜನಂ ಪ್ರತಿ ಆನಿನೀಷತಿ । -(ವ್ಯಾ)

ಮಹಾಪುರುಷರ ವ್ರತ. (ಕೌರವರು ಕಪಟ ದ್ಯೂತದಿಂದ ಪಾಂಡವರ ಐಶ್ವರ್ಯವನ್ನು ಅಪಹರಿಸಿದ್ದರೂ, ಅದನ್ನು ಕ್ಷತ್ರಿಯೋಚಿತವಾದ ಯುದ್ಧದಿಂದಲೇ ಪಡೆಯಬಯಸುವ ಪಾಂಡವರು ನಿಜಕ್ಕೂ ಮಹಾಪುರುಷರು ಎಂಬ ಸೂಚನೆ ಇಲ್ಲಿದೆ.)

೩೬. ಮಂಗಲಾಲಂಭನಂ ಯೋಗಃ ಶ್ರುತಮುತ್ಥಾನಮಾರ್ಜವಮ್ ।
ಭೂತಿಮೇತಾನಿ ಕುರ್ವಂತಿ ಸತಾಂ ಚಾಭೀಕ್ಷ್ಣದರ್ಶನಮ್ ॥

- ಮ.ಭಾ. (೫/೩೯/೫೬)

(ದಧಿ ದೂರ್ವಾ ಮೊದಲಾದ) ಮಂಗಲಕರ ವಸ್ತುಗಳ ದರ್ಶನ ಸ್ಪರ್ಶನಗಳು, ಯೋಗ (ಉಪಾಯಜ್ಞತೆ), (ಶಾಸ್ತ್ರ) ಶ್ರವಣ, ಉದ್ಯೋಗ (ಯೋಗ್ಯ ಕಾರ್ಯಗಳನ್ನು ಕೈಗೊಳ್ಳುವುದು) ಋಜುತ್ವ (ಮನಸ್ಸು, ಮಾತು ಮತ್ತು ಕೃತಿಗಳಲ್ಲಿ ಸಾತ್ವಿಕ ವರ್ತನೆ) ಮತ್ತು ಸತ್ಪುರುಷರ ವಿಶೇಷದರ್ಶನ - ಇವೆಲ್ಲ ಐಶ್ವರ್ಯಕ್ಕೆ ಸಾಧನವಾಗಿವೆ.

೩೭. ಅನಿರ್ವೇದಃ ಶ್ರಿಯೋ ಮೂಲಂ ಲಾಭಸ್ಯ ಚ ಶುಭಸ್ಯ ಚ ।
ಮಹಾನ್ ಭವತ್ಯನಿರ್ವಿಣ್ಣಃ ಭಯಂ ನ ಮಹದೃಚ್ಛತಿ ॥

- ಮ.ಭಾ. (೫/೩೯/೫೭)

ಆರಂಭಿಸಿದ ಸತ್ಕಾರ್ಯವನ್ನು ಮುಗಿಯುವವರೆಗೂ ಬಿಡದಿರುವ ಉತ್ಸಾಹವು ಸಂಪತ್ತಿಗೂ, ಲಾಭಕ್ಕೂ, ಶುಭಕ್ಕೂ ಮೂಲವಾಗಿದೆ; ನಿರ್ವಿಣ್ಣನಾಗದವನು ಮಹಾಪುರುಷನೆನ್ನಿಸುತ್ತಾನೆ; ಮತ್ತು ಜೀವನದಲ್ಲಿ ಎಂದಿಗೂ ಮಹತ್ತರ ಭಯವನ್ನು ಹೊಂದುವುದೇ ಇಲ್ಲ.

೩೮. ಕ್ಷಮೇದಶಕ್ತಃ ಸರ್ವಸ್ಯ ಶಕ್ತಿಮಾನ್ ಧರ್ಮಕಾರಣಾತ್ ।
ಅರ್ಥಾನರ್ಥೌ ಸಮೌ ಯಸ್ಯ ತಸ್ಯ ನಿತ್ಯಂ ಕ್ಷಮಾ ಹಿತಾ ॥

- ಮ.ಭಾ. (೫/೩೯/೫೯)

ಅಶಕ್ತನಾದವನು (ತಾನು ಅಶಕ್ತನಾಗಿರುವುದರಿಂದಲೇ) ಎಲ್ಲೆಡೆಯೂ ಕ್ಷಮಾಶೀಲನಾಗಿರಬೇಕು; ಶಕ್ತನಾದವನು - ಧರ್ಮವೃದ್ಧಿಯಾಗುತ್ತದೆ ಎಂಬ ಕಾರಣಕ್ಕಾಗಿ ಕ್ಷಮಾಶೀಲನಾಗಿರಬೇಕು; ಅಂತೂ ಒಳಿತು-ಕೆಡುಕುಗಳಲ್ಲಿ ಸಮಬುದ್ಧಿ ಇರುವ ಯಾರಿಗೂ ಕ್ಷಮೆಯೇ ಹಿತಕರವಾದುದು.

೩೯. ಯತ್ಸುಖಂ ಸೇವಮಾನೋಽಪಿ ಧರ್ಮಾರ್ಥಾಭ್ಯಾಂ ನ ಹೀಯತೇ ।[೧]
ಕಾಮಂ ತದುಪಸೇವೇತ ನ ಮೂಢವ್ರತಮಾಚರೇತ್ ॥

- ಮ.ಭಾ. (೫/೩೯/೬೦)

---

೧ ಅನಿಷಿದ್ಧಸುಖತ್ಯಾಗೀ ಪಶುರೇವ ನ ಸಂಶಯಃ ॥ - ಸ್ಮೃತಿ

ಯಾವ ಸುಖವನ್ನು ಅನುಭವಿಸುವುದರಿಂದ ಧರ್ಮ ಮತ್ತು ಅರ್ಥಗಳಿಗೆ ಹಾನಿಯುಂಟಾಗುವುದಿಲ್ಲವೋ ಅಂತಹ ಸುಖವನ್ನು ಅವಶ್ಯ ಅನುಭವಿಸಬಹುದು; ಆದರೆ ಧರ್ಮಾದಿಗಳಿಗೆ ಸಾಧನವಾಗದ, ಮನಸ್ಸಿಗೆ ತೋಚಿದ ಮೂಢ (ನಿಷಿದ್ಧ) ವ್ರತವನ್ನು ಮಾತ್ರ ಎಂದೂ ಆಚರಿಸಕೂಡದು.

**೪೦. ದುಃಖಾರ್ತೇಷು ಪ್ರಮತ್ತೇಷು ನಾಸ್ತಿಕೇಷ್ವಲಸೇಷು ಚ।**
**ನ ಶ್ರೀರ್ವಸತ್ಯದಾಂತೇಷು ಯೇ ಚೋತ್ಸಾಹವಿವರ್ಜಿತಾಃ॥**

**- ಮ.ಭಾ. (೫/೩೯/೬೧)**

ದುಃಖದಿಂದ ನೋಯುವವರಲ್ಲಿ, ಮದ್ಯಪಾನಾದಿಗಳಿಂದ ಉನ್ಮತ್ತರಾದವರಲ್ಲಿ ನಾಸ್ತಿಕರಾದವರಲ್ಲಿ ಸೋಮಾರಿಗಳಲ್ಲಿ ಇಂದ್ರಿಯನಿಗ್ರಹವಿಲ್ಲದಿರುವವರಲ್ಲಿ ಮತ್ತು ಸತ್ಕಾರ್ಯಗಳ ಆಚರಣೆಯಲ್ಲಿ ಉತ್ಸಾಹವಿಲ್ಲದವರಲ್ಲಿ ಸಂಪತ್ತು ಎಂದೂ ನೆಲೆಸುವುದಿಲ್ಲ. (ಇಂತಹ ಅನರ್ಹರಿಗೆ ಸಂಪತ್ತು ಲಭಿಸದು; ಬಂದರೂ ಉಳಿಯದು ಎಂದು ಭಾವ).

**೪೧. ಅಗ್ನಿಹೋತ್ರಫಲಾ ವೇದಾಃ ಶೀಲವೃತ್ತಫಲಂ ಶ್ರುತಮ್[೧]।**
**ರತಿಪುತ್ರಫಲಾ ನಾರೀ ದತ್ತಭುಕ್ತಫಲಂ ಧನಮ್॥**

**- ಮ.ಭಾ. (೫/೩೯/೬೫)**

ಅಗ್ನಿಹೋತ್ರಾದಿಗಳನ್ನು ನಡೆಸಿದರೆ ವೇದಾಧ್ಯಯನ ಮಾಡಿದ್ದು ಸಾರ್ಥಕ, ಸದಾಚಾರ ಮತ್ತು ಒಳ್ಳೆಯ ಶೀಲಗಳು ಬಂದರೆ ಶಾಸ್ತ್ರ ಓದಿದ್ದಕ್ಕೆ ಸಾರ್ಥಕ; ಸುಖ ಮತ್ತು ಸಂತಾನ ಉಂಟಾದರೆ ಪತ್ನಿ ಇದ್ದದ್ದು ಸಾರ್ಥಕ; ಸತ್ಪಾತ್ರರಿಗೆ ದಾನ ಮಾಡಿದರೆ, ಮತ್ತು ಯೋಗ್ಯರೀತಿಯಲ್ಲಿ ತಾನು ಅನುಭವಿಸಿದರೆ ಧನವಿದ್ದುದು ಸಾರ್ಥಕ.

**೪೨. ಅಧರ್ಮೋಪಾರ್ಜಿತೈರರ್ಥೈರ್ಯಃ ಕರೋತ್ಯೌರ್ಧ್ವದೈಹಿಕಮ್[೨]।**
**ನ ಸ ತಸ್ಯ ಫಲಂ ಪ್ರೇತ್ಯ ಭುಂಕ್ತೇಽರ್ಥಸ್ಯ ದುರಾಗಮಾತ್॥**

**- ಮ.ಭಾ. (೫/೩೯/೬೬)**

ಅಧರ್ಮದಿಂದ ಸಂಪಾದಿಸಿದ ದ್ರವ್ಯದಿಂದ ಯಜ್ಞಾದಿ ಪಾರತ್ರಿಕ ಪುಣ್ಯ ಕಾರ್ಯಗಳನ್ನು ಮಾಡುವವನಿಗೆ ಅವನ ಮರಣಾನಂತರ ಯಾವ ಸತ್ಫಲವೂ ದೊರೆಯುವುದಿಲ್ಲ; ಅವನು ಉಪಯೋಗಿಸಿದ ದ್ರವ್ಯ ಅಧರ್ಮದ ಸಂಪಾದನೆಯಾಗಿರುವುದೇ ಇದಕ್ಕೆ ಕಾರಣ.

---

೧ ಸ್ವಜೀವನಶ್ರಾದ್ಧಕೃದ್ಭವಿಷ್ಯದ್ಯತಿವಿಷಯಃ ಇತಿ ಜ್ಞೇಯಮ್।
ಇತ್ಯುಕ್ತೌರ್ಧ್ವದೈಹಿಕಸ್ತು ನಾತ್ರ ಸಂಗತಾರ್ಥಃ॥ -ವ್ಯಾ

೨ ದೇಹಾದೂರ್ಧ್ವಂ ವಿದ್ಯಮಾನಸ್ವರ್ಗಾದಿಫಲಸಾಧನಕರ್ಮ। -ವಾ

೪೩. ಕಾಂತಾರವನದುರ್ಗೇಷು ಕೃಚ್ಛ್ರಾಸ್ವಾಪತ್ಸು ಸಂಭ್ರಮೇ ।
ಉದ್ಯತೇಷು ಚ ಶಸ್ತ್ರೇಷು ನಾಸ್ತಿ ಸತ್ಯ(ತ್ತ್ವ)ವತಾಂ ಭಯಮ್ ॥
- ಮ.ಭಾ. (೫/೩೯/೬೭)

ಕಾಡಿನಲ್ಲಾಗಲೀ, ಕಾಡಿನ ದುರ್ಗಮ ಹಾದಿಯಲ್ಲಾಗಲೀ, ಕಷ್ಟ ಉಂಟು ಮಾಡುವ ಆಪತ್ತುಗಳಲ್ಲಾಗಲೀ, ದುರ್ಭಿಕ್ಷಾದಿಗಳಲ್ಲಾಗಲೀ (ಬಲ ಮತ್ತು ಜ್ಞಾನಗಳನ್ನು ಹೊಂದಿರುವವರಿಗೆ) ಶಸ್ತ್ರಗಳು ಬೀಸಲ್ಪಟ್ಟಾಗಲಾಗಲೀ [1]ಸತ್ವನಿಷ್ಠರಾದವರಿಗೆ ಭಯವು ಇರುವುದಿಲ್ಲ(ಸತ್ವನಿಷ್ಠರಿಗೆ ಯಾವ ಭಯವೂ ಎಂದೂ ಇರುವುದಿಲ್ಲ ಎಂದು ಭಾವ).

೪೪. ಉತ್ಥಾನಂ ಸಂಯಮೋ ದಾಕ್ಷಮಪ್ರಮಾದೋ ಧೃತಿಃ ಸ್ಮೃತಿಃ ।
ಸಮೀಕ್ಷ್ಯ ಚ ಸಮಾರಂಭೋ ವಿದ್ಧಿ ಮೂಲಂ ಭವಸ್ಯ ತು ॥
- ಮ.ಭಾ. (೫/೩೯/೬೮)

ಯೋಗ್ಯಪ್ರಯತ್ನ, ಮನಸ್ಸು ಮೊದಲಾದವುಗಳ ನಿಗ್ರಹ, ಕಾರ್ಯದಕ್ಷತೆ, ಉನ್ಮತ್ತನಾಗದಿರುವುದು, ಧೈರ್ಯ, ಸ್ಮೃತಿ, ಚೆನ್ನಾಗಿ ವಿಚಾರ ಮಾಡಿ ಕಾರ್ಯ ಆರಂಭಿಸುವುದು ಇವುಗಳೆಲ್ಲ ಅಭ್ಯುದಯದ ಖಚಿತ ಸಾಧನಗಳು.

೪೫. ತಪೋ ಬಲಂ ತಾಪಸಾನಾಂ ಬ್ರಹ್ಮ ಬ್ರಹ್ಮವಿದಾಂ ಬಲಮ್ ।
ಹಿಂಸಾ ಬಲಮಸಾಧೂನಾಂ ಕ್ಷಮಾ ಗುಣವತಾಂ ಬಲಮ್ ॥
- ಮ.ಭಾ. (೫/೩೯/೬೯)

ತಪಸ್ವಿಗಳಿಗೆ ತಪಸ್ಸೇ ಬಲ; ವೇದ ಬಲ್ಲವರಿಗೆ ವೇದವೇ ಬಲ; ದುಷ್ಟರಿಗೆ ಹಿಂಸೆಯೇ ಬಲ; ಗುಣವಂತರಿಗೆ ಕ್ಷಮೆಯೇ ಬಲ.(ಜನರು ಕಾರ್ಯಸಾಧನೆಗೆ ಬಳಸುವ ಸಾಮಗ್ರಿ ಅವರವರ ಯೋಗ್ಯತೆಯನ್ನು ತಿಳಿಸಿಕೊಡುತ್ತದೆ ಎಂದೂ ಭಾವ).

೪೬. ಅಷ್ಟಾವೇವಾವ್ರತಘ್ನಾನಿ ಆಪೋ ಮೂಲಂ ಫಲಂ ಪಯಃ ।
ಹವಿರ್ಬ್ರಾಹ್ಮಣಕಾಮ್ಯಾ ಚ ಗುರೋರ್ವಚನಮೌಷದಮ್ ॥
- ಮ.ಭಾ. (೫/೩೯/೭೦)

ನೀರು, ಕಂದಮೂಲಗಳು, ಹಣ್ಣು, ಹಾಲು, ಹವಿಃಶೇಷ, ಬ್ರಾಹ್ಮಣನು ಬಯಸಿದ್ದನ್ನು ಕೊಡುವುದು, ಗುರುಗಳ ಮಾತು ಮತ್ತು ಔಷಧ ಈ ಎಂಟರಿಂದ ವ್ರತಲೋಪವಾಗುವುದಿಲ್ಲ. (ವಿಶೇಷ ಹಿನ್ನಲೆಯಲ್ಲಿ ಇವುಗಳನ್ನು ಅನಿವಾರ್ಯವಾದಾಗ ಅವಶ್ಯಕತೆ ಇದ್ದಷ್ಟು ಮಾತ್ರ ಸ್ವೀಕರಿಸಿದಾಗ ವ್ರತ ಲೋಪವಾಗುವುದಿಲ್ಲ ಎಂದು ಭಾವ.)

೧ ಬಲಜ್ಞಾನಸಮಾಹಾರಃ ಸತ್ತ್ವಮಿತ್ಯಭಿಧೀಯತೇ ॥ - ಶ್ರೀ ಮಧ್ವಾಚಾರ್ಯರು

೪೭. ನ ತತ್ ಪರಸ್ಯ ಸಂದಧ್ಯಾತ್ ಪ್ರತಿಕೂಲಂ ಯದಾತ್ಮನಃ[೧] ।
ಸಂಗ್ರಹೇಣೈಷ ಧರ್ಮಃ ಸ್ಯಾತ್ ಕಾಮಾದನ್ಯಃ ಪ್ರವರ್ತತೇ ॥
- ಮ.ಭಾ. (೫/೩೯/೭೧)

ತನಗೆ ಹಿತಕರವಲ್ಲದ್ದನ್ನು ಬೇರೆಯವರಿಗೆ ಎಂದೂ ಎಸಗಬಾರದು; ಸಂಕ್ಷೇಪವಾಗಿ ಇದೇ ಧರ್ಮದ ಸಾರ; ತನಗೆ ತೋಚಿದ್ದನ್ನು ಮಾಡುವುದು ಮಾತ್ರ ಎಂದೂ ಧರ್ಮವೆನ್ನಿಸಲಾರದು.

೪೮. ಅಕ್ರೋಧೇನ ಜಯೇತ್ ಕ್ರೋಧಮಸಾಧುಂ ಸಾಧುನಾ ಜಯೇತ್ ।
ಜಯೇತ್ ಕದರ್ಯಂ ದಾನೇನ ಜಯೇತ್ ಸತ್ಯೇನ ಚಾನೃತಮ್ ॥
- ಮ.ಭಾ. (5/39/72)

ಕ್ರೋಧವನ್ನು ಕ್ಷಮೆಯಿಂದ ಗೆಲ್ಲಬೇಕು; ದುಷ್ಟನನ್ನು ಸಾಮೋಪಾಯದಿಂದ ಗೆಲ್ಲಬೇಕು; ಕೃಪಣ(ದೀನ)ನನ್ನು ದಾನದಿಂದ ಗೆಲ್ಲಬೇಕು; ಸುಳ್ಳನ್ನು ಸತ್ಯದಿಂದಲೇ ಗೆಲ್ಲಬೇಕು.

೪೯. ಸ್ತ್ರೀಧೂರ್ತಕೇಽಲಸೇ ಭೀರೌ ಚಂಡೇ ಪುರುಷಮಾನಿನಿ ।
ಚೌರೇ ಕೃತಘ್ನೇ ಚಾಶ್ವಾಸೋ ನ ಕಾರ್ಯೋ ನ ಚ ನಾಸ್ತಿಕೇ ॥
- ಮ.ಭಾ. (೫/೩೯/೭೩)

(ಕಾಮುಕ) ಸ್ತ್ರೀಯರಲ್ಲಿ, ವಂಚಕರಲ್ಲಿ, ಸೋಮಾರಿಯಾದವನಲ್ಲಿ, ಹೇಡಿಯಾದವನಲ್ಲಿ ಸ್ವಭಾವತಃ ಕ್ರೂರನಾದವನಲ್ಲಿ, ದುರಭಿಮಾನಿಯಾದವನಲ್ಲಿ, ಕಳ್ಳನಲ್ಲಿ, ಕೃತಘ್ನನಲ್ಲಿ ಮತ್ತು ನಾಸ್ತಿಕನಲ್ಲಿ ಎಂದೂ ವಿಶ್ವಾಸವಿರಿಸಕೂಡದು.

೫೦. ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ಸಂಪ್ರವರ್ಧಂತೇ ಕೀರ್ತಿರಾಯುರ್ಯಶೋ ಬಲಮ್ ॥
- ಮ.ಭಾ. (೫/೩೯/೭೪)

ಹಿರಿಯರಿಗೆ ನಿತ್ಯದಲ್ಲೂ ನಮಸ್ಕರಿಸುವ ಮತ್ತು ಸೇವಿಸುವ ಸ್ವಭಾವವುಳ್ಳವನಿಗೆ ಕೀರ್ತಿ, ಆಯುಷ್ಯ, ಯಶಸ್ಸು ಮತ್ತು ಬಲ ಈ ನಾಲ್ಕೂ ಸತತವಾಗಿ ಹೆಚ್ಚುತ್ತಲೇ ಇರುತ್ತವೆ.

೫೧. ಅತಿಕ್ಲೇಶೇನ ಯೇಽರ್ಥಾಃ ಸ್ಯುರ್ಧರ್ಮಸ್ಯಾತಿಕ್ರಮೇಣ ವಾ ।
ಅರೇರ್ವಾ ಪ್ರಣಿಪಾತೇನ ಮಾ ಸ್ಮ ತೇಷು ಮನಃ ಕೃಥಾಃ ॥
- ಮ.ಭಾ. (೫/೩೯/೭೫)

---

೧ ಸ್ವಾತ್ಮನಃ ಪ್ರತಿಕೂಲಾನಿ ನ ಪರೇಷಾಂ ಸಮಾಚರೇತ್ ॥ - ಮಹಾಭಾರತ

ಅತಿಕ್ಲೇಶದಿಂದಾಗಲೀ, ಧರ್ಮವನ್ನು ಮೀರಿ ನಡೆಯುವುದರಿಂದಾಗಲೀ, ಶತ್ರುಗಳಿಗೆ ಬಾಗಿ ನಡೆಯುವುದರಿಂದಾಗಲೀ ಮಾತ್ರವೇ ಕಾರ್ಯಸಾಧನೆಯಾಗುವುದಿದ್ದಲ್ಲಿ , ಅಂತಹ ಕಾರ್ಯಗಳ ಬಗ್ಗೆ ಮನಸ್ಸನ್ನೇ ಹಾಕಬೇಡ. (ಆ ರೀತಿ ಕಾರ್ಯ ಸಾಧಿಸುವುದಕ್ಕಿಂತ ಬಿಡುವುದೇ ಉತ್ತಮ ಎಂದು ಭಾವ.)

**೫೨. ಅವಿದ್ಯಃ ಪುರುಷಃ ಶೋಚ್ಯಃ ಶೋಚ್ಯಂ ಮೈಥುನಮಪ್ರಜಮ್ ।**
**ನಿರಾಹಾರಾಃ ಪ್ರಜಾಃ ಶೋಚ್ಯಾಃ ಶೋಚ್ಯಂ ರಾಷ್ಟ್ರಮರಾಜಕಮ್ ॥**
**- ಮ.ಭಾ. (೫/೩೯/೭೬)**

ವಿದ್ಯೆಯಿಲ್ಲದ ಮನುಷ್ಯ ಶೋಚ್ಯ; ಸಂತಾನವಿಲ್ಲದ ದಾಂಪತ್ಯ ಶೋಚ್ಯ; ಆಹಾರವಿಲ್ಲದ ಪ್ರಜೆಗಳು ಶೋಚ್ಯರು; ರಾಜನಿಲ್ಲದ ರಾಷ್ಟ್ರವು ಶೋಚ್ಯ. (ಮನುಷ್ಯನಿಗೆ ವಿದ್ಯೆ, ದಾಂಪತ್ಯಕ್ಕೆ ಸಂತಾನ, ಪ್ರಜೆಗಳಿಗೆ ಆಹಾರ ಮತ್ತು ರಾಷ್ಟ್ರಕ್ಕೆ ರಾಜ ಅತ್ಯಗತ್ಯ ಎಂದು ಭಾವ.)

**೫೩. [1]ಅನಾಮ್ನಾಯಮಲಾ ವೇದಾ ಬ್ರಾಹ್ಮಣಸ್ಯಾವ್ರತಂ ಮಲಮ್ ॥**
**ಮಲಂ ಪೃಥಿವ್ಯಾ ಬಾಹ್ಲೀಕಾಃ ಪುರುಷಸ್ಯಾನೃತಂ ಮಲಮ್ ॥**
**ಕೌತುಹಲಮಲಾ ಸಾಧ್ವೀ ವಿಪ್ರವಾಸಮಲಾಃ ಸ್ತ್ರಿಯಃ ।**
**ಸುವರ್ಣಸ್ಯ ಮಲಂ ರೂಪ್ಯಂ ರೂಪ್ಯಸ್ಯಾಪಿ ಮಲಂ ತ್ರಪು ।**
**ಜ್ಞೇಯಂ ತ್ರಪುಮಲಂ ಸೀಸಂ ಸೀಸಸ್ಯಾಪಿ ಮಲಂ ಮಲಮ್[2] ॥**
**- ಮ.ಭಾ. (೫/೩೯/೭೮-೮೦)**

ಅಭ್ಯಾಸ ಮಾಡದಿರುವುದು ವೇದಗಳಿಗೆ ಮಲ; ವ್ರತ ಮಾಡದಿರುವುದು ಬ್ರಾಹ್ಮಣನಿಗೆ ಮಲ; ವಾಹೀ(ಬಾಹ್ಲೀ)ಕದೇಶದ ಜನರು ಭೂಮಿಗೆ ಮಲ; ಪುರುಷನಿಗೆ ಅನೃತವೇ ಮಲ; ಕೆಟ್ಟಕುತೂಹಲ ಪತಿವ್ರತಾ ಸ್ತ್ರೀಗೆ ಮಲ; ಹೆಚ್ಚಿನ ಪ್ರವಾಸ ಸ್ತ್ರೀಯರಿಗೆ ಮಲ; ಬೆಳ್ಳಿಯು ಚಿನ್ನಕ್ಕೆ ಮಲ; ಬೆಳ್ಳಿಗೆ ತವರ ಮಲ; ತವರಕ್ಕೆ ಸೀಸ ಮಲ; ಸೀಸಕ್ಕೆ ಮಲವೇ ಮಲ-ದೋಷ

**೫೪. ನ ಸ್ವಪ್ನೇನ ಜಯೇನ್ನಿದ್ರಾಂ ನ ಕಾಮೇನ ಜಯೇತ್ ಸ್ತ್ರಿಯಃ[3] ।**
**ನೇಂಧನೇನ ಜಯೇದಗ್ನಿಂ ನ ಪಾನೇನ ಸುರಾಂ ಜಯೇತ್ ॥**
**- ಮ.ಭಾ. (೫/೩೯/೮೧)**

ಮಲಗುವುದರಿಂದ ನಿದ್ರೆಯನ್ನು ಗೆಲ್ಲಲು ಸಾಧ್ಯವಿಲ್ಲ. ಉಪಭೋಗದಿಂದ ಸ್ತ್ರೀಯನ್ನು ಜಯಿಸಲು ಸಾಧ್ಯವಿಲ್ಲ. ಇಂಧನಗಳಿಂದ ಅಗ್ನಿಯನ್ನು ಜಯಿಸಲಾಗುವುದಿಲ್ಲ (ಆರಿಸಲು

---

೧ ಮ್ನೈ ಅಭ್ಯಾಸೇ ಇತಿ ಧಾತೋಃ ಅನಾಮ್ನಾಯೋ ಅನಭ್ಯಾಸಃ। - (ವಾ)

೨ ಮಲಂ - ಮಲೊಪಮಂ। ಅಮೇಧ್ಯಂ ವಾ। - (ವಾ)

೩ ತಾಸಾಂ ಕಾಮಬಾಹುಲ್ಯಾತ್। - (ವ್ಯಾ)

ಸಾಧ್ಯವಿಲ್ಲ); ಪಾನ ಮಾಡುವುದರಿಂದ ಮದ್ಯವನ್ನು ಗೆಲ್ಲಲಾಗುವುದಿಲ್ಲ. (ಗೆಲ್ಲಲು ಸಾಧ್ಯವಿಲ್ಲ; ಮಾತ್ರವಲ್ಲದೆ ನಿದ್ರಾದಿಗಳು ಇವುಗಳಿಂದ ಹೆಚ್ಚುತ್ತಲೇ ಹೋಗುತ್ತವೆ ಎಂದು ಭಾವ).

**೫೫. ಯಸ್ಯ ದಾನಜಿತಂ ಮಿತ್ರಂ ಶತ್ರವೋ ಯುಧಿ ನಿರ್ಜಿತಾಃ।**
**ಅನ್ನಪಾನಜಿತಾ ದಾರಾಃ ಸಫಲಂ ತಸ್ಯ ಜೀವಿತಮ್ ॥**

**- ಮ.ಭಾ. (೫/೩೯/೮೨)**

ಯಾವನು ಮಿತ್ರರನ್ನು ದಾನದಿಂದಲೂ, ಶತ್ರುಗಳನ್ನು ಯುದ್ಧದಿಂದಲೂ, ಪತ್ನಿಯನ್ನು ಅನ್ನಪಾನಗಳಿಂದಲೂ ವಶಮಾಡಿಕೊಂಡಿರುವನೋ ಅಂತಹವನ ಜೀವನ ಸಾರ್ಥಕವಾದುದು.

**೫೬. ಸಹಸ್ರಿಣೋಽಪಿ ಜೀವಂತಿ ಜೀವಂತಿ ಶತಿನಸ್ತಥಾ।**
**ಧೃತರಾಷ್ಟ್ರ ವಿಮುಂಚೇಚ್ಛಾಂ ನ ಕಥಂಚಿನ್ನ ಜೀವ್ಯತೇ ॥**

**- ಮ.ಭಾ. (೫/೩೯/೮೩)**

ಸಾವಿರ (ನಾಣ್ಯ) ತರುವವರೂ ಬದುಕಿದ್ದಾರೆ; ನೂರು (ನಾಣ್ಯ) ತರುವವರೂ ಬದುಕಿದ್ದಾರೆ; ಆದ್ದರಿಂದ ಧೃತರಾಷ್ಟ್ರ! ದುರಾಸೆಯನ್ನು ದೂರಮಾಡು; ಯಾರು ತಾನೇ ಇದ್ದದ್ದರಲ್ಲಿ ಬದುಕಲಾರರು? (ಇದ್ದದ್ದರಲ್ಲೇ ಬದುಕಲು ಸಾಧ್ಯವಾದ್ದರಿಂದ ದುರಾಸೆ ಬೇಡ ಎಂದು ಭಾವ. ನೀನು ರಾಜ್ಯ ಕೊಡದೆ ಹೋದಲ್ಲಿ ಪಾಂಡವರು ಬದುಕಲಾರರೆಂಬ ಭ್ರಾಂತಿಯನ್ನು ಸಹ ಬಿಡು ಎಂದು ಅರ್ಥ. ಇದ್ದದ್ದರಲ್ಲೇ ಬದುಕಲು ಸಾಧ್ಯವಿರುವಾಗ ಪರರ ಸ್ವತ್ತಿಗೆ ಆಸೆ ಪಡುವ ಮೂರ್ಖತನ ಬೇಡ ಎಂದೂ ಭಾವ.)

**೫೭. ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ।**
**ನಾಲಮೇಕಸ್ಯ ತತ್ಸರ್ವಮಿತಿ ಪಶ್ಯನ್ನ ಮುಹ್ಯತಿ[1] ॥ - ಮ.ಭಾ. (೫/೩೯/೮೪)**

ಪೃಥ್ವಿಯಲ್ಲಿನ ಎಲ್ಲಾ ಧಾನ್ಯ, ಚಿನ್ನ, ಪಶುಗಳು ಮತ್ತು ಸ್ತ್ರೀಯರು – ಈ ಎಲ್ಲವೂ ಒಬ್ಬನಿಗೆ ಸಾಲದೇ ಹೋಗುವವು (ಮನುಷ್ಯನ ದುರಾಸೆ ಇಂತಹುದು ಎಂದು ಭಾವ. ಇದನ್ನು ಅರ್ಥ ಮಾಡಿಕೊಂಡವನು ಎಂದೂ ದುರಾಸೆಗೆ ಗುರಿಯಾಗದೆ ಯಶಸ್ವಿಯಾಗಿ ಬದುಕುವನು ಎಂದು ಭಾವ).

**೫೮. ಯೋಽಭ್ಯರ್ಚಿತಃ ಸದ್ಭಿರಸಜ್ಜಮಾನಃ**
**ಕರೋತ್ಯರ್ಥಂ ಶಕ್ತಿಮಹಾಪಯಿತ್ವಾ।**

---

೧ ಏಕಸ್ಯ ತತ್ಸರ್ವಂ ತೃಪ್ತಯೇಽಲಂ ನೇತಿ ಪಶ್ಯಂಸ್ತತ್ರ ವಿರಕ್ತಃ ನ ಹಿ ಮುಹ್ಯತಿ ॥ – ವ್ಯಾ

ಕ್ಷಿಪ್ರಂ ಯಶಸ್ತಂ ಸಮುಪೈತಿ ಸಂತ-
ಮಲಂ ಪ್ರಸನ್ನಾ ಹಿ ಸುಖಾಯ ಸಂತಃ ॥

- ಮ.ಭಾ. (೫/೪೦/೧)

ಸತ್ಪುರುಷರು 'ಈ ಕಾರ್ಯವನ್ನು ಮಾಡು' ಎಂದು ಕೇಳಿಕೊಂಡಾಗ, ಯಾವನು ವಿಲಂಬವನ್ನು ಮಾಡದೆ ತನ್ನ ಶಕ್ತಿಗೆ ವಂಚನೆ ಮಾಡಿಕೊಳ್ಳದೆ ಆ ಕಾರ್ಯವನ್ನು ಮಾಡುವನೋ ಅಂತಹ ಸಜ್ಜನನ ಬಳಿ ಯಶಸ್ಸು ಬಹುಬೇಗ ಧಾವಿಸುತ್ತದೆ; ಸತ್ಪುರುಷರು ಪ್ರಸನ್ನರಾದರೆ ಸುಖಪ್ರಾಪ್ತಿಯು ನಿಶ್ಚಿತವೇ ಸರಿ.

೫೯. ಮಹಾಂತಮಪ್ಯರ್ಥಮಧರ್ಮಯುಕ್ತಂ
ಯಃ ಸಂತ್ಯಜತ್ಯನಪಾಕೃಷ್ಟ ಏವ ।
ಸುಖಂ ಸುದುಃಖಾನ್ಯವಮುಚ್ಯ ಶೇತೇ
ಜೀರ್ಣಾಂ ತ್ವಚಂ ಸರ್ಪ ಇವಾವಮುಚ್ಯ ॥ - ಮ.ಭಾ. (೫/೪೦/೨)

ಒಂದು ವಿಷಯ ಎಷ್ಟೇ ಪ್ರಯೋಜನಕಾರಿಯಾಗಿದ್ದರೂ, ಅದು ಅಧರ್ಮದಿಂದ ಕೂಡಿದ್ದರೆ ತಿಳಿದವರು ಬೇಡ ಎಂದು ಹೇಳುವುದಕ್ಕಿಂತ ಮುಂಚಿತವಾಗಿಯೇ ಅದನ್ನು ಯಾವನು ಬಿಟ್ಟುಬಿಡುವನೋ, ಅಂತಹವನು ಜೀರ್ಣವಾದ ಪೊರೆಯನ್ನು ಬಿಟ್ಟ ಸರ್ಪವು ಹೇಗೋ ಹಾಗೆ, ಯಾವ ದುಃಖಕ್ಕೂ ಒಳಗಾಗದೆ ಸುಖವಾಗಿ ನಿದ್ರಿಸುವನು.

೬೦. ಅನೃತೇ ಚ ಸಮುತ್ಕರ್ಷೋ ರಾಜಗಾಮಿ ಚ ಪೈಶುನಮ್ ।
ಗುರೋಶ್ಚಾಲೀಕನಿರ್ಬಂಧಃ ಸಮಾನಿ ಬ್ರಹ್ಮಹತ್ಯಯಾ ॥

- ಮ.ಭಾ. (೫/೪೦/೩)

ಸುಳ್ಳು ಹೇಳುವುದರಲ್ಲೇ ಹೆಚ್ಚಿನ ಆಸಕ್ತಿ, ರಾಜರುಗಳ ಬಳಿಯಲ್ಲಿ ಹೋಗಿ ಒಳ್ಳೆಯವರ ಬಗ್ಗೆ ಚಾಡಿ ಹೇಳುವುದು ಮತ್ತು ಗುರು-ಹಿರಿಯರನ್ನು ಅವರಿಗೆ ಅಪ್ರಿಯವಾದ ಕಾರ್ಯವನ್ನು ಮಾಡಲು ಒತ್ತಾಯಿಸುವುದು – ಈ ಮೂರು ಬ್ರಹ್ಮಹತ್ಯೆಗೆ ಸಮಾನವಾದ ಮಹಾಪಾತಕಗಳು.

೬೧. ಅಸೂಯೈಕಪದಂ ಮೃತ್ಯುರತಿವಾದಃ ಶ್ರಿಯೋ ವಧಃ ।
ಅಶುಶ್ರೂಷಾ ತ್ವರಾ ಶ್ಲಾಘಾ ವಿದ್ಯಾಯಾಃ ಶತ್ರವಸ್ತ್ರಯಃ ॥

- ಮ.ಭಾ. (೫/೪೦/೪)

ಅಸೂಯೆ ಪಡುವುದು ಮೃತ್ಯುವಿಗೆ ಆಹ್ವಾನವಿತ್ತಂತೆಯೇ ಸರಿ; ಶಾಸ್ತ್ರವಿರುದ್ಧವಾದ ಮಾತು (ಮತ್ತು ಪರನಿಂದೆ) ಐಶ್ವರ್ಯವನ್ನೆಲ್ಲ ನಾಶಪಡಿಸುವುದು; ಶ್ರವಣೇಚ್ಛೆ ಇಲ್ಲದಿರುವುದು (ಮತ್ತು ಗುರುಸೇವೆ ಮಾಡದಿರುವುದು), ತ್ವರೆ ಮತ್ತು ಆತ್ಮಪ್ರಶಂಸೆ – ಈ

ಮೂರೂ ವಿದ್ಯಾಸಂಪಾದನೆಗೆ ಅಡ್ಡಿಯಾಗುವ ಮೂರು ಶತ್ರುಗಳು. (ಅಸೂಯೆ ಪಡದಿರುವುದು ಆಯುರ್ವೃದ್ಧಿಗೂ, ಅತಿವಾದ ಮಾಡದಿರುವುದು ಸಂಪದ್ವೃದ್ಧಿಗೂ, ಶುಶ್ರೂಷಾ, ಆತ್ವರಾ ಮತ್ತು ವಿನಯ – ಈ ಮೂರೂ ವಿದ್ಯಾಸಂಪಾದನೆಗೂ ಸಾಧನ ಎಂದು ಭಾವ.)

೬೨. ಆಲಸ್ಯಂ ಮದಮೋಹೌ ಚ ಚಾಪಲಂ ಗೋಷ್ಠಿರೇವ ಚ ।
ಸ್ತಬ್ಧತಾ ಚಾಭಿಮಾನಿತ್ವಂ ತಥಾऽತ್ಯಾಗಿತ್ವಮೇವ ಚ ॥
ಏತೇ ವೈ ಸಪ್ತದೋಷಾಸ್ತು ಸದಾ ವಿದ್ಯಾರ್ಥಿನಾಂ ಮತಾಃ ॥

– ಮ.ಭಾ. (೫/೪೦/೫)

ಆಲಸ್ಯ, ದುರಹಂಕಾರ, ಮೋಹ, ಚಪಲತೆ, ಹರಟೆ, ಅವಿನಯ, ದುರಭಿಮಾನ ಮತ್ತು ಸ್ವಾರ್ಥಪರತೆ – ಈ ಏಳೂ ವಿದ್ಯಾರ್ಥಿಗಳಿಗೆ ಶತ್ರುಗಳು (ಇವೆಲ್ಲ ಇದ್ದವರಿಗೆ ವಿದ್ಯೆ ಬರುವುದಿಲ್ಲ ಎಂದು ಭಾವ.)

೬೩. ಸುಖಾರ್ಥಿನಃ ಕುತೋ ವಿದ್ಯಾ ಕುತೋ ವಿದ್ಯಾರ್ಥಿನಃ ಸುಖಮ್ ।
ಸುಖಾರ್ಥೀ ವಾ ತ್ಯಜೇದ್ವಿದ್ಯಾಂ ವಿದ್ಯಾರ್ಥೀ ವಾ ತ್ಯಜೇತ್ ಸುಖಮ್ ॥

– ಮ.ಭಾ. (೫/೪೦/೬)

ಸುಖಲೋಲುಪನಿಗೆ ವಿದ್ಯೆ ಎಲ್ಲಿಯದು? ವಿದ್ಯೆ ಬಯಸುವವನಿಗೆ ಸುಖವೆಲ್ಲಿಯದು? ಸುಖಾರ್ಥಿಯಾದವನು ವಿದ್ಯೆಯನ್ನು ಕೈಬಿಡಬೇಕು; ವಿದ್ಯಾರ್ಥಿಯಾದವನು ಸುಖವನ್ನಾದರೂ ತ್ಯಜಿಸಬೇಕು (ಸುಖ ಮತ್ತು ವಿದ್ಯೆ ಎರಡೂ ಏಕಕಾಲಕ್ಕೆ ದೊರೆಯಲಾರವು – ಹೆಚ್ಚಿನ ಶ್ರಮ ಪಡದೆ ವಿದ್ಯೆ ಲಭಿಸಲಾರದು – ಎಂದು ಭಾವ).

೬೪. ನಾಗ್ನಿಸ್ತೃಪ್ಯತಿ ಕಾಷ್ಠಾನಾಂ ನಾಪಗಾನಾಂ ಮಹೋದಧಿಃ ।
ನಾಂತಕಃ ಸರ್ವಭೂತಾನಾಂ ನ ಪುಂಸಾಂ ವಾಮಲೋಚನಾ ॥

– ಮ.ಭಾ. (೫/೪೦/೭)

ಎಷ್ಟು ಕಟ್ಟಿಗೆಗಳನ್ನು ಹಾಕಿದರೂ ಅಗ್ನಿಯು ಶಾಂತವಾಗುವುದಿಲ್ಲ, ಎಷ್ಟು ನದಿಗಳು ಸೇರಿದರೂ ಸಮುದ್ರವು ಉಕ್ಕಿ ಹರಿಯುವುದಿಲ್ಲ; ಎಷ್ಟು ಪ್ರಾಣಿಗಳನ್ನು ಕೊಂದರೂ ಮೃತ್ಯುವಿಗೆ ಕೊನೆಯಿಲ್ಲ; ಎಷ್ಟು ಪುರುಷರಾದರೂ ಕಾಮುಕಸ್ತ್ರೀಗೆ ತೃಪ್ತಿ ದೊರಕುವುದಿಲ್ಲ.

೬೫. ಆಶಾ ಧೃತಿಃ ಹಂತಿ ಸಮೃದ್ಧಿಮಂತಕಃ
ಕ್ರೋಧಃ ಶ್ರಿಯಂ ಹಂತಿ ಯಶಃ ಕದರ್ಯತಾ ।
ಅಪಾಲನಂ ಹಂತಿ ಪಶೂಂಶ್ಚ ರಾಜನ್
ಏಕಃ ಕ್ರುದ್ಧೋ ಬ್ರಾಹ್ಮಣೋ ಹಂತಿ ರಾಷ್ಟ್ರಮ್ ॥

– ಮ.ಭಾ. (೫/೪೦/೮)

ದುರಾಸೆಯು ಧೈರ್ಯವನ್ನು ಹಾಳು ಮಾಡುವುದು; ಮೃತ್ಯು ಸಂಪತ್ತನ್ನು ನಾಶ-ಪಡಿಸುವುದು; ಕೋಪವು ಕಾಂತಿಯನ್ನು ಹಾಳು ಮಾಡುವುದು; ಕೃಪಣತೆ (ದೀನತೆ) ಯು ಕೀರ್ತಿಯನ್ನು ನಾಶಪಡಿಸುವುದು; ಪಾಲಿಸದಿರುವಿಕೆಯು ಪಶುಗಳನ್ನು ಕೊಲ್ಲುವುದು; ಆದರೆ ಕೋಪಗೊಂಡ ಒಬ್ಬ ಬ್ರಾಹ್ಮಣ ಸಮಗ್ರ ರಾಷ್ಟ್ರವನ್ನೇ ನಾಶಮಾಡಬಲ್ಲನು. (ಆದುದರಿಂದ ಬ್ರಾಹ್ಮಣನನ್ನು ಕೆಣಕಬಾರದು ಎಂದರ್ಥ.)[೧]

೬೬. ಅಜೋಕ್ಷಾ ಚಂದನಂ ವೀಣಾ ಆದರ್ಶೋ ಮಧುಸರ್ಪಿಷೀ ।
[೨]ವಿಷ[೩]ಮೌದುಂಬರಂ ಶಂಖಂ ಸ್ವರ್ಣನಾಭೋऽಥ ರೋಚನಾ ॥
ಗೃಹೇ ಸ್ಥಾಪಯಿತವ್ಯಾನಿ ಧನ್ಯಾನಿ ಮನುರಬ್ರವೀತ್ ।
ದೇವಬ್ರಾಹ್ಮಣಪೂಜಾರ್ಥಮತಿಥೀನಾಂ ಚ ಭಾರತ ॥

- ಮ.ಭಾ. (೫/೪೦/೧೦,೧೧)

ಆಡು, ಎತ್ತು, ಚಂದನ, ವೀಣೆ, ಕನ್ನಡಿ, ಜೇನು, ತುಪ್ಪ, ವಿಷ, ತಾಮ್ರದ ಪಾತ್ರೆಗಳು, ಶಂಖ, ಚಿನ್ನ, ಕಸ್ತೂರಿ, ಗೋರೋಚನ; ಇಂತಹ ಐಶ್ವರ್ಯಪ್ರಾಪಕವಾದ ಇಷ್ಟು ವಸ್ತುಗಳನ್ನು ಮನೆಯಲ್ಲಿ ದೇವತೆಗಳು, ಬ್ರಾಹ್ಮಣರು ಮತ್ತು ಅತಿಥಿಗಳ ಪೂಜೆಗಾಗಿ ಅವಶ್ಯ ಇರಿಸಿಕೊಂಡಿರಬೇಕೆಂದು ಮನು ಹೇಳಿರುವನು. (ಇಲ್ಲಿ ವಿಷ ಎಂಬುದಕ್ಕೆ ನೀರು, ಶುಂಠಿ ಎಂದೂ ಅರ್ಥ ಉಂಟು; ವಿಷವೆಂಬ ಅರ್ಥವೂ ಇದ್ದು - ಕೆಲವು ಪ್ರಸಂಗಗಳಲ್ಲಿ ಚಿಕಿತ್ಸೆಗೆ ಅವು ಬೇಕಾಗುವುದರಿಂದ ಅದೂ ಅವಶ್ಯ ಇರಬೇಕು, ಎಂದು ಭಾವ)

೬೭. ಇದಂ ಚ ತ್ವಾಂ ಸರ್ವವರಂ ಬ್ರವೀಮಿ
ಪುಣ್ಯಂ ಪದಂ ತಾತ ಮಹಾವಿಶಿಷ್ಟಮ್ ।
ನ ಜಾತು ಕಾಮಾನ್ನ ಭಯಾನ್ನ ಲೋಭಾದ್
ಧರ್ಮಂ ಜಹ್ಯಾಜ್ಜೀವಿತಸ್ಯಾಪಿ ಹೇತೋಃ ॥

- ಮ.ಭಾ. (೫/೪೦/೧೨)

ಸರ್ವಶ್ರೇಷ್ಠವೂ, ಪುಣ್ಯಕರವೂ, ಮಹಾವಿಶಿಷ್ಟವೂ ಆದ ಈ ಮಾತನ್ನು ಹೇಳುವೆ - ಕಾಮದಿಂದಲೇ ಆಗಲಿ, ಭಯದಿಂದಲೇ ಆಗಲಿ, ಲೋಭದ ನಿಮಿತ್ತದಿಂದಲೇ ಆಗಲಿ, ಬದುಕುವ ನಿಮಿತ್ತದಿಂದಲೇ ಆಗಲಿ - ಧರ್ಮವನ್ನು ಮಾತ್ರ ಎಂದೂ ಬಿಡಕೂಡದು. (ಎಲ್ಲಕ್ಕಿಂತಲೂ ಧರ್ಮವು ದೊಡ್ಡದು, ರಕ್ಷಣೆ ದೊರಕುವುದು ಅದನ್ನು ಆಚರಿಸಿದಾಗ ಮಾತ್ರ ಎಂದರ್ಥ).

---

೧ ಶಂಕೇ ಭೃಶಂ ಬ್ರಹ್ಮಕುಲಾವಮಾನಾತ್ ॥ - ಭಾಗವತ

೨ ವಿಷಂ - ಶುಂಠೀತಿ ಕೇಚಿತ್ । ಗರಲಂ ವಾ । ಚರಮಚಿಕಿತ್ಸಾರೂಪತಯಾ ತತ್ಸಂಗ್ರಹಃ । - ವ್ಯಾ

೩. ವಿಷ - ಉದಕಂ ।

೬೮. ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯೇ
ಜೀವೋ ನಿತ್ಯೋ ಹೇ(ಧಾ)ತುರಸ್ಯ ತ್ವನಿತ್ಯಃ।
ತ್ಯಕ್ತ್ವಾಽನಿತ್ಯಂ ಪ್ರತಿತಿಷ್ಠಸ್ವ ನಿತ್ಯೇ[೧]
ಸಂತುಷ್ಯತ್ವಂ ತೋಷಪರೋ ಹಿ ಲಾಭಃ ॥

- ಮ.ಭಾ. (೫/೪೦/೧೩)

ಧರ್ಮವು ನಿತ್ಯವಾದುದು, ಸುಖದುಃಖಗಳು ಅನಿತ್ಯವಾದುವು; ಜೀವನು ನಿತ್ಯನಾದವನು, ಮತ್ತು ಈ ಶರೀರವು ಅನಿತ್ಯವಾದುದು; ಅನಿತ್ಯವಾದ ಸುಖದುಃಖಗಳ ಬಗ್ಗೆ ಚಿಂತಿಸಕೂಡದು; ಅಶಾಶ್ವತವಾದ ಶರೀರದ ಮೇಲೆ ಅತಿಯಾದ ಅಭಿಮಾನವಿರಿಸಿಕೊಳ್ಳಕೂಡದು; ಸದಾ ಸಂತೋಷದಿಂದ ನಿತ್ಯವಾದ ಧರ್ಮದಲ್ಲೇ ನಿರತನಾಗಬೇಕು; ಸಂತೋಷವೇ ಎಲ್ಲಕ್ಕಿಂತ ಹೆಚ್ಚಿನ ಲಾಭವಲ್ಲವೇ.

೬೯. ಮಹಾಬಲಾನ್ ಪಶ್ಯ ಮಹಾನುಭಾವಾನ್
ಪ್ರಶಾಸ್ಯ ಭೂಮಿಂ ಧನಧಾನ್ಯಪೂರ್ಣಾಮ್।
ರಾಜ್ಯಾನಿ ಹಿತ್ವಾ ವಿಪುಲಾಂಶ್ಚ ಭೋಗಾನ್
ಗತಾನ್ ನರೇಂದ್ರಾನ್ ವಶಮಂತಕಸ್ಯ ॥

- ಮ.ಭಾ. (೫/೪೦/೧೪)

ಮಹಾಬಲಿಷ್ಠರೂ, ಮಹಾನುಭಾವರೂ ಆದ ಅನೇಕ ರಾಜರು ಧನಧಾನ್ಯ ಭರಿತವಾದ ಭೂಮಿಯನ್ನು ಆಳಿ, ಅನಂತರ ರಾಜ್ಯಗಳನ್ನೂ ಬಹುತೇರನಾದ ಭೋಗಗಳನ್ನೂ ಇಲ್ಲಿಯೇ ಬಿಟ್ಟು ಮೃತ್ಯುವಶರಾಗಿರುವುದನ್ನು ಗಮನಿಸು. (ಆದ್ದರಿಂದ ಅನಿತ್ಯವಾದ ಧನಧಾನ್ಯಗಳಿಗಾಗಿ ಧರ್ಮವನ್ನು ಕೈಬಿಡುವುದು ಯೋಗ್ಯವಲ್ಲ ಎಂದು ಭಾವ).

೭೦. ಮೃತಂ ಪುತ್ರಂ ದುಃಖಪುಷ್ಟಂ ಮನುಷ್ಯಾ
ಉತ್ಕ್ಷಿಪ್ಯ ರಾಜನ್ ಸ್ವಗೃಹಾನ್ನಿರ್ಹರಂತಿ।
ತಂ ಮುಕ್ತಕೇಶಾಃ ಕರುಣಂ ರುದಂತಿ
ಚಿತಾಮಧ್ಯೇ ಕಾಷ್ಠ ಮಿವ ಕ್ಷಿಪಂತಿ ॥

- ಮ.ಭಾ. (೫/೪೦/೧೫)

ತಾವು ಕಷ್ಟಪಟ್ಟು ಬೆಳೆಸಿದ ತಮ್ಮ ಮಗನು ಮೃತನಾದಾಗ, ಜನರು ಅವನನ್ನೆತ್ತಿಕೊಂಡು ಮನೆಯಿಂದ ಹೊರಕ್ಕೆ ನಡೆಯುತ್ತಾರೆ. ಅವನ ಬಗ್ಗೆ ಮುಕ್ತಕೇಶರಾಗಿ ಪತ್ನಿ ಮೊದಲಾದ ಸ್ತ್ರೀಯರು ರೋದಿಸುತ್ತಾರೆ; ಅವನ ಶರೀರವನ್ನು ಚಿತೆಯ ಮಧ್ಯೆ ಕಟ್ಟಿಗೆಯಂತೆ

೧ ನಿತ್ಯೇ - ಧರ್ಮೇ।

- ವಾ

ಬಿಸುಡಿಬಿಡುತ್ತಾರೆ. (ಆದ್ದರಿಂದ ತನ್ನವರ ಮೇಲೆ ಮಿತಿಮೀರಿ ಅಭಿಮಾನವಿರಿಸಕೂಡದು ಎಂದು ಭಾವ).

**೭೧. ಅನ್ಯೋ ಧನಂ ಪ್ರೇತಗತಸ್ಯ ಭುಂಕ್ತೇ**
**ವಯಾಂಸಿ ಚಾಗ್ನಿಶ್ಚ ಶರೀರಧಾತೂನ್ ।**
**ಏಕಸ್ತು ಜೀವಃ ಸಮುಪೈತ್ಯಮುತ್ರ**
**ಪುಣ್ಯೇನ ಪಾಪೇನ ಚ ವೇಷ್ಯಮಾನಃ ॥ - ಮ.ಭಾ. (೫/೪೦/೧೬)**

ಮೃತನಾದವನ ಧನವನ್ನು ಬೇರಾವನೋ ಅನುಭವಿಸುತ್ತಾನೆ; ಅವನ ಶರೀರದ ಧಾತುಗಳನ್ನು ಪಕ್ಷಿಗಳು ತಿನ್ನುತ್ತವೆ; ಅಗ್ನಿಯು ಸುಟ್ಟು ಹಾಕುತ್ತದೆ. (ಅಗ್ನಿಯಿಂದ ಸುಡದ ಶರೀರದ ಭಾಗಗಳನ್ನು ಪಕ್ಷಿಗಳು ತಿನ್ನುತ್ತವೆ. ಅಥವಾ ದಹನ ಮಾಡುವರೇ ಇಲ್ಲವಾದಾಗ ಇಡೀ ಶರೀರವನ್ನೇ ಪಕ್ಷಿಗಳು ತಿಂದು ಹಾಕುತ್ತವೆ ಎಂದು ಭಾವ.) ಜೀವನು ಒಂಟಿಯಾಗಿ (ಶುಭ ಅಥವಾ ಅಶುಭವಾದ) ಪರಲೋಕಕ್ಕೆ ತೆರಳುತ್ತಾನೆ; ಅವನಿಗೆ ಸುತ್ತಿಕೊಂಡು ಬಿಡದೆ ಹಿಂಬಾಲಿಸುವುದು - ಅವನು ಮಾಡಿದ ಪುಣ್ಯಕರ್ಮ, ಪಾಪಕರ್ಮಗಳು ಮಾತ್ರ. (ಆದ್ದರಿಂದ ಮನುಷ್ಯನು ಪುಣ್ಯಕರ್ಮಗಳನ್ನು ಮಾಡಬೇಕು; ಎಂದೂ ಪಾಪಕರ್ಮಗಳನ್ನು ಮಾಡಕೂಡದು ಎಂದು ಭಾವ.)

**೭೨. ಉತ್ಸೃಜ್ಯ ವಿನಿವರ್ತಂತೇ ಜ್ಞಾತಯಃ ಸುಹೃದಃ ಸುತಾಃ ।**
**ಅಪುಷ್ಪಾನಫಲಾನ್ ವೃಕ್ಷಾನ್ ಯಥಾ ತಾತ ಪತತ್ರಿಣಃ ॥**
**- ಮ.ಭಾ. (೫/೪೦/೧೭)**

ಹಣ್ಣು ಹೂವುಗಳಿಲ್ಲದ ವೃಕ್ಷಗಳನ್ನು ಪಕ್ಷಿಗಳು ತ್ಯಜಿಸಿ ಹೊರಡುವಂತೆ ಮೃತನನ್ನು ಬಿಟ್ಟು ಅವನ ಬಂಧುಗಳು, ಸ್ನೇಹಿತರು, ಪುತ್ರರು, ಮನೆಗೆ ಮರಳುತ್ತಾರೆ.

**೭೩. ಅಗ್ನೌ ಪ್ರಾಸ್ತಂ ತು ಪುರುಷಂ ಕರ್ಮಾನ್ವೇತಿ ಸ್ವಯಂಕೃತಮ್ ।**
**ತಸ್ಮಾತ್ ತು ಪುರುಷೋ ಯತ್ನಾದ್ಧರ್ಮಂ ಸಂಚಿನುಯಾಚ್ಛನೈಃ ॥**
**- ಮ.ಭಾ. (೫/೪೦/೧೮)**

ಬೆಂಕಿಯಲ್ಲಿ ಹಾಕಲ್ಪಟ್ಟ ಪುರುಷನನ್ನು ಅವನು ಮಾಡಿದ ಕರ್ಮವು ತಪ್ಪದೆ ಹಿಂಬಾಲಿಸುವುದು; ಆದ್ದರಿಂದ ಮನುಷ್ಯನು ಪ್ರಯತ್ನಪೂರ್ವಕವಾಗಿ ಸದಾಕಾಲವೂ ಧರ್ಮವನ್ನೇ ಸಂಪಾದಿಸುತ್ತಿರಬೇಕು.

**೭೪. ಅಸ್ಮಾಲ್ಲೋಕಾದೂರ್ಧ್ವಮಮುಷ್ಯ ಚಾಧೋ**
**ಮಹತ್ ತಮಸ್ತಿಷ್ಠತಿ ಹ್ಯಂಧಕಾರಮ್ ।**

ತದ್ ವೈ ಮಹಾಮೋಹನಮಿಂದ್ರಿಯಾಣಾಂ
ಬುದ್ಧ್ಯಸ್ವ ಮಾ ತ್ವಾಂ ಪ್ರಲಭೇತ ರಾಜನ್ ॥
- ಮ.ಭಾ. (೫/೪೦/೧೯)

ಈ ಲೋಕದ ಮೇಲೂ ಕೆಳಗೂ ಅಜ್ಞಾನವೆಂಬ ದೊಡ್ಡ ಅಂಧಕಾರವು ಕವಿದಿದೆ; ಅದು ಇಂದ್ರಿಯಗಳನ್ನೆಲ್ಲ ಎಚ್ಚರ ತಪ್ಪಿಸುವಷ್ಟು ಭಯಂಕರವಾದುದು; ಅದು ನಿನ್ನನ್ನು ಆವರಿಸದಂತೆ, ಎಲೈ ರಾಜ (ಧೃತರಾಷ್ಟ್ರ)ನೇ ! ಎಚ್ಚರ ವಹಿಸು.

೭೫. ಇದಂ ವಚಃ ಶಕ್ಷ್ಯಸಿ ಚೇದ್ಯಥಾವ-
ನ್ನಿಶಮ್ಯ ಸರ್ವಂ ಪ್ರತಿಪತ್ತುಮೇವ ।
ಯಶಃ ಪರಂ ಪ್ರಾಪ್ಸ್ಯಸಿ ಜೀವಲೋಕೇ
ಭಯಂ ನ ಚಾಮುತ್ರ ನ ಚೇಹ ತೇಽಸ್ತಿ ॥
- ಮ.ಭಾ. (೫/೪೦/೨೦)

ನನ್ನ ಈ ಮಾತುಗಳನ್ನು ಕೇಳಿ ಅವುಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅದ-ರಂತೆ ನೀನು ನಡೆಯಬಲ್ಲೆಯಾದರೆ, ಈ ಲೋಕದಲ್ಲಿ ಶ್ರೇಷ್ಠವಾದ ಯಶಸ್ಸನ್ನು ಗಳಿಸುವಿ; ಮತ್ತು ಇಲ್ಲಾಗಲೀ, ಪರಲೋಕದಲ್ಲಾಗಲೀ ನಿನಗೆ ಯಾವುದೇ ಭಯವೂ ಇರುವುದಿಲ್ಲ. (ಭಯರಹಿತ ಜೀವನಕ್ಕೆ ಶಾಸ್ತ್ರವಿಹಿತ ವರ್ತನೆಯೊಂದೇ ಉಪಾಯ ಎಂದು ಭಾವ.)

೭೬. [1]ಆತ್ಮಾ ನದೀ ಭಾರತ ಪುಣ್ಯತೀರ್ಥಾ
ಸತ್ಯೋದಕಾ ಶೀಲತಟಾ(ಧೃತಿಕೂಲಾ)ದಯೋರ್ಮಿಃ ।
ತಸ್ಯಾಂ ಸ್ನಾತಃ ಪೂಯತೇ ಪುಣ್ಯಕರ್ಮಾ
ಪುಣ್ಯೋ ಹ್ಯಾತ್ಮಾ ನಿತ್ಯಮಲೋಭ ಏವ ॥
- ಮ.ಭಾ. (೫/೪೦/೨೧)

ಆತ್ಮ (ಜೀವ, ಮನಸ್ಸು)ನೇ ಒಂದು ನದಿ; ಪುಣ್ಯವೇ ಇದರ ತೀರ್ಥ[2] (ಅವತರಣ ಪ್ರದೇಶ); ಸತ್ಯವೇ ಇದರಲ್ಲಿಯ ಜಲ; ಶೀಲವೇ ಇದರ ತೀರ; ದಯೆಯೇ ಇದರ ಅಲೆಗಳು; ಇಂತಹ ನದಿಯಲ್ಲಿ ಸ್ನಾನ ಮಾಡಿದ ಪುಣ್ಯಶೀಲನು ಪವಿತ್ರನಾಗುತ್ತಾನೆ. ಈ

೧ ಆತ್ಮಾ – ದೇಹಃ ಪುಣ್ಯತೀರ್ಥಾಃ – ಪುಣ್ಯಾನಿ ತೀರ್ಥಾನಿ ಶಾಸ್ತ್ರಾಣಿ ಯಸ್ಯಾಂ ಸಾ । – (ವಾ).

೨ ನನು ತರ್ಹಿ ಸ್ವಭಾವತೋ ಶುದ್ಧೋಽಪ್ಯಾತ್ಮಾ ಉಕ್ತಸ್ನಾನೇನ ಪೂಯತೇ ಕಿಂ, ಇತ್ಯತೋ ವಕ್ತಿ – ಪುಣ್ಯ ಇತಿ – ಹಿ – ಯಸ್ಮಾತ್ ಆತ್ಮಾ ನಿತ್ಯಂ ಪುಣ್ಯಂ ತದ್ವತ್ ಪವಿತ್ರಮ್ । ಅಲೋಭಃ ನಿತ್ಯ ಸ್ವಭಾವತೋ ವಿಷಯಾಭಿಕಾಂಕ್ಷಾರಹಿತಃ । ಏವ ಸ್ವತಃ ಶುದ್ಧಸ್ಯಾಪಿ ಮನೋದೋಷೇಣ ದುಷ್ಟಸ್ಯ (ಉಕ್ತಸ್ನಾನ) ಕರ್ಮಣಾ ಶುದ್ಧ್ಯುಪಚಾರ ಇತಿ ಭಾವಃ ॥ – ವ್ಯಾ.

ಆತ್ಮನು ಸ್ವರೂಪತಃ ಪುಣ್ಯರೂಪನೂ, ವಿಷಯಾಕಾಂಕ್ಷಾರಹಿತನೂ ಆಗಿರುವನು; ಇವನಿಗೆ ಮನೋದೋಷದಿಂದ ಉಂಟಾದ ಮಾಲಿನ್ಯವು ಆತ್ಮನದೀಸ್ನಾನದಿಂದ ಪರಿಹಾರವಾಗುವುದು ಎಂದರ್ಥ.

೭೭. ಕಾಮಕ್ರೋಧಗ್ರಾಹವತೀಂ ಪಂಚೇಂದ್ರಿಯಜಲಾಂ ನದೀಮ್ ।
ನಾವಂ ಧೃತಿಮಯೀಂ ಕೃತ್ವಾ ಜನ್ಮದುರ್ಗಾಣಿ ಸಂತರ ॥

- ಮ.ಭಾ. (೫/೪೦/೨೨)

ಕಾಮಕ್ರೋಧಗಳೇ ಮೇಲೆ ಹೇಳಿದ ನದಿಯಲ್ಲಿನ ತಿಮಿಂಗಿಲಗಳು (ಮೊಸಳೆಗಳು); ಪಂಚ ಜ್ಞಾನೇಂದ್ರಿಯಗಳೇ ಈ ನದಿಯಲ್ಲಿನ ನೀರು; ಧೈರ್ಯವೆಂಬ ನಾವೆಯನ್ನು ಏರಿ (ಪುನಃ ಪುನಃ ಹುಟ್ಟುವುದು) ಈ ನದಿಯ ದುರ್ಗಮ ಪ್ರವಾಹವನ್ನು ದಾಟಬೇಕು. (ತತ್ತ್ವಜ್ಞಾನದಾರ್ಢ್ಯವೇ ಇದನ್ನು ದಾಟುವ ಸಾಧನ ಎಂದು ಭಾವ).

೭೮. ಯಸ್ತು ಪೂರ್ವಕೃತಂ ಪಾಪಮವಿಮೃಶ್ಯಾನುವರ್ತತೇ ।
ಅಗಾಧಪಂಕೇ ದುರ್ಮೇಧಾ ವಿಷಮೇ ವಿನಿಪಾತ್ಯತೇ ॥

- ಮ.ಭಾ. (೫/೩೯/೩೫)

ತಾನು ಹಿಂದೆ ಮಾಡಿದ ಪಾಪವನ್ನು ವಿಮರ್ಶಿಸದೆ ನಡೆದುಕೊಳ್ಳುವನೋ, ಅಂತಹ ಅವಿವೇಕಿಯು ಆಳವಾದ ಕೆಸರಿನಿಂದ ಕೂಡಿದ ಸಂಕಟಕ್ಕೆ ಒಳಗಾಗಿ ನಾಶಕ್ಕೆ ಗುರಿಯಾಗುವನು.

೭೯. ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥

ಕುಲದ ಒಳಿತಿಗಾಗಿ ಒಬ್ಬನನ್ನು ತೊರೆಯಬೇಕು; ಗ್ರಾಮದ ಹಿತಕ್ಕಾಗಿ ಕುಲವನ್ನು ತ್ಯಜಿಸಬೇಕು; ದೇಶದ ಒಳಿತಿಗಾಗಿ ಗ್ರಾಮವನ್ನೂ ತೊರೆಯಬೇಕು; ಆತ್ಮರಕ್ಷಣೆಗಾಗಿ ಭೂಮಿಯನ್ನೇ ತೊರೆಯಬೇಕು (ಭಗವತ್ಪ್ರೀತಿಗಾಗಿ ಸಕಲವನ್ನೂ ತೊರೆಯಬೇಕು ಎಂದರ್ಥ).

೮೦. ಏಕಂ ವಿಷರಸೋ ಹಂತಿ ಶಸ್ತ್ರೇಣೈಕಶ್ಚ ವಧ್ಯತೇ ।
ಸರಾಷ್ಟ್ರಂ ಸಪ್ರಜಂ ಹಂತಿ ರಾಜಾನಾಂ ಮಂತ್ರವಿಪ್ಲವಃ ॥

- ಮ.ಭಾ. (೫/೩೩/೪೫)

ವಿಷದ ಪ್ರಭಾವ ಒಬ್ಬನನ್ನು ಕೊಲ್ಲುವುದು; ಶಸ್ತ್ರದಿಂದ ಸಹ ಒಬ್ಬನನ್ನು ಕೊಲ್ಲಬಹುದು. ಆದರೆ, ರಾಜ ಮಾಡುವ ಮಂತ್ರಾಲೋಚನೆಯ ತಪ್ಪು ಇಡೀ ರಾಷ್ಟ್ರವನ್ನು ಪ್ರಜೆಗಳ ಸಮೇತ ನಾಶಮಾಡುವುದು.

೮೧. ಏಕಃ ಸ್ವಾದು ನ ಭುಂಜೀತ ಏಕಶ್ಚಾರ್ಥಾನ್ ನ ಚಿಂತಯೇತ್ ।
ಏಕೋ ನ ಗಚ್ಛೇದಧ್ವಾನಂ ನೈಕಃ ಸುಪ್ತೇಷು ಜಾಗೃಯಾತ್ ॥

– ಮ.ಭಾ.(೫/೩೩/೪೬)

ರುಚಿಯಾದ ವಸ್ತುವನ್ನು ಒಬ್ಬನೇ ತಿನ್ನಕೂಡದು; ಮುಖ್ಯ ವಿಷಯಗಳ ಬಗ್ಗೆ ಒಬ್ಬನೇ ನಿರ್ಧಾರ ತೆಗೆದುಕೊಳ್ಳಕೂಡದು. ಒಂಟಿಯಾಗಿ ಪ್ರಯಾಣ ಮಾಡಕೂಡದು; ಇತರರು ಮಲಗಿದಾಗ ಒಬ್ಬನೇ ಎದ್ದಿರಕೂಡದು.

೮೨. ಏಕಃ ಕ್ಷಮವತಾಂ ದೋಷೋ ದ್ವಿತೀಯೋ ನೋಪಪದ್ಯತೇ ।
ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ॥

– ಮ.ಭಾ. (೫/೩೩/೪೮)

ಕ್ಷಮೆಯಿಂದ ಕೂಡಿರುವವನನ್ನು ಜನ ಕೈಲಾಗದವನು ಎಂದು ತಪ್ಪು ತಿಳಿಯುವರು; ಈ ಒಂದು ದೋಷವನ್ನು ಹೊರತುಪಡಿಸಿದರೆ, ಕ್ಷಮಾಶೀಲನಿಗೆ ಬೇರಾವ ದೋಷವೂ ಇರುವುದಿಲ್ಲ.

೮೩. ಏಕೋ ಧರ್ಮಃ ಪರಂ ಶ್ರೇಯಃ ಕ್ಷಮೈಕಾ ಶಾಂತಿರುತ್ತಮಾ ।
ವಿದ್ಯೈಕಾ ಪರಮಾ ತೃಪ್ತಿರಹಿಂಸೈಕಾ ಸುಖಾವಹಾ ॥

– ಮ.ಭಾ. (೫/೩೩/೫೨)

ಧರ್ಮವೊಂದೇ ಶ್ರೇಷ್ಠವಾದ ಶ್ರೇಯಃಸಾಧನ; ಕ್ಷಮೆಯೊಂದೇ ಉತ್ತಮ ಶಾಂತಿಗೆ ಸಾಧನ; ವಿದ್ಯೆಯೊಂದೇ ಅತಿ ಹೆಚ್ಚಿನ ತೃಪ್ತಿ ಕೊಡುವ ವಸ್ತು; ಸುಖ ನೀಡುವುದು ಅಹಿಂಸೆಯೊಂದೇ.

೮೪. ದ್ವಾವಿಮೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾನಿವ ।
ರಾಜಾನಾಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥

– ಮ.ಭಾ. (೫/೩೩/೫೩)

ಹಾವು ಇಲಿಗಳನ್ನು ನುಂಗುವಂತೆ ಭೂಮಿಯು ಇಬ್ಬರನ್ನೂ ನುಂಗಿ ಹಾಕುವುದು; ಹೋರಾಟ ಮಾಡದ ರಾಜನನ್ನು ಹಾಗೂ ಪ್ರವಾಸ ಕೈಗೊಳ್ಳದ ಬ್ರಾಹ್ಮಣನನ್ನು.

೮೫. ಪೃಥಿವ್ಯಾಂ ಸಾಗರಾಂತಾಯಾಂ ದ್ವಾವಿಮೌ ಪುರುಷಾಧಮೌ ।
ಗೃಹಸ್ಥಶ್ಚ ನಿರಾರಂಭಃ ಸಾರಂಭಶ್ಚೈವ ಭಿಕ್ಷುಕಃ ॥

– ಮ.ಭಾ. (೫/೩೩/೫೪)

ಸಾಗರದವರೆಗಿನ ಭೂಮಿಯಲ್ಲಿ ಕೀಳು ಮನುಷ್ಯರೆಂದರೆ ಇಬ್ಬರೇ – ಒಬ್ಬ ಉದ್ಯೋಗ ತೊರೆಯುವ ಗೃಹಸ್ಥ ಇನ್ನೊಬ್ಬ ಉದ್ಯೋಗಕ್ಕಿಳಿಯುವ ಸನ್ಯಾಸಿ.

೮೬. ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರಪರಿಶೋಷಿಣೌ ।
ಯಶ್ಚಾಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥

- ಮ.ಭಾ. (೫/೩೩/೪೬)

ಬಹಳವಾಗಿ ದೇಹಶೋಷಣೆ ಮಾಡಿಕೊಳ್ಳುವ ತೀಕ್ಷ್ಣ ಕಂಟಕರು ಇಬ್ಬರೇ - ಒಬ್ಬ ಬಯಕೆಗಳನ್ನು ಹೊಂದಿದ ದರಿದ್ರ; ಇನ್ನೊಬ್ಬ ಕೈಲಾಗದೇ ಕೋಪಗೊಳ್ಳುವ ವ್ಯಕ್ತಿ.

೮೭. ದ್ವಾವಿಮೌ ಪುರುಷೌ ರಾಜನ್ ಸ್ವರ್ಗಸ್ಯೋಪರಿ ತಿಷ್ಠತಃ ।
ಪ್ರಭುಶ್ಚ ಕ್ಷಮಯಾ ಯುಕ್ತೋ ದರಿದ್ರಶ್ಚ ಪ್ರದಾನವಾನ್ ॥

- ಮ.ಭಾ. (೫/೩೩/೫೯)

ಸ್ವರ್ಗವನ್ನು ಮೀರಿ ನಿಲ್ಲುವ ಪುರುಷರು ಇಬ್ಬರು – ಒಬ್ಬ ಕ್ಷಮೆಯಿಂದ ಕೂಡಿದ ರಾಜ; ಇನ್ನೊಬ್ಬ ದಾನ ಮಾಡುವ ಸ್ವಭಾವದ ಬಡವ.

೮೮. ದ್ವಾವಂಭಸಿ ನಿವೇಷ್ಟವ್ಯೌ ಗಲೇ ಬದ್ಧ್ವಾ ದೃಢಾಂ ಶಿಲಾಮ್ ।
ಧನವಂತಮದಾತಾರಂ ದರಿದ್ರಂ ಚಾತಪಸ್ವಿನಮ್ ॥

- ಮ.ಭಾ. (೫/೩೩/೬೦)

ಇವರಿಬ್ಬರನ್ನು ಕತ್ತಿಗೆ ದೊಡ್ಡ ಕಲ್ಲನ್ನು ಬಿಗಿದು ನೀರಿನಲ್ಲಿ ಬಿಸಾಡಬೇಕು – ಒಬ್ಬ ದುಡ್ಡಿದ್ದೂ ದಾನ ಮಾಡದವ; ಇನ್ನೊಬ್ಬ ದರಿದ್ರನಾಗಿದ್ದೂ ತಪಸ್ಸು ಮಾಡದವ.

೮೯. ಭಕ್ತಂ ಚ ಭಜಮಾನಂ ಚ ತವಾಸ್ಮೀತಿ ಚ ವಾದಿನಮ್ ।
ತ್ರೀನೇತಾನ್ ಶರಣಂ ಪ್ರಾಪ್ತಾನ್ ವಿಷಮೇಽಪಿ ನ ಸಂತ್ಯಜೇತ್ ॥

- ಮ.ಭಾ. (೫/೩೩/೬೮)

ಭಕ್ತ, ಸೇವಕ ಹಾಗೂ ನಾನು ನಿನ್ನವನು ಎಂದು ಶರಣು ಬಂದವ – ಹೀಗೆ ಶರಣು ಹೊಕ್ಕ ಈ ಮೂವರನ್ನು ಎಂತಹ ಸಂಕಟ ಸಮಯದಲ್ಲೂ ಕೈ ಬಿಡಕೂಡದು.

★★★★★

ಸಮರ್ಪಿತಂ ಮಯಾ ಭವೇತ್ ಸುಮಧ್ವಸೂತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

॥ ಶ್ರೀಕೃಷ್ಣಾರ್ಪಣಮಸ್ತು ॥

## LIST OF MP3s and DVDs

| | |
|---|---|
| 01. Bhagavatha (proshtapadi) | Rs. 100 – 26 hrs |
| 02. Sreenivasakalyana | Rs. 50 – 12 hrs |
| 03. Ramayana | Rs. 50 – 18 hrs |
| 04. Sundarakanda | Rs. 50 – 16 hrs |
| 05. Mahabarata – Arjuna &Yudishtira patra | Rs. 60 – 16 hrs |
| 06. Mahabarata – Karna patra | Rs. 60 – 10 hrs |
| 07. Mahabarata – Bheeshma & Vidura Patra | Rs. 60 - 18 hrs. |
| 08. Ekadashi–Devaru – Upanayana – Gayathri – LakshmiShobhane – Raghavendra Mangalashtaka | Rs. 50 – 8 hrs |
| 09. Sumadhwavijaya | Rs. 50 - 18 hrs |
| 10. Chaturmasa – Dhatrihavana | Rs. 20 – 8 hrs |
| 11. Dwadashastora (pata) | Rs. 50 – 15 hrs |
| 12. Sadacharasmruthi | Rs. 20 – 3 hrs |
| 13. Harikathamruthasara (1, 2 Sandhi) | Rs. 50 – 20 hrs |
| 14. Harivamsha | Rs. 50 – 10 hrs |
| 15. Harivayustuti | Rs. 100 – 25 hrs |
| 16. Vishnupurana | Rs. 50 – 8 hrs |
| 17. Geeta Mahatme | Rs. 50 – 15 hrs |
| 18. Madhwa yathigalu & Haridasaru | Rs. 50 – 15 hrs |
| 19. Madhwa for Youth (workshop discourses) | Rs. 50 – 18 hrs |
| 20. Sarvamoola – Paata | Rs.200 – 40 hrs. |
| 21. Mahabharatha Thathparya Nirnaya | Rs. 150 – 40 hrs. |
| 22. Prathahsankalpa Gadya | Rs. 25 – 3 hrs. |
| 22. Rugminisha Vijaya | Rs. 50 |
| 23. Tattva Prakashika | Rs. 300 |
| 24. Bhagavata Mahatme | Rs. 50 |
| 25. Chandogyopanishad | Rs. 100 |
| 26. Upanishad Paatha | Rs. 250 |
| 27. Dashaprakarana Granthagalu | Rs. 200 |
| 28. Madhvasiddantada Prameyagalu | Rs. 70 |

## DVD (can play only in DVD players)

| | |
|---|---|
| 1. Samagra Bhagavatha | Rs. 1,000 – 4 DVD set – 450 hrs |
| 2. Mahabharatha | Rs. 400 - 150 hrs |
| 3. Bhagavadgeete | Rs. 600 - 3 DVD set – 225 hrs |
| 4. Bhagavata Saroddhara | Rs. 150-70hrs-1DVD set |
| 5. Samagra Bhagavata | Rs. 1,500 – 10CD set – 450 hrs |
| 6. Vishnutattvanirnaya | Rs. 300 |

೮೬. ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರಪರಿಶೋಷಿಣೌ ।
ಯಶ್ಚಾಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥
- ಮ.ಭಾ. (೫/೩೩/೪೬)

ಬಹಳವಾಗಿ ದೇಹಶೋಷಣೆ ಮಾಡಿಕೊಳ್ಳುವ ತೀಕ್ಷ್ಣ ಕಂಟಕರು ಇಬ್ಬರೇ - ಒಬ್ಬ ಬಯಕೆಗಳನ್ನು ಹೊಂದಿದ ದರಿದ್ರ; ಇನ್ನೊಬ್ಬ ಕೈಲಾಗದೇ ಕೋಪಗೊಳ್ಳುವ ವ್ಯಕ್ತಿ.

೮೭. ದ್ವಾವಿಮೌ ಪುರುಷೌ ರಾಜನ್ ಸ್ವರ್ಗಸ್ಯೋಪರಿ ತಿಷ್ಠತಃ ।
ಪ್ರಭುಶ್ಚ ಕ್ಷಮಯಾ ಯುಕ್ತೋ ದರಿದ್ರಶ್ಚ ಪ್ರದಾನವಾನ್ ॥
- ಮ.ಭಾ. (೫/೩೩/೫೯)

ಸ್ವರ್ಗವನ್ನು ಮೀರಿ ನಿಲ್ಲುವ ಪುರುಷರು ಇಬ್ಬರು – ಒಬ್ಬ ಕ್ಷಮೆಯಿಂದ ಕೂಡಿದ ರಾಜ; ಇನ್ನೊಬ್ಬ ದಾನ ಮಾಡುವ ಸ್ವಭಾವದ ಬಡವ.

೮೮. ದ್ವಾವಂಭಸಿ ನಿವೇಷ್ಟವ್ಯೌ ಗಲೇ ಬದ್ಧ್ವಾದೃಢಾಂ ಶಿಲಾಮ್ ।
ಧನವಂತಮದಾತಾರಂ ದರಿದ್ರಂ ಚಾತಪಸ್ವಿನಮ್ ॥
- ಮ.ಭಾ. (೫/೩೩/೬೦)

ಇವರಿಬ್ಬರನ್ನು ಕತ್ತಿಗೆ ದೊಡ್ಡ ಕಲ್ಲನ್ನು ಬಿಗಿದು ನೀರಿನಲ್ಲಿ ಬಿಸಾಡಬೇಕು – ಒಬ್ಬ ದುಡ್ಡಿದ್ದೂ ದಾನ ಮಾಡದವ; ಇನ್ನೊಬ್ಬ ದರಿದ್ರನಾಗಿದ್ದೂ ತಪಸ್ಸು ಮಾಡದವ.

೮೯. ಭಕ್ತಂ ಚ ಭಜಮಾನಂ ಚ ತವಾಸ್ಮೀತಿ ಚ ವಾದಿನಮ್ ।
ತ್ರೀನೇತಾನ್ ಶರಣಂ ಪ್ರಾಪ್ತಾನ್ ವಿಷಮೇಪಿ ನ ಸಂತ್ಯಜೇತ್ ॥
- ಮ.ಭಾ. (೫/೩೩/೬೮)

ಭಕ್ತ, ಸೇವಕ ಹಾಗೂ ನಾನು ನಿನ್ನವನು ಎಂದು ಶರಣು ಬಂದವ – ಹೀಗೆ ಶರಣು ಹೊಕ್ಕ ಈ ಮೂವರನ್ನು ಎಂತಹ ಸಂಕಟ ಸಮಯದಲ್ಲೂ ಕೈ ಬಿಡಕೂಡದು.

★★★★★

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

॥ ಶ್ರೀಕೃಷ್ಣಾರ್ಪಣಮಸ್ತು ॥

## LIST OF MP3s and DVDs

| | | |
|---|---|---|
| 01. | Bhagavatha (proshtapadi) | Rs. 100 – 26 hrs |
| 02. | Sreenivasakalyana | Rs. 50 – 12 hrs |
| 03. | Ramayana | Rs. 50 – 18 hrs |
| 04. | Sundarakanda | Rs. 50 – 16 hrs |
| 05. | Mahabarata – Arjuna &Yudishtira patra | Rs. 60 – 16 hrs |
| 06. | Mahabarata – Karna patra | Rs. 60 – 10 hrs |
| 07. | Mahabarata – Bheeshma & Vidura Patra | Rs. 60 - 18 hrs. |
| 08. | Ekadashi–Devaru – Upanayana – Gayathri – LakshmiShobhane – Raghavendra Mangalashtaka | Rs. 50 – 8 hrs |
| 09. | Sumadhwavijaya | Rs. 50 - 18 hrs |
| 10. | Chaturmasa – Dhatrihavana | Rs. 20 – 8 hrs |
| 11. | Dwadashastora (pata) | Rs. 50 – 15 hrs |
| 12. | Sadacharasmruthi | Rs. 20 – 3 hrs |
| 13. | Harikathamruthasara (1, 2 Sandhi) | Rs. 50 – 20 hrs |
| 14. | Harivamsha | Rs. 50 – 10 hrs |
| 15. | Harivayustuti | Rs. 100 – 25 hrs |
| 16. | Vishnupurana | Rs. 50 – 8 hrs |
| 17. | Geeta Mahatme | Rs. 50 – 15 hrs |
| 18. | Madhwa yathigalu & Haridasaru | Rs. 50 – 15 hrs |
| 19. | Madhwa for Youth (workshop discourses) | Rs. 50 – 18 hrs |
| 20. | Sarvamoola – Paata | Rs.200 – 40 hrs. |
| 21. | Mahabharatha Thathparya Nirnaya | Rs. 150 – 40 hrs. |
| 22. | Prathahsankalpa Gadya | Rs. 25 – 3 hrs. |
| 22. | Rugminisha Vijaya | Rs. 50 |
| 23. | Tattva Prakashika | Rs. 300 |
| 24. | Bhagavata Mahatme | Rs. 50 |
| 25. | Chandogyopanishad | Rs. 100 |
| 26. | Upanishad Paatha | Rs. 250 |
| 27. | Dashaprakarana Granthagalu | Rs. 200 |
| 28. | Madhvasiddantada Prameyagalu | Rs. 70 |

### DVD (can play only in DVD players)

| | | |
|---|---|---|
| 1. | Samagra Bhagavatha | Rs. 1,000 – 4 DVD set – 450 hrs |
| 2. | Mahabharatha | Rs. 400 - 150 hrs |
| 3. | Bhagavadgeete | Rs. 600 - 3 DVD set – 225 hrs |
| 4. | Bhagavata Saroddhara | Rs. 150-70hrs-1DVD set |
| 5. | Samagra Bhagavata | Rs. 1,500 – 10CD set – 450 hrs |
| 6. | Vishnutattvanirnaya | Rs. 300 |